# ಹೈದರಾಬಾದ್ ಕರ್ನಾಟಕದ ಜನಪದ ಕಥಾ ಸಾಹಿತ್ಯದಲ್ಲಿ ಗಂಡು-ಹೆಣ್ಣಿನ ಸಂಬಂಧ

ಕನ್ನಡ ವಿಶ್ವವಿದ್ಯಾಲಯ, ಹಂಪಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ಜೆ.ಎಂ. ಶಿಲ್ಪಾ



ಮಾರ್ಗದರ್ಶಕರು
ಡಾ. ವೆಂಕಟೇಶ ಇಂದ್ವಾಡಿ
ಸಹಪ್ರಾಧ್ಯಾಪಕರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಹೈದರಾಬಾದ್ ಕರ್ನಾಟಕದ ಜನಪದ ಕಥಾಸಾಹಿತ್ಯದಲ್ಲಿ ಗಂಡು-ಹೆಣ್ಣಿನ ಸಂಬಂಧ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ



ಸಂಶೋಧಕರು
ಜೆ.ಎಂ. ಶಿಲ್ಪಾ

ಮಾರ್ಗದರ್ಶಕರು
ಡಾ. ವೆಂಕಟೇಶ ಇಂದ್ವಾಡಿ
ಸಹಪ್ರಾಧ್ಯಾಪಕರು



ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಜೆ.ಎಂ. ಶಿಲ್ಪಾ** ಅವರು **"ಹೈದರಾಬಾದ್ ಕರ್ನಾಟಕದ ಜನಪದ ಕಥಾಸಾಹಿತ್ಯದಲ್ಲಿ ಗಂಡು-ಹೆಣ್ಣಿನ ಸಂಬಂಧ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : 17-5-16
ಸ್ಥಳ : ವಿದ್ಯಾರಣ್ಯ

**(ಡಾ. ವೆಂಕಟೇಶ ಇಂದ್ವಾಡಿ)**
ಸಹಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

**"ಹೈದರಾಬಾದ್ ಕರ್ನಾಟಕದ ಜನಪದ ಕಥಾಸಾಹಿತ್ಯದಲ್ಲಿ ಗಂಡು-ಹೆಣ್ಣಿನ ಸಂಬಂಧ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದ ಸಹಪ್ರಾಧ್ಯಾಪಕರಾದ **ಡಾ. ವೆಂಕಟೇಶ ಇಂದ್ವಾಡಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

J.M. [signature]

ದಿನಾಂಕ : 17-5-16
ಸ್ಥಳ : ವಿದ್ಯಾರಣ್ಯ

**(ಜೆ.ಎಂ. ಶಿಲ್ಪಾ)**
ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನಗಳು

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಮಹತ್ವ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ವಿಧಾನಗಳು

೧.೫. ಇದುವರೆಗಿನ ಅಧ್ಯಯನಗಳ ತಾತ್ವಿಕ ಸಮೀಕ್ಷೆ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನಗಳು

**ಕ**ರ್ನಾಟಕದಲ್ಲಿ ಜಾನಪದ ಅಧ್ಯಯನದ ಬಗ್ಗೆ ಹೊಸ ಆಸಕ್ತಿ-ಉತ್ಸಾಹಗಳು ಮೂಡಿಬರುತ್ತಿರುವುದು ಗಮನಾರ್ಹ ಸಂಗತಿಯಾಗಿದೆ. ಶಾಸ್ತ್ರೀಯ ನೆಲೆಯಲ್ಲಿ ಜಾನಪದ ಸಂಗ್ರಹ, ಸಂಶೋಧನೆಗಳು ನಡೆಯುತ್ತಿವೆ. ಅಂತಹ ಕಾರ್ಯ ಕರ್ನಾಟಕದಲ್ಲಿ ಕಳೆದ ಶತಮಾನದಿಂದಲೇ ಆರಂಭವಾದರೂ ಗೀತೆ ಮತ್ತು ಗಾದೆಗಳಿಗೆ ಸಂಬಂಧಿಸಿದಂತೆ ಮಾತ್ರ ಆ ಕಾರ್ಯ ತಕ್ಕಮಟ್ಟಿಗೆ ಆಗಿದೆ. ಜನಪದ ಕತೆಗಳ ಸಂಗ್ರಹ ಕಾರ್ಯದಲ್ಲಿ ಬೆರಳೆಣಿಕೆಯ ಜಾನಪದ ವಿದ್ವಾಂಸರು ಸಂಗ್ರಹ ಕಾರ್ಯಕ್ಕೆ ಕೈ ಹಾಕಿದ್ದಾರೆ. ಮತ್ತೆ ಯಾವ ಜನಪದ ಆಸಕ್ತರು ಆಸಕ್ತಿ ತೋರಿದಂತೆ ಕಾಣುತ್ತಿಲ್ಲ. ಇಂತಹ ಒಂದು ಅಪಾರವಾದ ಕಾರ್ಯಕ್ಕೆ ತೊಡಗಿ ಜನಪದ ಕಥೆಗಳ ನೆಲೆಯನ್ನು ಭದ್ರಗೊಳಿಸಬೇಕಾಗಿದೆ. ಕರ್ನಾಟಕದಲ್ಲಿ ಜನಪದ ಕಥೆಗಳ ಅಧ್ಯಯನ ಆರಂಭವಾದುದು ಎರಡು ದಶಕಗಳ ಹಿಂದೆ ಮಾತ್ರ. ಗೀತೆ, ಕಥನಗೀತೆಗಳ ಸಂಗ್ರಹದಲ್ಲಿಯೇ ೧೯೬೬ಕ್ಕೂ ಹಿಂದಿನ ಸಂಶೋಧಕರು ತಮ್ಮ ಕಾರ್ಯವನ್ನು ಸೀಮಿತಗೊಳಿಸಿಕೊಂಡು ಕನ್ನಡ ಜನಪದ ಕಥೆಗಳ ಸಮೃದ್ಧತೆಯ ಕಡೆ ನಮ್ಮ ಆಸಕ್ತಿಯನ್ನು ಹೊರಳಿಸುವಲ್ಲಿ ವಿಫಲರಾದರು. ಯುರೋಪಿನ ಪ್ರತಿಯೊಂದು ದೇಶವೂ ತನ್ನ ಮಾತೃಭಾಷೆಯಲ್ಲಿ ಸಂಗ್ರಹ ಕಾರ್ಯವನ್ನು ನಡೆಸಿ ಆಯಾ ಭಾಷೆಯಲ್ಲಿಯೇ ಕೃತಿಗಳನ್ನು ಪ್ರಕಟಿಸಿದವು. ಶ್ರೀಸಾಮಾನ್ಯರ ಭಾಷೆ ಮತ್ತು ಬದುಕನ್ನು ಅರ್ಥ ಮಾಡಿಕೊಳ್ಳಲು ಅಳಿಸಿ ಹೋಗುತ್ತಿದ್ದ ಜಾನಪದವನ್ನು ಉಳಿಸಲು ವಿದ್ವಾಂಸರು ವಿಶೇಷವಾಗಿ ಶ್ರಮಿಸಿದರು.

ವಿಶ್ವದ ಜಾನಪದ ಅಧ್ಯಯನಕ್ಕೆ ವೈಜ್ಞಾನಿಕ ದೃಷ್ಟಿಯನ್ನು ಪ್ರಥಮ ಬಾರಿಗೆ ಮೂಡಿಸಿದವರು ಜರ್ಮನಿಯ ಗ್ರೀಮ್ ಸಹೋದರರು. ೧೮೧೨ರಲ್ಲಿ ಪ್ರಕಟವಾದ ಅವರ Graims Fairy Tales ಫ್ರೆಂಚ್ ಭಾಷೆಗೆ ಅನುವಾದವಾಯಿತು. ಇಂಗ್ಲೀಷಿಗೂ ಅನುವಾದಗೊಂಡಿತು. Graims House hold Tales ಎಂಬ ಹೆಸರಿನಲ್ಲಿ ಈ ಕೃತಿ ಹೆಚ್ಚು ಜನಪ್ರಿಯವಾಯಿತು. ಯುರೋಪಿನ ಜನಪದ ಕಥೆಗಳ ಸಂಗ್ರಹಕ್ಕೆ ಹೊಸ ಚೈತನ್ಯವನ್ನು ತುಂಬಿತು. ೧೯ನೇ ಶತಮಾನದ ವೇಳೆಗೆ ಫಿನ್ಲೆಂಡ್ ವಿಶ್ವದ ಜಾನಪದ ಸಂಶೋಧನೆಯ

ಕೇಂದ್ರವೇ ಆಯಿತು. ಪ್ರಸಿದ್ಧವಾದ ಫಿನಿಷ್ ರೂಪಗೊಂಡಿದ್ದು ಇಲ್ಲಿ. ಕಥೆಗಳ ಜೀವನ ಚರಿತ್ರೆಯನ್ನು ನಿರ್ಧರಿಸಲು ಕ್ರಮವನ್ನು ಆಧುನಿಕ ವಿದ್ವಾಂಸರು ಸ್ವಾಗತಿಸಿದ್ದಾರೆ. ಕರ್ನಾಟಕದಲ್ಲಿ ಜಾನಪದದ ಶಾಸ್ತ್ರೀಯ ಅಧ್ಯಯನ, ಸಂಗ್ರಹ ಆರಂಭವಾದುದು ಈ ದಶಕದಲ್ಲಿ ಅಂದರೆ ತಪ್ಪಾಗಲಾರದು. ಗೀತೆ, ಗಾದೆಗಳಿಗೆ ಸೀಮಿತವಾಗಿದ್ದ ಸಂಗ್ರಹ ಕಾರ್ಯ ಕಳೆದ ಸುಮಾರು ವರ್ಷಗಳಲ್ಲಿ ಜಾನಪದದ ಇತರ ಶಾಖೆಗಳತ್ತ ಹೊರಳಿದೆ. ಲಾವಣೆ, ಐತಿಹ್ಯ, ಕತೆ, ಪುರಾಣ, ವೈದ್ಯ, ಕಲೆ ನಂಬಿಕೆಗಳಿಗೆ ಸಂಬಂಧಿಸಿದಂತೆ ಸಂಗ್ರಹವನ್ನು ಕೈಗೊಂಡಿರುವ ಉತ್ಸಾಹಿಗಳು ಬಹುಮಟ್ಟಿಗೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಜಾನಪದ ಶಾಖೆಯಿಂದ ಸ್ಫೂರ್ತಿಯನ್ನು, ಮಾರ್ಗದರ್ಶನವನ್ನು ಪಡೆದವರು. ಜನಪದ ಸಂಗ್ರಹದಲ್ಲಿ ಪ್ರಸ್ತುತ ಸಂಶೋಧನ ಶಾಖೆ ವಿಶೇಷ ಗಮನವನ್ನು ಹರಿಸಿದೆ. 'ಆಯ್ದ ಜನಪದ ಕಥೆಗಳು' ಸಂಕಲನ ಕನ್ನಡ ಜನಪದ ಕಥೆಗಳ ಪ್ರಾದೇಶಿಕ ವೈವಿಧ್ಯತೆಯ ಸೊಗಸನ್ನು ಪರಿಚಯಿಸುತ್ತದೆ.

ಅನೇಕ ಉತ್ಸಾಹಿಗಳು, ಕ್ಷೇತ್ರಕಾರ್ಯಕರ್ತರು, ಸಂಶೋಧಕರು ಜನಪದ ಕಥೆಗಳ ಸಂಕಲನಗಳನ್ನು ಹೊರತಂದಿರುವುದು ಈ ದಶಕದ ಒಂದು ಉತ್ತಮ ಸಾಧನೆ ಎನ್ನಬಹುದು. ಆದರೆ ಕರ್ನಾಟಕದ ಎಲ್ಲಾ ಭಾಗಗಳ ಕತೆಗಳ ಸಂಗ್ರಹಕಾರ್ಯ ಶಾಸ್ತ್ರೀಯ ರೀತಿಯಲ್ಲಿ ಆಗಲಿಲ್ಲ.

ಉತ್ತರ ಕರ್ನಾಟಕ, ದಕ್ಷಿಣ ಕನ್ನಡ ಜಿಲ್ಲೆ, ಕೊಡಗು, ಶಿವಮೊಗ್ಗ, ಚಿಕ್ಕಮಗಳೂರು, ಕೋಲಾರ, ಹೈದರಾಬಾದ್ ಕರ್ನಾಟಕ, ಬೆಂಗಳೂರು ಜಿಲ್ಲೆಗಳ ಕಥೆಗಳ ಸಂಗ್ರಹ ನಡೆದರೆ ಕನ್ನಡ ಜನಪದ ಕಥೆಗಳ ಸಂಗ್ರಹದ ಮೊದಲ ಹಾದಿ ತುಳಿದಂತಾಗುತ್ತದೆ. ಕರ್ನಾಟಕದ ಅದರಲ್ಲೂ ಹೈದರಾಬಾದ್ ಕರ್ನಾಟಕ ಜಾನಪದ ಸಂಗ್ರಹ ಈ ಕಳೆದ ದಶಕದಲ್ಲಿ ಹೊಸ ಚೈತನ್ಯವನ್ನು ತುಂಬಿಕೊಂಡು ಇದೀಗ ಶಾಸ್ತ್ರೀಯ ಕ್ರಮಗಳಲ್ಲಿ ಸಂಗ್ರಹ–ಸಂಪಾದನೆ–ಅಧ್ಯಯನಗಳು ಆರಂಭವಾಗಿರುವುದು ನಮ್ಮ ಜಾನಪದ ಕ್ಷೇತ್ರದ ಮುಂಬೆಳಗು.

ಜಾನಪದ ಕಥಾವಸ್ತುಗಳ ಅಭ್ಯಾಸದಲ್ಲಿ ಅತಿ ಚಿಕ್ಕ ಘಟಕ ಎಂದರೆ ಆಶಯ. ಇದನ್ನು ಪ್ರೇರಕ ಎಂತಲೂ ಡಾ.ಹಾ.ಮಾ. ನಾಯಕ ಅವರು ಕರೆದಿದ್ದಾರೆ. ಇದು ಕಥಾವಸ್ತುವಿಗೆ ಸಂಬಂಧಿಸಿದ್ದು; ಮಾದರಿ ಎನ್ನುವುದು ಅದರ ತಂತ್ರಕ್ಕೆ ಸಂಬಂಧಿಸಿದುದು. ಆಶಯಗಳ ಮೂಲಕ ಕಥೆ ಬೆಳೆಯುತ್ತದೆ. ಜಗತ್ತಿನ ಜನಪದ ಕಥೆಗಳಿಗೆ ಮೂಲಭೂತವಾಗಿರುವ ಆಶಯಗಳನ್ನು ಪಟ್ಟಿ ಮಾಡಿ ಬೃಹತ್‌ಗ್ರಂಥವನ್ನು ಸ್ಮಿಥ್ ಥಾಮ್ಸನ್ನರು ಸಿದ್ಧಪಡಿಸಿದ್ದಾರೆ. ಇದು ಯುವ ಸಂಶೋಧಕರಿಗೆ ಉಪಯುಕ್ತವಾಗಿದೆ.

ಆಶಯಗಳು ಕಥೆಯ ಮುಖ್ಯ ಘಟ್ಟಗಳನ್ನು ಗುರುತಿಸಿ, ಕಥೆಯ ರೂಪು–ರೇಷೆಗಳನ್ನು ನಿರ್ಣಯಿಸುತ್ತದೆ. ಬೇರೆ ಕಥೆಯಲ್ಲಿಯೂ ಹಲವು ಕಡೆಗಳಲ್ಲಿ ಆ ಆಶಯಗಳು ಒಂದೇ ರೀತಿಯಲ್ಲಿಯೋ ಸ್ವಲ್ಪ ವ್ಯತ್ಯಾಸದಿಂದಲೋ ಬಂದು ಈ ವಿಧದ ಕಥೆಗಳಲ್ಲಿನ ಸಾಮ್ಯಗಳನ್ನು ವೈಷಮ್ಯಗಳನ್ನು ಕಥೆಗಳ ವೈಶಿಷ್ಟ್ಯಗಳನ್ನು ನಿಶ್ಚಿತ ಸ್ವರೂಪದಲ್ಲಿ ತೋರಿಸುತ್ತವೆ. ಕಥೆಯ ಆಶಯಗಳ ವಿನ್ಯಾಸವು ಕಥನ ತಂತ್ರದ ಮೇಲೆ ನಿಷ್ಕೃಷ್ಟವಾದ ಬೆಳಕು ಚೆಲ್ಲುತ್ತದೆ. ಆಶಯಗಳನ್ನು ಹಲವಾರು ದೃಷ್ಟಿಕೋನಗಳಿಂದ ಕಂಡು ಅವುಗಳನ್ನು ಸ್ಥೂಲವಾದ ವಿಭಾಗಗಳನ್ನು ಮಾಡಿ ಅವು ಬೇರೆ ಬೇರೆ ವರ್ಗಗಳಲ್ಲಿಯೂ ಹೇಗೆ ಕಂಡುಬರುತ್ತವೆ ಎಂದು ವಿಶ್ಲೇಷಿಸುವುದು ಅಭ್ಯಾಸದಲ್ಲಿ ನಿಚ್ಚಳವಾದ ತಿಳುವಳಿಕೆಯನ್ನು ನೀಡುತ್ತದೆ.

ಜನಪದ ಕಥೆಗಳು ಇಂದಿನ ಜನಜೀವನದ ವಿವಿಧ ಮುಖಗಳ ದರ್ಶನವನ್ನು ಮಾಡಿಕೊಡುವುದಲ್ಲದೆ, ಕಳೆದುಹೋದ ಮರಳಿಬಾರದ ಐತಿಹಾಸಿಕ ಕಾಲದ ಜೀವನದ ಸುಳೂಹು ಹೊಳಹುಗಳನ್ನು ನೀಡುತ್ತವೆ. ಅನೇಕ ಕತೆಗಳು ಬಹುಶಃ ರಾಜರ, ಪಾಳೆಯಗಾರರ ಮನರಂಜನೆಯನ್ನೇ ಮಾಡುವುದಕ್ಕೆ ನಿಯಮಿತರಾಗಿದ್ದ ಕತೆಗಾರರಿಂದಲೇ ಮೊಟ್ಟಮೊದಲ ಸೃಷ್ಟಿ ಹೊಂದಿದ ಹಾಗೆ ಕಾಣುತ್ತವೆ. ತಳವಾರ, ಹೆಳವಾರ, ಆನೆಸಾಲು, ಕುದುರೆಸಾಲು, ಒಂಟೆಸಾಲು, ಎತ್ತಿನಸಾಲು ಮುಂತಾಗಿ ಇರುತ್ತವೆ. ಇವು ಸ್ಪಷ್ಟವಾಗಿ ರಾಜರ ಕಾಲದ ವಾತಾವರಣವನ್ನು ನಿರ್ದೇಶಿಸಿ ಆ ಹಿಂದಿನ ಕಾಲದ ರಾಜರ ಜೀವನ ಕಥೆಗಳ ನಿರೂಪಣೆಯು ಪ್ರಾರಂಭ ದಲ್ಲಿ ಬರುತ್ತದೆ.

ಹೈದರಾಬಾದ್ ಕರ್ನಾಟಕದ ವಿವಿಧ ಭಾಗಗಳಲ್ಲಿ ಇಂಥ ಸಹಸ್ರಾರು ಕಥೆಗಳು ಪಸರಿಸಿಕೊಂಡಿವೆ. ಅಳಿದುಳಿದ ಕಥೆಗಳು ಮೂಲೆ ಮೂಲೆಗಳಲ್ಲಿ ಚದುರಿಕೊಂಡಿವೆ. ಜಾಗತಿಕ ಕಥಾಸಾಹಿತ್ಯಗಳಲ್ಲಿನ ಕಥೆಗಳಿಗೆ ಸರಿಸಮನಾಗಿರುವ ಕಥೆಗಳು ಇಲ್ಲಿವೆ. ಸ್ಥಳೀಯ ಮಟ್ಟದಲ್ಲಿ ಕಥೆಗಳ ಅಧ್ಯಯನ ನಡೆಯಬೇಕಾದುದು ಅವಶ್ಯ. ಇದರಿಂದ ಜನಪದ ಕಥೆಗಳು ಮೂಲದಲ್ಲಿ ಹೇಗೆ ಸರಳ ರೂಪ ಪಡೆದಿದ್ದವು. ಅವು ಬರುಬರುತ್ತಾ ಮೌಖಿಕ ಸಂಪ್ರದಾಯದಲ್ಲಿ ಹೇಗೆ ಸಂಕೀರ್ಣ ರೂಪಕ್ಕೆ ವಾಲಿದವು ಎಂಬ ಇತಿಹಾಸ ಕಂಡುಕೊಳ್ಳಲು ಸಾಧ್ಯವಿದೆ. ಈ ಕತೆಗಳನ್ನೆಲ್ಲಾ ಪುನರ್ ಅಭ್ಯಾಸಕ್ಕೆ ಅಳವಡಿಸಿದರೆ ಅವುಗಳ ಸರಳ ರೂಪಗಳನ್ನು ಪತ್ತೆ ಹಚ್ಚಲು ಇಲ್ಲವೆ ಪುನರ್ ರಚಿಸಲು ಸಾಧ್ಯವಿದೆ.

ಜನಪದ ಕತೆಗಳು ಒಂದು ಸಮಾಜದ ಒಪ್ಪಂದದ ಸಾಂಸ್ಕೃತಿಕ ಬದುಕಿನ ಪ್ರತೀಕಗಳಾಗಿರುತ್ತವೆ. ಸುಪ್ತ ಬಯಕೆಗಳ ವ್ಯಕ್ತರೂಪಗಳಾಗಿರುತ್ತವೆ. ಚಾರಿತ್ರಿಕ, ಭೌಗೋಳಿಕ ಚರಿತ್ರೆಯ ದಾಖಲೆಗಳಾಗಿರುತ್ತವೆಂಬುದನ್ನು ಕತೆಗಳ ಅಧ್ಯಯನದಿಂದ ಕಂಡುಕೊಂಡದ್ದರಿಂದಲೇ ಸಾಹಿತ್ಯಕ ಭಾಗದಲ್ಲಿ ಈ ಕಥೆಗಳಿಗೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ. ಅವುಗಳ ಉಗಮ–ವಿಕಾಸ–ಉದ್ದೇಶ, ಪರಿಣಾಮ ಕುರಿತು ಹೆಚ್ಚು ವ್ಯಾಪಕವಾಗಿ ಚರ್ಚಿಸಲಾಗಿದೆ. ಸರಳತೆಯಿಂದ ಕೂಡಿದ ಸಂಕೀರ್ಣತೆಯ ಕಥೆಗಳು ಇರುತ್ತವೆ. ಕಥೆಗಳು ರಚನೆಯ ದೃಷ್ಟಿಯಿಂದ ಅವು ಭಿನ್ನ ಭಿನ್ನವಾಗಿರುತ್ತವೆ. ವಿಭಿನ್ನ ಸಾಂಸ್ಕೃತಿಕ ಪ್ರದೇಶದ ಕಥೆಗಳಿಗೆ ವಿಭಿನ್ನ ರಚನಾ ರೀತಿ ಇರುತ್ತದೆ. ಜನಪದ ಕತೆಗಳ ಭಿನ್ನ ಭಿನ್ನ ಪಾಠಾಂತರಗಳನ್ನು ಸಂಗ್ರಹಿಸಿ ಅದರ ಮೂಲ ಕತೆಯ ಅಂಶಗಳನ್ನು ಗುರುತಿಸುವ ವಿಧಾನವೇ ಈ ಐತಿಹಾಸಿಕ, ಭೌಗೋಳಿಕ ಸಿದ್ಧಾಂತವೆನಿಸುತ್ತದೆ. ಇದು ಆಶಯಗಳಿಗೆ ಸಂಬಂಧಿಸಿದುದಾಗಿದೆ. ಆಶಯಗಳ ಭೌಗೋಳಿಕ ಆವರಣ–ಸೃಷ್ಟಿ–ರೂಪಾಂತರಗಳ ಚರಿತ್ರಾಂಶಗಳನ್ನು ಹೇಳುತ್ತವೆ. ಭೌಗೋಳಿಕ ಆವರಣಗಳನ್ನು ಚಾರಿತ್ರಿಕ ಬೆಳವಣಿಗೆಯನ್ನು ಕಂಡುಹಿಡಿಯುವ ಈ ತಂತ್ರ ಜಾತಕ ಕಥೆಗಳಿಗೆ ಅನ್ವಯಿಸುತ್ತವೆ. ಜಗತ್ತಿನ ಎಲ್ಲ ಕಡೆಗೂ ಪ್ರಸಾರಗೊಂಡಿರುವ ಭಿನ್ನ ಪಾಠಗಳಿಗೆ ಪ್ರೇರಕವಾದ ಕತೆಯ ಮೂಲ ಕಂಡುಹಿಡಿದು ಅದರಲ್ಲಿನ ಗಂಡು ಹೆಣ್ಣಿನ ಕೌಟುಂಬಿಕ ಸಂಬಂಧಗಳನ್ನು ತಿಳಿಸುವ ಉದ್ದೇಶವಾಗಿದೆ.

ಕಥೆಗಳಲ್ಲಿಯ ಕ್ರಿಯೆಗಳು ಜನಪದ ಕಥೆಗಳ ಮೂಲ ಚಾಲಕ ಶಕ್ತಿಯೆಂದು ಹೇಳುತ್ತ ಒಂದು ಕತೆಯಲ್ಲಿ ಬರುವ ದೆವ್ವ, ರಾಕ್ಷಸ, ಕರಡಿ, ಒಂದರ ಸ್ಥಾನದಲ್ಲಿ ಮತ್ತೊಂದು ಬರಬಹುದು. ಆಯಾ

ದೇಶದ ಸಂಸ್ಕೃತಿಗೆ ಸಂಬಂಧಿಸಿದಂತೆ ಬದಲಾಗಬಹುದು. ಭಾರತದ ಜನಪದ ಕತೆಗಳಲ್ಲಿ 'ನರಿ' ಮೋಸ ಗುಣಕ್ಕೆ ಸಂಕೇತವಾದರೆ, ಆಫ್ರಿಕಾದ ಕಥೆಗಳಲ್ಲಿ ಆಮೆ ಬರುತ್ತದೆ. ಕತೆಯ ಒಂದೊಂದು ಸಂದರ್ಭವನ್ನು ಚಿಕ್ಕ ಚಿಕ್ಕ ಲಾಕುಗಳನ್ನಾಗಿ ಮಾಡಿ ಅವುಗಳನ್ನು ಸಂದರ್ಭಕ್ಕೆ ಸರಿಯಾಗಿ ವಿಭಜಿಸಿಕೊಂಡು ಒಂದು ಸೂತ್ರಕ್ಕೆ ಅಳವಡಿಸಿಕೊಳ್ಳುವುದಾಗಿದೆ. ಇತಿಹಾಸ ಪೂರ್ವಯುಗಕ್ಕೆ ಸಂಬಂಧಿಸಿದುದು ಎಂದು ಭಾವಿಸಲಾದ ವಿಶ್ವಸೃಷ್ಟಿ, ಜನಾಂಗ ಸೃಷ್ಟಿ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಕತೆಗಳೆಲ್ಲ ಪುರಾಣ ಕತೆಗಳೇ. ಜಿ.ಎಲ್. ಗೊಮ್ಮೆಯವರು ಪುರಾಣಗಳನ್ನು 'ವಿಜ್ಞಾನ ಪೂರ್ವಯುಗದ ವಿಜ್ಞಾನ' ಎಂದಿದ್ದಾರೆ. ಗ್ರೀಮ್ ಸಹೋದರರು ಅನೇಕ ಜನಪದ ಕತೆಗಳನ್ನು ಪುರಾಣದ ಒಡೆದ ಚೂರುಗಳು ಎಂದಿದ್ದಾರೆ. ಜನಪದ ಕತೆಗಳಿಂದಲೇ ಪುರಾಣದ ಕತೆಗಳು ಹುಟ್ಟಿಕೊಂಡಿರುತ್ತವೆಂಬ ವಾದವೂ ಇದೆ. ಪರಸ್ಪರ ಪ್ರಭಾವದಿಂದ ಅಂದರೆ ಜನಪದ ಕತೆಗಳಿಂದ ಪುರಾಣ ಸೃಷ್ಟಿಯೆಂದೂ ಪುರಾಣದ ಕತೆಗಳಿಂದ ಜನಪದ ಕತೆಗಳ ಸೃಷ್ಟಿಯೆಂದೂ ಚರ್ಚಿಸಿದ್ದಾರೆ. ಆದರೆ ಜನಪದ ಕತೆಗಳೇ ಪ್ರಾಚೀನವಾದುದು. ಅವುಗಳಿಂದಲೇ ಪುರಾಣ ಸೃಷ್ಟಿ ಎಂಬ ಮಾತು ಗಮನಿಸಬೇಕಾದದ್ದು, ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳಿಗೂ ಮೂಲ ಜನಪದ ಕತೆಗಳೇ ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಜನಪದ ಕತೆಗಳು ಸಾಂಪ್ರದಾಯಿಕವಾದವುಗಳು. ಪರಂಪರಾಗತವಾಗಿ ಬಾಯಿಂದ ಬಾಯಿಗೆ ಹರಿದು ಬರುವಂಥವು. ತಮ್ಮಷ್ಟಕ್ಕೆ ತಾವೇ ಸ್ವತಂತ್ರವಾದವುಗಳು. ಎಲ್ಲಿಯೋ ಹುಟ್ಟಿ ಎಲ್ಲಿಯೋ ಪ್ರಸಾರಕ್ಕೆ ಸಿದ್ಧವಾಗಿರುತ್ತವೆ. ಒಮ್ಮೊಮ್ಮೆ ಮೂಲ ಪಾಠದ ಆಶಯಗಳನ್ನು ಕಳೆದುಕೊಂಡರೂ ಮತ್ತೆ ಹೊಸ ಹೊಸ ಆಶಯಗಳು ಹುಟ್ಟಿಕೊಳ್ಳುತ್ತ ಹೋಗುತ್ತವೆ. ಒಂದೇ ಕತೆ ಹಲವು ಕತೆಗಳಾಗುವ ಶಕ್ತಿಯನ್ನು ಪಡೆದಿರುತ್ತದೆ. ಸಂಕೀರ್ಣ ಕತೆಗಳಂತೂ ನೀತಿ, ಧರ್ಮ, ಹಾಸ್ಯ, ಪುರಾಣ, ಇತಿಹಾಸ ಮೊದಲಾದ ಅಂಶಗಳನ್ನು ಒಳಗೊಂಡಿರುತ್ತವೆ. ಸ್ಟಿಥ್ ಥಾಮ್ಸನ್ನರು ಜನಪದ ಕತೆಗಳಲ್ಲಿ ಮುಖ್ಯವಾಗಿ ಸಂಕೀರ್ಣ ಮತ್ತು ಸರಳ ಕಥೆಗಳೆಂದು ಎರಡು ಪ್ರಕಾರಗಳನ್ನು ಹೇಳಿದ್ದಾರೆ.

ಗದ್ಯ ಸಾಹಿತ್ಯದಲ್ಲಿ ಮುಖ್ಯವಾದದು ಕತೆ, ಜನಪದ ಕತೆಗಳು ಕೇಳಲು ಅದ್ಭುತವಾಗಿದ್ದು ನೀತಿಮಾತುಗಳನ್ನು, ಬದುಕಿನ ಸತ್ಯವನ್ನು ಹೇಳುತ್ತವೆ. ಈ ಕತೆಗಳು ಆಶಯವನ್ನಿಟ್ಟುಕೊಂಡಿರುತ್ತವೆ. ಇಲ್ಲಿನ ಭಾಷೆ ಗೊತ್ತಿಲ್ಲದವರಿಗೆ ತಟ್ಟನೆ ಅರ್ಥವಾಗುವುದಿಲ್ಲ. ಹಿಂದಿ, ಉರ್ದು, ತೆಲುಗು, ಮರಾಠಿ ಭಾಷೆಯ ಪದಗಳೆಲ್ಲವೂ ಕನ್ನಡದಲ್ಲಿ ಕಥೆಗಳ ಉದ್ದಕ್ಕೂ ಬಳಕೆಯಾಗಿವೆ.

ಪ್ರಸ್ತುತ ಅಧ್ಯಯನ ಹೈದರಾಬಾದ್ ಕರ್ನಾಟಕದ ಜನಪದ ಕಥಾಸಾಹಿತ್ಯದ ಕುರಿತಾಗಿದೆ. ಪುರಾಣ, ಶಿಷ್ಟಪದ ಕಥಾಸಾಹಿತ್ಯವಾದರೆ, ಕಥೆಗಳು ಜನಪದರ ಪುರಾಣಗಳಾಗಿವೆ. ಈ ಕಾರಣಕ್ಕಾಗಿ ಕಥೆಗಳನ್ನು ಜನಪದ ಗುಂಪಿಗೆ ಸೇರಿಸಿ ಅಧ್ಯಯನ ಮಾಡುವ ಉಪಕ್ರಮಗಳು ನಡೆದಿವೆ. ವಿಶೇಷವೆಂದರೆ ಜನಪದ ಕಥೆಗಳ ವ್ಯಾಪ್ತಿ ಇಷ್ಟಕ್ಕೇ ಸೀಮಿತವಾಗಿಲ್ಲ. ಇವುಗಳು ವಸ್ತು ಸಾಮಗ್ರಿ, ಕ್ರಿಯಾಸಾಮಗ್ರಿ, ಜ್ಞಾನಸಾಮಗ್ರಿ ಮತ್ತು ಭಾಷಾ ಸಾಮಗ್ರಿ ನೆಲೆಗಳಲ್ಲಿ ಹುಟ್ಟುತ್ತವೆಂದು ಹೇಳಬಹುದು. ಮತ್ತು ಅವುಗಳನ್ನು ಹುಟ್ಟುಹಾಕುತ್ತಲೇ ನಡೆಯುತ್ತವೆ. ಅಂದರೆ ಇತಿಹಾಸವನ್ನು ಕಥೆಗಳು ಬಿಚ್ಚಿಡುತ್ತವೆಂದು ಹೇಳಬಹುದು. ಹೀಗಾಗಿ ಜನಪದ

ಕಥೆಗಳು ಇತಿಹಾಸದ ಆಕರಗಳು ಹೌದು, ಆಕರಗಳ ಇತಿಹಾಸವೂ ಹೌದು. ಈ ಕಾರಣಕ್ಕಾಗಿ ಇತಿಹಾಸವನ್ನು ಮತ್ತು ಇತಿಹಾಸಕ್ಕೆ ನೆರವಾಗುವ ಆಕರಗಳನ್ನು ಏಕಕಾಲಕ್ಕೆ ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ. ಆದ್ದರಿಂದ ಹೈದರಾಬಾದ್ ಕರ್ನಾಟಕದ ಚರಿತ್ರೆಯಲ್ಲಿ ಸಾಂಸ್ಕೃತಿಕ ಭಾಗಕ್ಕೆ ನೆರವಾಗಿರಬಹುದಾದ ಆಕರಗಳ ಭಾಗವಾಗಿ ನೋಡುವ ಉದ್ದೇಶವನ್ನಿಟ್ಟುಕೊಳ್ಳಲಾಗಿದೆ.

## ೧.೧. ಅಧ್ಯಯನದ ಉದ್ದೇಶ

ಹೈದರಾಬಾದ್ ಕರ್ನಾಟಕ ಎಂದು ರಾಜಕೀಯವಾಗಿ ವಿಭಾಗಿಸಲ್ಪಟ್ಟ ಈ ಪ್ರದೇಶ ಕೃಷ್ಣ, ಮಲಪ್ರಭಾ, ತುಂಗಭದ್ರ, ಘಟಪ್ರಭಾ, ಭೀಮಾಗಳೆಂಬ ಪಂಚನದಿಗಳು ಹರಿಯುವ ಪ್ರದೇಶವಾಗಿದೆ. ಫಲವತ್ತಾದ ಈ ನದಿಯ ಇಕ್ಕೆಲಗಳಲ್ಲಿ ಹತ್ತಿ, ಭತ್ತ, ಜೋಳ, ಮೆಕ್ಕೆಜೋಳ, ತೊಗರಿ, ಕಡಲೆ ಇತ್ಯಾದಿ ಧಾನ್ಯಗಳನ್ನು ಬೆಳೆಯುತ್ತಿದ್ದರು. ಈ ಪ್ರದೇಶ 'ದೋ–ಆಬ್' ಎಂದು ಕರೆಯಲ್ಪಡುತ್ತಿತ್ತು. ಸಾಮ್ರಾಜ್ಯಗಳ ಉದಯವಾದ ಕಾಲದಿಂದಲೂ ಈ ಪ್ರದೇಶವನ್ನು ವಶಪಡಿಸಿಕೊಳ್ಳಲು ಅಸಂಖ್ಯಾತ ಯುದ್ಧ–ಕಲಹಗಳು ನಡೆದಿದ್ದು ಕೊನೆಗೆ ನಿಜಾಮರ ಆಳ್ವಿಕೆಗೆ ಒಳಪಟ್ಟ ಪ್ರದೇಶವಾಯಿತು. ಬ್ರಿಟಿಷರು ಭಾರತವನ್ನು ವಶಪಡಿಸಿಕೊಂಡ ಮೇಲೆ ನಿಜಾಮರ ಆಳ್ವಿಕೆಗೆ ಈ ಪ್ರದೇಶವನ್ನು ಹೈದಾರಾಬಾದ್ ಕರ್ನಾಟಕವೆಂದು ಕರೆದರು.) ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದರೂ ಹೈದರಾಬಾದ್ ಪ್ರಾಂತ್ಯ ನಿಜಾಮರ ಆಳ್ವಿಕೆಯಲ್ಲಿಯೇ ಇತ್ತು. ಸರ್ದಾರ ವಲ್ಲಭಭಾಯಿ ಪಟೇಲರ ಕಾಲದಲ್ಲಿ ಇದು ಸ್ವತಂತ್ರ ಭಾರತದಲ್ಲಿ ವಿಲೀನವಾಯಿತು.

ಅತ್ಯಂತ ಫಲವಂತಿಕೆಯನ್ನು ಹೊಂದಿದ್ದ, ಜಮೀನ್ದಾರಿ ಆಡಳಿತವಾಗಿದ್ದ ಈ ಪ್ರದೇಶ ಸದಾ ಯುದ್ಧ ಮತ್ತು ಕಲಹಗಳಿಂದ ಜರ್ಜರಿತವಾಗಿದ್ದ ಜನ ಸಮುದಾಯಗಳು ತತ್ತರಿಸಿಹೋದರು ಎಂದು ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಇಲ್ಲಿನ ಮೌಖಿಕ ಅಭಿವ್ಯಕ್ತಿ ಸಹಜವಾಗಿ ಸಂಘರ್ಷಾತ್ಮಕ ಹಾಗೂ ಹಿಂಸಾತ್ಮಕ ಘಟನೆಗಳ ಭಾಗವಾಗಿತ್ತು. ಅದರಲ್ಲೂ ಕೌಟುಂಬಿಕ ವ್ಯವಸ್ಥೆಯಲ್ಲಿ ಗಂಡ ಹೆಣ್ಣುಗಳ ಸಂಬಂಧ ಅಪ್ಯಾಯಮಾನವಾದ ಪ್ರೀತಿ ಪ್ರೇಮಗಳಾಗಿ ಉಳಿದಿರಲಿಲ್ಲ. ಎಲ್ಲಾ ಕೌಟುಂಬಿಕ ವ್ಯವಸ್ಥೆಗಳ ಮೇಲೆ ಈ ರಾಜಕೀಯ ಹಿಂಸೆಗಳ ಪ್ರಭಾವ ಮತ್ತು ಆಕ್ರಮಣಶೀಲಗೊಂಡ ಪ್ರವೃತ್ತಿಗಳು ಎದ್ದುಕಾಣುತ್ತಿದ್ದವು.

ಪ್ರಸ್ತುತ ಅಧ್ಯಯನದಲ್ಲಿ ಮೌಖಿಕ ಸಾಹಿತ್ಯವನ್ನು ಅದರಲ್ಲೂ ಮುಖ್ಯವಾಗಿ ಈ ಭಾಗದ ಜನಪದ ಕಥೆಗಳನ್ನು ಕೇಂದ್ರವಾಗಿರಿಸಿಕೊಂಡು ನೋಡಲಾಗಿದೆ.

ಹೈದರಾಬಾದ್–ಕರ್ನಾಟಕ ಪ್ರದೇಶ ರಾಜ್ಯದಲ್ಲಿ ಹಿಂದುಳಿದ ಪ್ರದೇಶವಾಗಿದ್ದು, ಬಹುಕಾಲ ನಿಜಾಮರ ನಿರಂಕುಶ ಆಡಳಿತಕ್ಕೆ ಒಳಪಟ್ಟಿದ್ದು, ಅವರ ಆಡಳಿತ ವ್ಯವಸ್ಥೆಯನ್ನು ಮತ್ತು ಅಂದಿನ ಸಾಮಾಜಿಕ ವ್ಯವಸ್ಥೆ ಹೇಗಿತ್ತು ಎಂಬುದನ್ನು ಮೌಖಿಕ ಚರಿತ್ರೆ ಎಂದು ಪರಿಗಣಿಸಲ್ಪಟ್ಟಜನಪದ ಕಥೆಗಳ ಮೂಲಕ ನೋಡುವ ಉದ್ದೇಶ ಪ್ರಸ್ತುತ ಅಧ್ಯಯನದ್ದು.

ಬಹುಕಾಲದಿಂದಲೂ ಹೈದರಾಬಾದ್–ಕರ್ನಾಟಕ ಪ್ರದೇಶ ಪರಕೀಯರ ಅಧೀನದಲ್ಲಿದ್ದು ಬಡವರ, ಜನಸಾಮಾನ್ಯರ, ಸ್ತ್ರೀಯರ ಸ್ಥಿತಿಗತಿ ಹೇಗಿತ್ತು ಎಂಬುದನ್ನು ಅಲ್ಲಿನ ಜನಪದ ಕಥೆಗಳ ಸ್ವರೂಪ, ಆಶಯಗಳ ಮೂಲಕ ತಿಳಿಯಲು ಉದ್ದೇಶಿಸಲಾಗಿದೆ.

ಗಂಡು-ಹೆಣ್ಣಿನ ಮಧ್ಯೆ ನಡೆಯುವ ಪ್ರೀತಿ-ಪ್ರೇಮ-ವಿಘಟನೆ ಸಹಜ ಪ್ರಕ್ರಿಯೆ. ಈ ಸಹಜ ಪ್ರಕ್ರಿಯೆಗಳಿಗೂ ಕಾರಣಗಳು ಇದ್ದೇ ಇರುತ್ತದೆ. ಈ ಹಿನ್ನೆಲೆಯಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದ ಜನಪದ ಕಥೆಗಳಲ್ಲಿ ಬಿಂಬಿತವಾದ ಗಂಡು-ಹೆಣ್ಣಿನ ಪ್ರೇಮದ ಸ್ವರೂಪ ಹೇಗಿತ್ತು ಎಂಬುದನ್ನು ತಿಳಿಯುವುದು ಪ್ರಸ್ತುತ ಅಧ್ಯಯನದ ಉದ್ದೇಶಗಳಲ್ಲೊಂದು.

ಪರಕೀಯ ಆಡಳಿತಗಾರರಿಂದ ಹೈದರಾಬಾದ್-ಕರ್ನಾಟಕ ಪ್ರದೇಶದ ಸಾಮಾಜಿಕ ಸ್ಥಿತಿಗತಿ, ಕುಂದು ಕೊರತೆಗಳು ಯಾವ ರೀತಿಯಾಗಿ ನೆಲೆಯೂರಿವೆ ಎಂಬುದನ್ನು ಜನಪದ ಕಥೆಗಳ ಮೂಲಕ ತಿಳಿಯುವ ಉದ್ದೇಶ ಈ ಅಧ್ಯಯನಕ್ಕಿದೆ.

ಎಲ್ಲಾ ಕಾಲದಲ್ಲಿಯೂ ಪ್ರತಿಯೊಂದು ದೇಶ, ಸಮಾಜ, ಕುಟುಂಬದಲ್ಲಿ ಸ್ತ್ರೀಪುರುಷರಿಬ್ಬರೂ ಸಹಬಾಳ್ವೆ ನಡೆಸುತ್ತಾ ಬಂದಿರುವುದನ್ನು ನೋಡಬಹುದು, ಗುರುತಿಸಬಹುದು. ಸ್ತ್ರೀಯನ್ನು ಬಿಟ್ಟು ಪುರುಷ, ಪುರುಷನನ್ನು ಬಿಟ್ಟು ಸ್ತ್ರೀ ಬದುಕನ್ನು ನಡೆಸಲಿಲ್ಲ. ಅವರು ಪತಿ ಪತ್ನಿಯರಾಗಿರಬಹುದು. ತಂದೆ-ತಾಯಿ ಮಕ್ಕಳಾಗಿರಬಹುದು. ಸ್ನೇಹಿತ-ಸ್ನೇಹಿತೆಯಾಗಿರಬಹುದು. ಹೀಗೆ ಸ್ತ್ರೀಪುರುಷರ ಸಂಬಂಧ ನಿರಂತರ. ಆದರೂ ನಮ್ಮ ಸಮಾಜ ಪುರುಷರನ್ನು ನೋಡಿದ ರೀತಿಯೇ ಬೇರೆಯಾಗಿದೆ. ಎಲ್ಲಾ ಕಾಲದಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಗೆ ಒಳಗಾಗುತ್ತ ಬಂದಿರುವಲ್ಲಿ ಪುರುಷರಿಗಿಂತ ಸ್ತ್ರೀಯರೇ ಹೆಚ್ಚು ಎಂದು ಹೇಳಿದರೆ ತಪ್ಪಾಗಲಾರದು.

ನಾಗರಿಕ ಸ್ತ್ರೀ-ಪುರುಷರಿಗಿಂತ ಜನಪದ ಸ್ತ್ರೀ-ಪುರುಷರ ಬದುಕು ಭಿನ್ನವಾಗಿದೆ. ಜೀವನ ವಿಧಾನಗಳು, ನಂಬಿಕೊಂಡ ಮೌಲ್ಯಗಳು, ಧಾರ್ಮಿಕ ವಿಧಿನಿಷೇಧಗಳು ಇವೆಲ್ಲ ಜನಪದರ ಸಾಂಸ್ಕೃತಿಕ ಚಟುವಟಕೆಗಳ ಒಂದು ಭಾಗ ಎಂದಿಟ್ಟುಕೊಳ್ಳಲಾಗಿದೆ. ಆ ಚಟುವಟಿಕೆಗಳನ್ನು ವಿಶ್ಲೇಷಿಸುವುದಕ್ಕೆ ತನ್ನ ನುಡಿ ಚೌಕಟ್ಟಿನಲ್ಲಿ ಅಭಿವ್ಯಕ್ತಗೊಳಿಸಿದ ಕಥೆಗಳನ್ನು ಗಮನಿಸಬೇಕಾಗುತ್ತದೆ. ಜನಪದ ಕಥೆಗಳನ್ನು ಗಮನಿಸಿದಾಗ ಅಲ್ಲಿ ಬರುವ ಬಹುಮಟ್ಟಿನ ಸ್ತ್ರೀ-ಪುರುಷ ಪಾತ್ರಗಳು ವೈವಿಧ್ಯಮಯವಾದ ವ್ಯಕ್ತಿತ್ವವನ್ನು ಪರಿಚಯಿಸುತ್ತವೆ. ಕುಟುಂಬದಲ್ಲಿನ ತಾಯಿ ಮಗಳು, ಪತ್ನಿ, ಸೊಸೆ ಹೀಗೆ ಹಲವು ನೆಲೆಗಳಲ್ಲಿ ತನ್ನ ಪ್ರಭಾವವನ್ನು ಬೀರಿರುವ ಹೆಣ್ಣು, ಪುರುಷ ಪ್ರಧಾನ ಸಮಾಜದಲ್ಲಿ 'ಬಲಿಪಶು' ಎಂಬುದರಲ್ಲಿ ಭಿನ್ನಾಭಿಪ್ರಾಯವಿರಲಾರದು. ಇದಕ್ಕೆ ಸಾಕ್ಷಿಯಾಗಿ ಕಥೆಗಳನ್ನು ವಿಶ್ಲೇಷಿಸಿದಾಗ ಸ್ತ್ರೀಯ ಸುಖಕ್ಕಿಂತ ಹೆಚ್ಚಾಗಿ ಅವಳ ವೇದನೆಯನ್ನು ಗುರುತಿಸಬಹುದು. ಅಲ್ಲಲ್ಲಿ ಪ್ರತಿಭಟನೆಯ ಎಳೆಯೂ ಕಂಡುಬಂದರೂ, ಪ್ರಯೋಜನವಾಗುವುದಿಲ್ಲ.

ಕಥೆಗಳ ವಸ್ತುವಿಗೆ ಅನುಗುಣವಾಗಿ ಶೀರ್ಷಿಕೆಯನ್ನು ಕೊಟ್ಟು ಅವುಗಳನ್ನು ಕೆಲವು ಅಧ್ಯಾಯಗಳಾಗಿ ವಿಭಜಿಸಿಕೊಳ್ಳಲಾಗಿದೆ. ಒಂದೊಂದು ಅಧ್ಯಾಯದಲ್ಲೂ ಜಾನಪದ ಸ್ತ್ರೀ-ಪುರುಷ ವಿಭಿನ್ನ ಮನೋಧರ್ಮವನ್ನು ಅರಿಯುವುದು ಈ ಅಧ್ಯಯನದ ಉದ್ದೇಶವಾಗಿದೆ. ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ದೃಷ್ಟಿಕೋನದಿಂದ ಈ ಪಾತ್ರಗಳನ್ನು ಪರಿಶೀಲಿಸಿ ವಿಶ್ಲೇಷಿಸಲಾಗಿದೆ. ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿ ಗಂಡು ಹೆಣ್ಣಿನ ಸಂಬಂಧದ ಪಾತ್ರಗಳ ಸಮಗ್ರ ವಿವೇಚನೆಯ ಮೊದಲ ಪ್ರಯತ್ನ ಇದಾಗಿದೆ.

## ೧.೨. ಅಧ್ಯಯನದ ಮಹತ್ವ

ಹೈದರಾಬಾದ್ ಕರ್ನಾಟಕ ಪ್ರದೇಶದ ಜಿಲ್ಲೆಗಳು ಈ ಹಿಂದೆ ಮರಾಠರಿಗೆ, ಮುಸ್ಲಿಮರಿಗೆ ಒಳಪಟ್ಟಿದ್ದರಿಂದ, ಆ ಭಾಷೆ ಸಂಸ್ಕೃತಿಗಳ ಪ್ರಭಾವ ಜನಪದ ಕಥೆಗಳಲ್ಲಿರುವುದನ್ನು ನೋಡಬಹುದಾಗಿದೆ. ಈ ಜಿಲ್ಲೆಗಳಲ್ಲಿ ಬರುವ ಜನಪದ ಕಥಾ ಸಾಹಿತ್ಯದಲ್ಲಿ ಈ ಭಾಗದ ಸಮುದಾಯಗಳ ರೀತಿ-ನೀತಿ, ಆಚಾರ-ವಿಚಾರ, ಅಭಿರುಚಿ, ಸಂಪ್ರದಾಯ, ಶ್ರದ್ಧೆ, ನಂಬಿಕೆ ಪರಂಪರೆ ಮತ್ತು ಕೌಟುಂಬಿಕ ಸಂಬಂಧಗಳು ಅನಾವರಣಗೊಂಡಿವೆ. ಜನಪದ ಕಥೆಗಳು ನಮ್ಮ ಗ್ರಾಮಾಂತರ ಜೀವನ ಸಾಗಿಬಂದುದರ ಸುದೀರ್ಘವಾದ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಟ್ಟಿರುವುದು ಮಹತ್ವದ ಸಂಗತಿಯಾಗಿದೆ. ಈ ಆಧಾರದಿಂದ ಜನಪದ ಕಥೆಗಳ ವಸ್ತು, ತಂತ್ರ, ಶೈಲಿ, ವ್ಯಕ್ತಿ, ಭಾಷೆ, ಪ್ರದೇಶದಿಂದ ಪ್ರದೇಶಕ್ಕೆ ಹೇಗೆ ಭಿನ್ನವಾಗಿರುತ್ತವೆ? ಅವುಗಳ ರಾಜಕೀಯ ತಂತ್ರ ಇಂದು ಜನಪದ ಸಾಹಿತ್ಯದಲ್ಲಿ ಕಥೆಗಳು ಪಡೆದುಕೊಂಡ ಸ್ಥಾನದ ಬಗೆಗೆ ಚರ್ಚಿಸಲಾಗುವುದು.

ಈ ಪ್ರದೇಶದ ಜನಪದ ಕಥೆಗಳ ಸಂಸ್ಕೃತಿಯನ್ನು ಸಾಮಾನ್ಯ ಜನರ ಜೀವನದೊಂದಿಗೆ ಆಚರಣೆಯ ಮೂಲಕ ಹೇಗೆ ಮನುಷ್ಯರನ್ನು ಆಳುತ್ತವೆ? ಅವುಗಳ ಮಹತ್ವವನ್ನು ಚರ್ಚಿಸುವ ಕಥೆಗಳಂತಹ ಘಟನೆಗಳ ಹಿನ್ನೆಲೆಯನ್ನು ನಂಬಿಕೆಯೊಂದೆ ಸಂಬಂಧಗಳ ಬೆನ್ನೆಲುಬು ಎಂಬುದರ ಆಧಾರದಿಂದ ಜನಪದ ಕಥೆಗಳ ವಸ್ತು, ಸ್ಥಳ, ವ್ಯಾಪ್ತಿ ಹಾಗೂ ಇವುಗಳ ಪ್ರದೇಶದಿಂದ ಪ್ರದೇಶಕ್ಕೆ ಹೇಗೆ ಭಿನ್ನವಾಗಿರುತ್ತವೆ? ಅವುಗಳ ರಾಜಕೀಯ ತಂತ್ರ ಇಂದು ಜನಪದ ಸಾಹಿತ್ಯದಲ್ಲಿ ಕಥೆಗಳು ಪಡೆದುಕೊಂಡ ಸ್ಥಾನದ ಬಗ್ಗೆ ಚರ್ಚಿಸಲಾಗಿದೆ. ಸ್ಥಳೀಯ ಜನಪದ ಕಥೆಗಳಿಂದ ಅದರ ಐತಿಹಾಸಿಕ ಮಹತ್ವ ಮತ್ತು ಸಾಂಸ್ಕೃತಿಕ ಜನಜೀವನದ ಒಳನೋಟಗಳನ್ನು ತಿಳಿಯುವಲ್ಲಿ ಜನಪದ ಕಥೆಗಳ ಅಧ್ಯಯನ ಮಹತ್ವವಾಗಿದೆ.

## ೧.೩. ಅಧ್ಯಯನದ ವ್ಯಾಪ್ತಿ

ಹೈದರಾಬಾದ್ ಕರ್ನಾಟಕದ ಬೀದರ, ಗುಲ್ಬರ್ಗಾ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳ ಜನಪದ ಕಥೆಗಳ ಐದು ಸಂಕಲನಗಳನ್ನು ಇಟ್ಟುಕೊಂಡು ಅದರಲ್ಲಿನ ಗಂಡು-ಹೆಣ್ಣುಗಳ ಕೌಟುಂಬಿಕ ಸಂಬಂಧಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಈ ಪ್ರದೇಶದಲ್ಲಿ ಪ್ರಚಲಿತವಿರುವ ಜನಪದ ಕಥೆಗಳನ್ನು ಸಂಗ್ರಹಿಸಿ ಅಧ್ಯಯನದ ಅನುಕೂಲಕ್ಕಾಗಿ ಸ್ಥಳೀಯ ಕಥೆಗಳು, ಸಂಚಾರಿ ಕಥೆಗಳು, ಅದ್ಭುತ ಕಥೆಗಳು, ರಮ್ಯ ಕಥೆಗಳು, ಹಾಸ್ಯಕಥೆಗಳು ಎಂಬುದಾಗಿ ಗುರುತಿಸಿ, ಸ್ಥಳ, ವ್ಯಕ್ತಿ, ದೈವ, ದೆವ್ವ, ರಾಕ್ಷಸ, ಸಸ್ಯ, ಪ್ರಾಣಿ, ಜಲ-ಕಲ್ಲು, ಕೆರೆ, ಬಾವಿ, ಗುಡ್ಡ, ಬೆಟ್ಟ, ದಾನ, ದತ್ತಿ, ಪರ್ವತ, ಮಾಟ-ಮಂತ್ರ ಮುಂತಾದ ಸ್ವರೂಪದಲ್ಲಿ ಮತ್ತು ನಂಬಿಕೆ, ಆಚರಣೆ ಸಂಪ್ರದಾಯಗಳ ಕಥೆಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳು ಹೇಗೆ ಬೆರೆತಿವೆ ಎಂಬ ಬಗೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಪ್ರದೇಶ ಮತ್ತು ಕಾಲದ ದೃಷ್ಟಿಯಿಂದ ಈ ಪ್ರಾಂತ್ಯದ ಯಾವುದೇ ಬಗೆಯ ಅಧ್ಯಯನ ಕೈಗೊಂಡರೆ ಅದು ನಿಜಾಮರ ಆಳ್ವಿಕೆಯ ಹೊತ್ತಿನಿಂದ ಇಂದಿನ ಕಾಲದವರೆಗೆ ಈ ಪ್ರಾಂತ್ಯಕ್ಕೆ ಸಂಬಂಧಿಸಿದ ಜನಪದ ಕಥೆಗಳನ್ನು ಮಾತ್ರ ಪರಿಗಣಿಸಿ ಅವುಗಳಲ್ಲಿ ಬರುವ ಸಂಬಂಧಗಳ ಬಗೆಗೆ ಚರ್ಚಿಸಲಾಗಿದೆ.

### ೧.೪. ಅಧ್ಯಯನದ ವಿಧಾನಗಳು

೧. ಕಥೆಗಳ ಕೇಂದ್ರಿತವಾದ ದಂತಕಥೆ, ಪುರಾಣ, ನಂಬಿಕೆ, ಸಂಪ್ರದಾಯ ಆಚರಣೆ ಗಳಾಗಿರುವಂತಹ ಸಾಹಿತ್ಯೇತರ ಮತ್ತು ಗಾದೆ, ಒಗಟು, ನುಡಿಗಟ್ಟುಗಳ ಸಾಹಿತ್ಯ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ.

೨. ಹೈದರಾಬಾದ್ ಕರ್ನಾಟಕದ ಭೌಗೋಳಿಕ ಸಾಂಸ್ಕೃತಿಕ ಐತಿಹಾಸಿಕ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಜನಪದ ಕಥೆಗಳು ಹೇಗೆ ನೆರವಾಗಬಲ್ಲವು ಎಂಬುದನ್ನು ಸಂಕ್ಷಿಪ್ತವಾಗಿ ಚರ್ಚಿಸುವ ಉದ್ದೇಶವಾಗಿದೆ.

೩. ಒಂದು ನಿರ್ದಿಷ್ಟ ಪ್ರದೇಶದಲ್ಲಿ ನಡೆದ ರಾಜಪ್ರಭುತ್ವ, ಯಜಮಾನಿಕೆ, ಅಸಹಾಯಕತೆ, ಸ್ಥಳ, ಮಹತ್ವ, ಕ್ಷೇತ್ರಮಹಿಮೆ, ದಾನದತ್ತಿ ಹೀಗೆ ಹಲವಾರು ಸಂದರ್ಭಗಳು ಆಯಾ ಕಾಲದ ಸಾಮಾಜಿಕ ಜನಜೀವನ ಚಿತ್ರಿಸುವುದನ್ನು ಇಲ್ಲಿಯ ಜನಪದ ಕಥೆಗಳು ಹೇಗೆ ಪ್ರತಿನಿಧಿಸುತ್ತವೆ ಎಂಬುದನ್ನು ಜನಪದ ಕಥೆಗಳ ಹಿನ್ನೆಲೆಯಲ್ಲಿ ಗುರುತಿಸುವುದು ಮತ್ತು ಹೊಸ ಮಾದರಿಯಲ್ಲಿ ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

೪. ಸಂಬಂಧಗಳನ್ನು ಕುರಿತು ಮಾತಾನಾಡುವಾಗ ನಮಗೆ ಎದ್ದು ಕಾಣುವ ಮೂರು ಸಂಬಂಧಗಳೆಂದರೆ ಮನುಷ್ಯ-ಮನುಷ್ಯರ ಸಂಬಂಧ, ಮನುಷ್ಯ ಮತ್ತು ಪ್ರಕೃತಿಯ ಸಂಬಂಧ, ಮನುಷ್ಯ ಮತ್ತು ದೈವ ಸಂಬಂಧ; ಈ ಮೂಲಭೂತ ಮೂರು ಮುಖ್ಯ ಸಂಬಂಧಗಳ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕವನ್ನು ನೋಡುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

೫. ರಾಜಕೀಯವಾಗಿ ಬೀದರ್, ಕೊಪ್ಪಳ, ಕಲಬುರ್ಗಿ, ರಾಯಚೂರು, ಬಳ್ಳಾರಿ ಈ ಜಿಲ್ಲೆಯ ವ್ಯಾಪ್ತಿಯೊಳಗೆ ಬರುವ ಜನಪದ ಕಥೆಗಳನ್ನು ಆಧರಿಸಿ ಗಂಡು-ಹೆಣ್ಣುಗಳ ಸಂಬಂಧದ ಸ್ವರೂಪವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

೬. ಪ್ರಸ್ತುತ ಅಧ್ಯಯನದಲ್ಲಿ ವಿವಾಹಪೂರ್ವ ಗಂಡು-ಹೆಣ್ಣುಗಳ ಸಂಬಂಧ, ವಿವಾಹಿತ ಗಂಡು-ಹೆಣ್ಣುಗಳ ಸಂಬಂಧ, ವಿವಾಹೇತರ ಗಂಡು ಹೆಣ್ಣುಗಳ ಸಂಬಂಧದ ಸ್ವರೂಪವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

೭. ಭಾರತೀಯ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಪರಿಕಲ್ಪನೆ ಮತ್ತು ಗಂಡಿನ ಪರಿಕಲ್ಪನೆ ಇವುಗಳು ಹೇಗಿದ್ದವು ಎಂಬುದರ ಚಾರಿತ್ರಿಕ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದ ಜನಪದ ಕಥೆಗಳಲ್ಲಿ ಗಂಡು-ಹೆಣ್ಣುಗಳ ಸಂಬಂಧದ ಯಾವ ಪಲ್ಲಟಗಳನ್ನು ಪಡೆದುಕೊಂಡಿದೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೮. ಗಂಡು-ಹೆಣ್ಣುಗಳ ಸಂಬಂಧಕ್ಕೆ ಪೂರಕವಾದ ಆಚರಣಾತ್ಮಕ ವಿಧಾನಗಳನ್ನು ಉದಾ. ವಿವಾಹ, ವಿವಾಹಪೂರ್ವ ಆಚರಣೆಗಳು ಮತ್ತು ವಿವಾಹ ನಂತರದ ಆಚರಣೆಗಳು ಮತ್ತು ವಿವಾಹ ಬಂಜಕ ಆಚರಣೆಗಳು ಇತ್ಯಾದಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಗಮನಿಸಲಾಗಿದೆ.

## ೧.೫. ಇದುವರೆಗಿನ ಅಧ್ಯಯನಗಳ ತಾತ್ವಿಕ ಸಮೀಕ್ಷೆ

ಪ್ರಸ್ತುತ ಅಧ್ಯಯನದ ವ್ಯಾಪ್ತಿ ಹೈದರಾಬಾದ್ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಕಲಬುರ್ಗಿ, ಬೀದರ್, ರಾಯಚೂರು, ಕೊಪ್ಪಳ, ಬಳ್ಳಾರಿ ಜಿಲ್ಲೆಗಳಲ್ಲಿ ಪ್ರಕಟವಾಗಿರುವ ಜನಪದ ಕಥಾ ಸಾಹಿತ್ಯಕ್ಕೆ ಸಂಬಂಧಿಸಿದ್ದಾಗಿದೆ. ಇದುವರೆಗಿನ ಅಧ್ಯಯನಗಳ ಉದ್ದೇಶ, ವ್ಯಾಪ್ತಿ, ವೈಧಾನಿಕತೆಗಳು ಭಿನ್ನ ಸ್ವರೂಪದವುಗಳಾಗಿವೆ. ನಾನು ಗಮನಿಸಿದ ಬಹುತೇಕ ಈ ಬಗೆಯ ಅಧ್ಯಯನಗಳ ಏಕಮಾದರಿಯಲ್ಲಿ ವ್ಯಕ್ತಿ ಕೇಂದ್ರಿತ, ಕೃತಿಕೇಂದ್ರಿತ ನೆಲೆಯಲ್ಲಿ ನಡೆದಿದೆ.

೧. ಹೈದರಾಬಾದ್ ಕರ್ನಾಟಕದ ಸಾಹಿತ್ಯದಲ್ಲಿ ಸಾಮಾಜಿಕ ವಾಸ್ತವ: ಅಮರೇಶ ಎನ್., ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೯: ಹೈದರಾಬಾದ್ ಕರ್ನಾಟಕ ಸಾಹಿತ್ಯದಲ್ಲಿ ಈ ಪ್ರದೇಶದ ಜನರ ಬದುಕಿನ ವಾಸ್ತವಿಕ ಚಿತ್ರಣ ಕಂಡುಬರುತ್ತಿರುವ ರೀತಿಯನ್ನು ಕಾಲಘಟ್ಟದ ಒತ್ತಡಗಳಿಗೆ ಅನುಗುಣವಾಗಿ ವಿಶ್ಲೇಷಿಸಿದ್ದಾರೆ. ನಿಜಾಮ್ ಆಳ್ವಿಕೆಯ ರಾಜಕೀಯ ಪರಿಸ್ಥಿತಿಗಳು ತಂದೊಡ್ಡಿದ ರಜಾಕಾರರ ಹಾವಳಿಯಂತಹ ಸಂಧಿಗ್ಧತೆಗಳು ಇಲ್ಲಿನ ಜನರ ಬದುಕಿನ ಮೇಲೆ ಉಂಟುಮಾಡಿದ ದುಷ್ಪರಿಣಾಮಗಳನ್ನು ತಿಳಿಸಿದ್ದಾರೆ. ತತ್ವಪದಕಾರರು ಸಾಹಿತಿಗಳು ಈ ಪ್ರದೇಶದ ಬದುಕನ್ನು ಸಾಹಿತ್ಯದಲ್ಲಿ ಪುನರ್‌ರೂಪಿಸುವ ಪ್ರಯತ್ನ ಮಾಡಿದ್ದಾರೆ.

೨. ಹೈದರಾಬಾದ್ ಕರ್ನಾಟಕದ ನಾಟಕ ಸಾಹಿತ್ಯ ಒಂದು ಅಧ್ಯಯನ: ಆರ್. ಅಮೃತ ಕಟಿಕೆ ಗುಲ್ಬರ್ಗಾ ವಿಶ್ವವಿದ್ಯಾಲಯ-೨೦೦೪: ಈ ಅಧ್ಯಯನವು ಹೈದರಾಬಾದ್ ಕರ್ನಾಟಕದ ರಂಗಭೂಮಿಯ ಬೆಳವಣಿಗೆಯ ಕುರಿತಾಗಿದೆ. ವೃತ್ತಿ ರಂಗಭೂಮಿಯ ಆಧುನಿಕ ನಾಟಕಗಳು, ನವ್ಯ ನಾಟಕಗಳು, ಪ್ರಸಾರ ಮಾಧ್ಯಮ ನಾಟಕಗಳು, ಅನ್ಯಭಾಷಾ ಪ್ರೇರಣೆಯ ನಾಟಕಗಳು ಇತ್ಯಾದಿ. ನಾಟಕದ ವಿವಿಧ ಪ್ರಕಾರಗಳ ಹಿನ್ನೆಲೆಯಲ್ಲಿ ಅಧ್ಯಯನವನ್ನು ಕೈಗೊಂಡಿದ್ದು ಈ ಪ್ರದೇಶಕ್ಕೆ ಅವುಗಳ ವಿಶಿಷ್ಟತೆಯನ್ನು ಹಾಗೂ ನಾಟಕ ಸಾಹಿತ್ಯಕ್ಕೆ ಹೈದರಾಬಾದ್ ಕರ್ನಾಟಕ ಪ್ರದೇಶದಿಂದ ಸಂದ ಕೊಡುಗೆಯನ್ನು ಹೇಳಲಾಗಿದೆ.

೩. ಹೈದರಾಬಾದ್ ಕರ್ನಾಟಕದ ಕನ್ನಡ ಲೇಖಕಿಯರ ಸಂಶೋಧನಾ ಕೃತಿಗಳು: ಎಸ್.ಐಶ್ವರಿ, ಗುಲ್ಬರ್ಗಾ ವಿಶ್ವವಿದ್ಯಾಲಯ-೧೯೯೭: ಈ ಪ್ರದೇಶದ ಕನ್ನಡ ಲೇಖಕಿಯರ ಸಂಶೋಧನಾ ಕೃತಿಗಳನ್ನು ಕುರಿತಾದ ಚರ್ಚೆ ಈ ಅಧ್ಯಯನದಲ್ಲಿದೆ. ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದ ಮಹಿಳೆಯರ ಸೇವೆ ಈ ಸಂಶೋಧನೆಯಿಂದ ತಿಳಿದುಬರುತ್ತದೆ.

೪. ಹೈದರಾಬಾದ್ ಕರ್ನಾಟಕದ ಕವಿಕಾವ್ಯ-ಶಿವರಾಜ ಕುಲಕರ್ಣಿ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೧೯೯೭: ಈ ಪ್ರದೇಶದ ಪ್ರಾತಿನಿಧಿಕ ಕವಿಗಳ ಕಾವ್ಯವನ್ನಾಧರಿಸಿದ ಅಧ್ಯಯನವು ಮತ್ತು ಕಾವ್ಯದಲ್ಲಿ ಅಭಿವ್ಯಕ್ತಗೊಂಡಿರುವ ವಿಭಿನ್ನ ಆಶಯಗಳನ್ನು ತಿಳಿಸುತ್ತದೆ.

೫. ಹೈದರಾಬಾದ್ ಕರ್ನಾಟಕ ಬಂಡಾಯ ಸಾಹಿತ್ಯ ಪರಂಪರೆ: ಜೋಶಿ ಮಧುಸೂದನಾಚಾರ್ಯ ಗುಲಬರ್ಗಾ ವಿಶ್ವವಿದ್ಯಾಲಯ-೧೯೯೭: ಹೈದರಾಬಾದ್ ಕರ್ನಾಟಕದಲ್ಲಿ ಬಂಡಾಯ ಸಾಹಿತ್ಯ ನಡೆದುಬಂದ

ದಾರಿ ಹಾಗೂ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿರುವ ಬಂಡಾಯದ ಸ್ವರೂಪವನ್ನು ಈ ಅಧ್ಯಯನವು ತಿಳಿಸುತ್ತದೆ.

೬. ಹೈದರಾಬಾದ್ ಕರ್ನಾಟಕ ಪ್ರದೇಶದ ಮಾದಿಗರು ಒಂದು ಅಧ್ಯಯನ: ಬುದ್ದಕಾಳಪ್ಪ ಸಾಯಪ್ಪ, ಗುಲಬರ್ಗಾ ವಿಶ್ವವಿದ್ಯಾಲಯ–೨೦೦೫: ಮಾದಿಗ ಸಮುದಾಯದ ಬದುಕಿನ ವಾಸ್ತವಿಕ ಪರಿಸ್ಥಿತಿಗಳನ್ನು ತಿಳಿಸುತ್ತಲೇ, ಈ ಭಾಗದ ಸಾಹಿತ್ಯದಲ್ಲಿ ಮಾದಿಗರಿಗೆ ಸಂಬಂಧಿಸಿದಂತೆ ಕಂಡುಬಂದ ಉಲ್ಲೇಖಗಳನ್ನು ವಿಶ್ಲೇಷಿಸಿದ್ದಾರೆ. ಅವಕಾಶ ವಂಚಿತವಾದ ಈ ಸಮುದಾಯದ ಸ್ಥಿತಿಗತಿಗಳನ್ನು ಈ ಅಧ್ಯಯನವು ಹೇಳುತ್ತಾ ಹೋಗುತ್ತದೆ.

೭. ಹೈದರಾಬಾದ್ ಕರ್ನಾಟಕ ಜಾನಪದ ಸಾಹಿತ್ಯ ಒಂದು ಅಧ್ಯಯನ: ಬಿ.ಎಸ್. ಪಾಟೀಲ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೧೯೮೮: ಹೈದರಾಬಾದ್ ಕರ್ನಾಟಕದಲ್ಲಿ ಪ್ರಚಲಿತವಿರುವ ಮೌಖಿಕ ಹಾಗೂ ಲಿಖಿತ ಜಾನಪದ ಸಾಹಿತ್ಯದ ವೈಶಿಷ್ಟ್ಯವನ್ನು ಈ ಅಧ್ಯಯನವು ತಿಳಿಸಿಕೊಡುತ್ತದೆ.

೮. ಹೈದರಾಬಾದ್ ಕರ್ನಾಟಕ ಸಾಹಿತ್ಯದಲ್ಲಿ ಮಹಿಳಾ ಬದುಕಿನ ಪ್ರತಿನಿಧೀಕರಣ: ಬಿದರಿ ಚಂದ್ರಕಲಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೭: ಹೈದರಾಬಾದ್ ಕರ್ನಾಟಕ ಸಾಹಿತ್ಯ ಪ್ರಕಾರಗಳಲ್ಲಿ ಸ್ತ್ರೀ ಬದುಕಿಗೆ ಸಂಬಂಧಿಸಿದಂತೆ ಕಂಡುಬರುವ ವಿಷಯಗಳನ್ನು ಸ್ತ್ರೀವಾದಿ ಹಿನ್ನೆಲೆಯಲ್ಲಿ ವಿಶ್ಲೇಷಿಸಿದೆ. ಬದುಕಿನ ಅಸಹಾಯಕತೆಯ ನೆಲೆಗಳನ್ನು ವ್ಯವಸ್ಥೆಯ ಶೋಷಣೆಯನ್ನು ವಿರೋಧಿಸಿ ನಿಲ್ಲುವ ಸ್ತ್ರೀ ಬದುಕಿನ ದಿಟ್ಟತನ ಇತ್ಯಾದಿ ವಿಷಯಗಳನ್ನು ಸಮುದಾಯ ಹಾಗೂ ಸಾಮಾಜಿಕ ಸ್ಥಾನಮಾನಗಳ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ.

೯. ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳು ಜನಪದೀಯ ಅಧ್ಯಯನ: ಚೆನ್ನಣ್ಣ ವಾಲೀಕಾರ, ಗುಲಬರ್ಗಾ ವಿಶ್ವವಿದ್ಯಾಲಯ–೧೯೮೮: ಈ ಮಹಾ ಪ್ರಬಂಧವು ಗ್ರಾಮದೇವತೆಗಳ ಪರಿಕಲ್ಪನೆ, ಗ್ರಾಮದೆವತೆಗಳಲ್ಲಿ ಕಂಡುಬರುವ ವರ್ಗೀಕರಣವನ್ನು ತಿಳಿಸಿಕೊಡುತ್ತದೆ. ಹೈದರಾಬಾದ್ ಕರ್ನಾಟಕದಲ್ಲಿ ಕಂಡುಬರುವ ಪ್ರಮುಖ ಗ್ರಾಮದೇವತೆಗಳ ಸಾಂಸ್ಕೃತಿಕ ಮೌಲ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ.

೧೦. ಹೈದರಾಬಾದ್ ಕರ್ನಾಟಕದ ಜಾತ್ರೆಗಳು: ಎಚ್.ಜಗನ್ನಾಥ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ–೧೯೯೫: ಈ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ದೈವಗಳು ಹಾಗೂ ಅವುಗಳಿಗೆ ಸಂಬಂಧಿಸಿದಂತೆ ರೂಢಿಗತವಾಗಿ ಬಂದಿರುವ ಜಾತ್ರೆಗಳ ಸಾಂಸ್ಕೃತಿಕ ಮೌಲ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ.

೧೧. ಹೈದರಾಬಾದ್ ಕರ್ನಾಟಕದ ಹೆಣ್ಣುಮಕ್ಕಳ ಹಾಡುಗಳು ಒಂದು ಅಧ್ಯಯನ: ಜಯಶ್ರೀ ಗಾಯಕ್ವಾಡ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ–೨೦೦೨: ಈ ಪ್ರದೇಶದ ಹೆಣ್ಣುಮಕ್ಕಳ ಹಾಡುಗಳ ಸಂಗ್ರಹಣೆ ಹಾಗೂ ವಿಶ್ಲೇಷಣೆ ಈ ಅಧ್ಯಯನದಲ್ಲಿ ನಡೆದಿದೆ. ಹೆಣ್ಣುಮಕ್ಕಳ ಹಾಡಿನ ಹಿನ್ನೆಲೆಯಲ್ಲಿ ಕಂಡುಬರುವ ಸಾಂಸ್ಕೃತಿಕ ಪದ್ಧತಿಗಳ ಪರಿಸರವನ್ನು ತಿಳಿಸಿಕೊಡುವುದಲ್ಲದೆ ಸಮಾಜ ವಿಜ್ಞಾನಗಳ ಹಿನ್ನೆಲೆಯಲ್ಲಿ ಹಾಡುಗಳನ್ನು ಅರ್ಥೈಸಿಕೊಡಲಾಗಿದೆ.

೧೨. ಹೈದರಾಬಾದ್ ಕರ್ನಾಟಕ ಜನಪದ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ: ಬಸವರಾಜ ಎಸ್. ಪೋಲೀಸ್ ಪಾಟೀಲ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೧೯೮೪: ಈ ಕೃತಿಯು ಗದ್ಯ, ಪದ್ಯ ಹಾಗೂ ಮಿಶ್ರ ಸಾಹಿತ್ಯ ಪ್ರಕಾರಗಳನ್ನೇ ಅಧ್ಯಯನದ ಆಕರವನ್ನಾಗಿ ಬಳಸಿಕೊಳ್ಳುವ ಈ ಅಧ್ಯಯನ ಆಯಾ ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಕಂಡುಬರುವ ಸಾಮಾಜಿಕ ವಿಷಯಗಳನ್ನೇ ತಿಳಿಸಿಕೊಡುತ್ತದೆ.

೧೩. ಹೈದರಾಬಾದ್ ಕರ್ನಾಟಕ ಪ್ರದರ್ಶನ ಕಲೆಗಳು: ಎಚ್.ಟಿ. ಪೋತೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೧೯೯೭: ಈ ಅಧ್ಯಯನವು ಜನಪದ ಪ್ರದರ್ಶನ ಕಲೆಗಳು ವೈಶಿಷ್ಟ್ಯತೆಯನ್ನು ತಿಳಿಸಿಕೊಡುವುದು. ಗೀತಪ್ರಧಾನ ಕತೆಗಳು, ನೃತ್ಯಪ್ರಧಾನ ಕಲೆಗಳು ಹಾಗೂ ವಾದ್ಯ ಪ್ರಧಾನ ಕಲೆಗಳೆಂಬ ವರ್ಗೀಕರಣವನ್ನು ಮಾಡಿದೆ. ಈ ವರ್ಗೀಕರಣಗಳ ಹಿನ್ನೆಲೆಯಲ್ಲಿ ಪ್ರದರ್ಶನ ಕಲೆಗಳನ್ನು ವಿಶ್ಲೇಷಿಸಿದ್ದಾರೆ.

೧೪. ಹೈದರಾಬಾದ್ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು: ಸಿಂಗೆ ಬುದ್ದಪ್ಪ ಶಂಕರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೪: ಈ ಪ್ರಬಂಧವು ಜನಪದ ಕಾವ್ಯ ಪ್ರಕಾರಗಳ ಪರಂಪರೆಯನ್ನು ತಿಳಿಸಿಕೊಡುತ್ತದೆ. ಇದಲ್ಲದೆ ಹೈದರಾಬಾದ್ ಕರ್ನಾಟಕ ಜನಪದ ವೃತ್ತಿಗಾಯಕರನ್ನು ಉಲ್ಲೇಖಿಸಿದ್ದಾರೆ. ಹಾಗೂ ಕಾವ್ಯಪ್ರಕಾರಗಳನ್ನು ವಿಶ್ಲೇಷಿಸಿದೆ. ಹೈದರಾಬಾದ್ ಕರ್ನಾಟಕ ಒಟ್ಟು ಪ್ರಾದೇಶಿಕತೆಗೆ ಸಂಬಂಧಿಸಿದಂತೆ ಮತ್ತು ಜನಪದೀಯ ಅಧ್ಯಯನಗಳನ್ನು ನೋಡಿದಾಗ ಇವು ಉಪಯುಕ್ತವಾದ ಮಾಹಿತಿಯನ್ನು ಒದಗಿಸಿಕೊಟ್ಟಿವೆ ಎನ್ನಬಹುದು.

೧೫. ಸಾಹಿತ್ಯ ಸಂಕಥನ ಸಂ. ಗವಿಸಿದ್ದಪ್ಪ ಎಚ್. ಪಾಟೀಲ್, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ-೨೦೦೫: ಇದು ಒಂದು ಮಹತ್ವದ ಕೃತಿ ಎಂದು ಹೇಳಬಹುದು. ಹೈದರಾಬಾದ್ ಕರ್ನಾಟಕ ಪ್ರದೇಶದ ಜಿಲ್ಲೆಗಳ ಐತಿಹಾಸಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ, ಸಾಹಿತ್ಯ ಸಮೀಕ್ಷೆ ವಿಶ್ಲೇಷಣೆಯ ಒಳನೋಟಗಳು ಇದರಲ್ಲಿವೆ. ಈ ಕೃತಿಯ ಹಿಂದೆ ಸಂಪಾದಕರ ಮನಸ್ಸಿನ ಹುಡುಕಾಟವಿದೆ. ಆಗಾಗ ಸಾಂದರ್ಭಿಕವಾಗಿ ಬರೆದ ಲೇಖನಗಳನ್ನೆಲ್ಲ ಒಂದೆಡೆ ಕಲೆಹಾಕಿ ಈ ಕೃತಿಯನ್ನು ಪ್ರಕಟಿಸಿದ್ದಾರೆ. ಜೈನಧರ್ಮ, ವಿಮೋಚನೆ, ಸಂಗೀತ ಹೀಗೆ ಬೇರೆ ಬೇರೆ ಕ್ಷೇತ್ರಗಳಿಗೆ ಸಂಬಂಧಿಸಿದ ವಿಷಯಗಳ ಬಗೆಗೂ ಇಲ್ಲಿ ಚರ್ಚಿಸಿದ್ದಾರೆ.

ಹೈದರಾಬಾದ್ ಕರ್ನಾಟಕ ಜನಪದ ಕಥಾಸಾಹಿತ್ಯದಲ್ಲಿ ಗಂಡುಹೆಣ್ಣಿನ ಸಂಬಂಧ ಎಂಬ ಶೀರ್ಷಿಕೆಯಡಿ ಕೈಗೊಂಡಿರುವ ಈ ಅಧ್ಯಯನವು ಈವರೆಗೂ ಕಂಡುಬಂದಿರುವ ಅಧ್ಯಯನಗಳಿಗಿಂತ ಭಿನ್ನವಾಗಿದೆ. ಹೀಗೆ ನಾನು ಗಮನಿಸಿದ ಕೆಲವು ಸಂಶೋಧನಾ ಮಹಾಪ್ರಬಂಧಗಳು ಏಕಮಾದರಿಯಲ್ಲಿ ಕೆಲವು ಪರಿಕಲ್ಪನೆಗಳನ್ನಿಟ್ಟುಕೊಂಡು ರಚಿಸಿರುವುದು ಕಂಡುಬರುತ್ತದೆ. ಜೊತೆಗೆ ಈ ಸಂದರ್ಭದಲ್ಲಿ ಕಾಣಿಸಿಕೊಂಡ ಜನಪದ ಕಥೆಗಳ ಸಾಂಸ್ಕೃತಿಕ ವಿದ್ಯಾಮಾನಗಳನ್ನು ಕುರಿತು ಬರೆದಿದ್ದೇನೆ. ಹಾಗೂ ಕಥೆಗಳಲ್ಲಿ ಕಂಡುಬರುವ ಗಂಡು ಹೆಣ್ಣಿನ ಸಂಬಂಧಗಳನ್ನು ಕೌಟುಂಬಿಕ ಹಿನ್ನೆಲೆಯನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

❋ ❋ ❋

ಅಧ್ಯಾಯ ಎರಡು

# ಹೈದರಾಬಾದ್ ಕರ್ನಾಟಕದ ಚಾರಿತ್ರಿಕ ಹಿನ್ನೆಲೆ

೨.೧. ಸಾಮಾಜಿಕ ಸ್ಥಿತಿಗತಿಗಳು

೨.೨. ಆರ್ಥಿಕ ಸ್ಥಿತಿಗತಿಗಳು

೨.೩. ಧಾರ್ಮಿಕ ಸ್ಥಿತಿಗತಿ

೨.೪. ಶೈಕ್ಷಣಿಕ ಸ್ಥಿತಿ

೨.೫. ಭೌಗೋಳಿಕ ಸ್ಥಿತಿಗತಿ

೨.೬. ಭಾಷಾ ಸ್ಥಿತಿಗತಿ

ಅಧ್ಯಾಯ ಎರಡು

# ಹೈದರಾಬಾದ್ ಕರ್ನಾಟಕದ ಚಾರಿತ್ರಿಕ ಹಿನ್ನೆಲೆ

**"ಕಾ**ವೇರಿಯಿಂದ ಮಾ ಗೋದಾವರಿ ವರಮಿರ್ದ ನಾಡಾದ ಕನ್ನಡದೊಳ್" ಎಂದು ಕವಿರಾಜಮಾರ್ಗಕಾರನು ಹೇಳಿರುವಂತೆ ಹೈದರಾಬಾದ್ ಕರ್ನಾಟಕದ ವ್ಯಾಪ್ತಿಯು ಬಹಳ ವಿಶಾಲವಾಗಿದೆ. ಇದರಲ್ಲಿ ಕಲಬುರ್ಗಿ, ಬೀದರ್, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ ಜಿಲ್ಲೆಗಳು ಸೇರಿಕೊಂಡಿವೆ. ಭಾರತ ದೇಶದಲ್ಲಿ ವಿದೇಶಿಯರ ಆಕ್ರಮಣಗಳು ಪ್ರಾರಂಭವಾದಾಗ ಹೈದರಾಬಾದ್ ಕರ್ನಾಟಕ ಭಾಗವಂತು ದಬ್ಬಾಳಿಕೆಯಲ್ಲಿಯೇ ಸವೆಯಿತು. ಬಹಮನಿ ಅರಸರು, ನಿಜಾಮಶಾಹಿ ಅರಸರು, ಆದಿಲ್‌ಶಾಹಿ ಅರಸರು, ಕುತುಬ್‌ಶಾಹಿ ಅರಸರು, ಬರೀದ್‌ಶಾಹಿ ಅರಸರು ಈ ಪ್ರದೇಶವನ್ನು ಆಳಿದರು. ಬ್ರಿಟೀಷರು ಭಾರತ ದೇಶವನ್ನು ಆಳುತ್ತಿದ್ದ ಸಮಯದಲ್ಲಿ ನಾಲ್ಕು ನೂರಕ್ಕೂ, ಹೆಚ್ಚು ಸಂಸ್ಥಾನಗಳಲ್ಲಿ ಸ್ವದೇಶಿ ಆಳರಸರ ಆಡಳಿತವಿದ್ದಿತು. ಅಂತಹ ಆಡಳಿತದಲ್ಲಿ ನಿಜಾಮ್‌ಶಾಹಿ ಆಡಳಿತವು ಒಂದು. 'ನಿಜಾಮ್' ಎನ್ನುವುದು ಹೈದರಾಬಾದಿನ ಮಹಮ್ಮದೀಯ ದೊರೆಗಳಿಗೆ ಇದ್ದ ಒಂದು ಬಿರುದು.[೧] ಹಲವಾರು ರಾಜಮನೆತನಗಳು ಆಳಿದ ಈ ಪ್ರದೇಶದ ಇತಿಹಾಸದ ಭವ್ಯ ಪರಂಪರೆ ಸಿಗುತ್ತದೆ.

ಔರಂಗಜೇಬನು ದಕ್ಷಿಣ ಭಾರತದಲ್ಲಿ ತನ್ನ ದಂಡಯಾತ್ರೆ ಮುಗಿಸಿಕೊಂಡು ಮರಳುವಾಗ ತನ್ನ ಅಧೀನದಲ್ಲಿದ್ದ ದಖ್ಖನ್ನಿನ ಅನೇಕ ಭಾಗಗಳನ್ನು ನೋಡಿಕೊಳ್ಳಲು ಸುಬೇದಾರರನ್ನು ನೇಮಿಸಿದ್ದ. ಈ ಸುಬೇದಾರರು ದೆಹಲಿಯ ಅಸ್ಥಿರತೆಯನ್ನು ಅರಿತುಕೊಂಡು ತಮ್ಮ ತಮ್ಮ ಅಧೀನದ ಪ್ರದೇಶಗಳಲ್ಲಿ ಸ್ವತಂತ್ರರಾಗಲು ಪ್ರಯತ್ನಿಸಿದರು. ೧೭೭೪ರಲ್ಲಿ ಕಮರುದ್ದೀನ್ ಎಂಬ ಸುಬೇದಾರನು ಔರಂಗಬಾದನ್ನು ಕೇಂದ್ರವಾಗಿಟ್ಟುಕೊಂಡು ಸ್ವತಂತ್ರವಾಗಿ ಅಧಿಕಾರ ನಡೆಸತೊಡಗಿದ. ಇವನಿಂದಲೇ ನಿಜಾಮ ವಂಶಸ್ಥರ ಆಳ್ವಿಕೆ ಪ್ರಾರಂಭವಾಯಿತು. ಇವನ ಆಳ್ವಿಕೆಯಿಂದ ರೂಪುಗೊಂಡ ಹೈದರಾಬಾದ್ ಪ್ರಾಂತ್ಯವನ್ನು ನೈಜಾಂ ಪ್ರಾಂತ್ಯವೆಂದು ಇತಿಹಾಸ ಮೂಲಗಳಿಂದ ತಿಳಿದುಬರುತ್ತದೆ.

ಚರಿತ್ರೆಯಲ್ಲಿ ಈ ಪ್ರಾಂತ್ಯವು ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಹಲವು ವಿಶಿಷ್ಟ ಸಂದರ್ಭಗಳಲ್ಲಿ ಮತ್ತು ಕಾಲಾವಧಿಯಲ್ಲಿ ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದಿದೆ. ಚಕ್ರವರ್ತಿ ಅಶೋಕನ ಕಾಲದಲ್ಲಿ ಬೌದ್ಧ ಧರ್ಮ ಪ್ರಸಾರ ಕೇಂದ್ರಗಳಾಗಿದ್ದ ಮಸ್ಕಿ, ಕೊಪ್ಪಳ ಈ ಪ್ರಾಂತ್ಯದಲ್ಲಿವೆ. ಬಾದಾಮಿಯ ಚಾಲುಕ್ಯರ ಅಧೀನಕ್ಕೆ ಈ ಪ್ರಾಂತ್ಯ ಬಂದ ಮೇಲೆ 'ಕನ್ನಡಿಗರಿಗೆ' ತಮ್ಮ ಸಂಸ್ಕೃತಿಯ ಸ್ವರೂಪವನ್ನು ರೂಪಿಸಿಕೊಳ್ಳಲು ಅನುಕೂಲವಾಯಿತು. ರಾಷ್ಟ್ರಕೂಟರ ಆಳ್ವಿಕೆಯಲ್ಲಿ ರಚನೆಗೊಂಡ ಕವಿರಾಜಮಾರ್ಗ ಕೃತಿಯಿಂದ ಕನ್ನಡ ಪ್ರದೇಶದ ಗಡಿರೇಖೆಗಳು ಕನ್ನಡಿಗರ ಪ್ರತಿಭೆ ಮತ್ತು ಅಂದಿನ ಎರಡು ಸಂಸ್ಕೃತಿಯ ಸತ್ವವನ್ನು ಅರಿಯಲು ಸಾಧ್ಯವಾಗಿದೆ.

೧೨ನೇ ಶತಮಾನದಲ್ಲಿ ವಚನಕಾರರ ಸಾಂಸ್ಕೃತಿಕ ಆಂದೋಲನಕ್ಕೆ ನೆಲೆಯಾದ ಕಲ್ಯಾಣ ಬಸವಣ್ಣನವರ ನೇತೃತ್ವದಲ್ಲಿ ಬೌದ್ಧಿಕ, ತಾತ್ವಿಕ, ವೈಚಾರಿಕ ಸಂಘರ್ಷಗಳಿಗೆ ಕಾರಣವಾಯ್ತು. ಇಂದಿಗೂ ಪ್ರಜ್ಞಾವಂತರು ಬೆರಗುಗೊಳಿಸುವ ವೈಚಾರಿಕ ಚಳುವಳಿ ನಡೆದದ್ದು ಈ ಪ್ರಾಂತ್ಯದಲ್ಲಿಯೇ. ಅನಂತರ ಉತ್ತರ ಭಾರತದ ಸುಲ್ತಾನರ ದಾಳಿಯಿಂದ ಅಸ್ಥಿರತೆ ಉಂಟಾಯಿತು. ಸುಲ್ತಾನರು ಈ ಪ್ರದೇಶದಲ್ಲಿ ಸ್ಥಿರವಾದ ರಾಜ್ಯವನ್ನೇನೂ ಕಟ್ಟಲಿಲ್ಲ. ಸುಮಾರು ನೂರು ವರ್ಷಗಳ ಕಾಲ ಈ ಪ್ರಾಂತ್ಯದ ಜನಸಮುದಾಯಗಳು ಯುದ್ಧದ ಭೀತಿಯಿಂದ ತಲ್ಲಣಿಸಿದವು. ಕಲಬುರ್ಗಿಯಲ್ಲಿ ಬಹಮನಿ ರಾಜ್ಯ ಉದಯವಾದರೂ ಅದು ಈ ಪ್ರಾಂತ್ಯದ ಜನರಿಗೆ ಪರಕೀಯವಾಗಿತ್ತು. ಆದರೆ ಕೆಲಕಾಲವಾದರೂ ಸ್ಥಿರವಾಗಿ ನಿಲ್ಲುವಂತೆ ಕಂಡಿತು. ತುಂಗಭದ್ರ ನದಿಯ ಈಚೆಗೆ ವಿಜಯನಗರ ಸಾಮ್ರಾಜ್ಯವು ಆಗಲೇ ಉದಯವಾಗಿತ್ತು. ಬಹಮನಿ ಅರಸರಿಗೂ ವಿಜಯನಗರ ಅರಸರಿಗೂ ಘರ್ಷಣೆ ನಡೆಯುತ್ತಿತ್ತು. ಇವೆರಡು ಪಡೆಗಳು ತಾವು ಆಕ್ರಮಿಸಿದ ಭಾಗವನ್ನೆಲ್ಲ ಕೊಳ್ಳೆಹೊಡೆಯುತ್ತ, ಸೂರೆ ಮಾಡುತ್ತ ಪ್ರದೇಶಗಳ ಜೀವನಕ್ಕೆ ಜರುಗಿದುದು ಸುಮಾರು ೨೫೦ ವರ್ಷಗಳವರೆಗೆ ನಡೆಯಿತು.[೨] ಈ ಯುದ್ಧಗಳಿಗೆ ಜನ ಸಮುದಾಯ ತತ್ತರಿಸಿ ಹೋಗಿತ್ತು. ಯುದ್ಧಗಳ ನೆರಳಲ್ಲೇ ಬದುಕು ವಂತಾಗಿತ್ತು. ಇದೇ ಸಂದರ್ಭದಲ್ಲಿ ನೂರಾರು ಜನ ಸೂಫಿಗಳು, ಅನುಭಾವಿಗಳು ಮತ್ತು ದಾಸರು ಕಾಣಿಸಿಕೊಂಡರು. ವಿಜಾಪುರದ ಆದಿಲ್‌ಶಾಹಿಗಳು ಈ ಪ್ರಾಂತ್ಯದಲ್ಲಿ ಸಾಮರಸ್ಯವನ್ನುಂಟುಮಾಡಲು ಶ್ರಮಿಸಿದರು. ಭಿನ್ನ ಮತ ಧರ್ಮೀಯರು ಸಂಘರ್ಷಗಳ ನಡುವೆಯೂ ಕೂಡಿ ಬಾಳಿ ನಂತರ ಸಾಂಸ್ಕೃತಿಕ ಪರಿಸರವನ್ನು ನಿರ್ಮಾಣ ಮಾಡಿದರು.

ವಿವಿಧ ಸಂಸ್ಕೃತಿಗಳ ಸಂಗಮವಾಗಿರುವ ಹೈದರಾಬಾದ್ ಕರ್ನಾಟಕ ಪ್ರದೇಶವು ಇತ್ತೀಚೆಗೆ ಅತ್ಯಂತ ಹೆಚ್ಚು ಚರ್ಚೆಗೆ, ಗಂಭೀರವಾದ ಚಿಂತನೆಗೆ ಪ್ರಾದೇಶಿಕ ಅಸಮಾನತೆಗೆ ಒಳಗಾಗಿರುವ ಪ್ರದೇಶವಾಗಿದೆ. ಹಾಗೆಯೇ ಕರ್ನಾಟಕದ ಅತ್ಯಂತ ಹಿಂದುಳಿದಿರುವ ಪ್ರದೇಶವೆಂಬ ಹಣೆಪಟ್ಟಿಯನ್ನು ಕಟ್ಟಿಕೊಂಡಿದೆ. ೧೯೪೭ ಆಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯ ಗಳಿಸಿ ರಾಷ್ಟ್ರಾದ್ಯಂತ ಸ್ವಾತಂತ್ರ್ಯೋತ್ಸವವನ್ನು ಆಚರಿಸಿದರೆ ಅಂದು ಹೈದರಾಬಾದಿನ ನಿಜಾಮ ಮಾತ್ರ ಭಾರತದಲ್ಲಿ ವಿಲೀನವಾಗದೇ ಹೈದರಾಬಾದ್ ಕರ್ನಾಟಕಕ್ಕೆ ಸ್ವಾತಂತ್ರ್ಯ ನೀಡಲಿಲ್ಲ. ಸೈನಿಕ ಕಾರ್ಯಾಚರಣೆ ಮೂಲಕ ೧೯೪೮ ಸೆಪ್ಟೆಂಬರ್ ೧೭ರಂದು "ಹೈದರಾಬಾದ್

ಕರ್ನಾಟಕ ವಿಮೋಚನಾ ದಿನ" ಎಂದು ಆಚರಿಸಲಾಗುತ್ತಿದೆ. ಹೀಗೆ ತನ್ನ ಅಸ್ತಿತ್ವವನ್ನೇ ವಿಭಿನ್ನವಾಗಿ ಗುರುತಿಸಿಕೊಂಡಿರುವಂಥ ಕರ್ನಾಟಕದ ಒಂದು ಭಾಗವೇ ಹೈದರಾಬಾದ್ ಕರ್ನಾಟಕ.

ಸ್ವಾತಂತ್ರ್ಯಪೂರ್ವದ ಕೊನೆಯ ಎರಡುವರೆ ದಶಕಗಳ ಅವಧಿಯಲ್ಲಿ ಆಳಿದ ನಿಜಾಮರ ಅಧೀನದಲ್ಲಿದ್ದ ಬೀದರ್, ಕಲಬುರ್ಗಿ, ರಾಯಚೂರು, ಕೊಪ್ಪಳ ಮತ್ತು ಯಾದಗಿರಿ ಜಿಲ್ಲೆಗಳನ್ನೊಳಗೊಂಡ ಈ ಪ್ರದೇಶವನ್ನು ಹೈದರಾಬಾದ್ ಕರ್ನಾಟಕ ಎಂದು ಕರೆಯಲಾಗುತ್ತದೆ. ಆಡಳಿತಾತ್ಮಕ ಅನುಕೂಲಕ್ಕಾಗಿ ಏಕೀಕರಣ ಸಂದರ್ಭದಲ್ಲಿ ಮದ್ರಾಸ್ ಪ್ರಾಂತ್ಯದಿಂದ ವರ್ಗಾವಣೆಯಾಗಿ ಕರ್ನಾಟಕವನ್ನು ಸೇರಿದ ಬಳ್ಳಾರಿ ಜಿಲ್ಲೆಯನ್ನು ಸಹ ಕಲಬುರ್ಗಿ ವಿಭಾಕ್ಕೆ ಸೇರಿಸಲಾಗಿದೆ. ಭಾಷಾವಾರು ಪ್ರಾಂತ್ಯಗಳು ರಚನೆಯಾದ ಸಂದರ್ಭದಲ್ಲಿ ೧೯೫೬ ನವೆಂಬರ್ ೧ರಂದು ಫಜಲ್ ಅಲಿ ವರದಿಯಂತೆ ಬೀದರ್, ಕಲಬುರ್ಗಿ, ರಾಯಚೂರು, ಕೊಪ್ಪಳ ಮತ್ತು ಯಾದಗಿರಿ ಅಖಂಡ ಮೈಸೂರು ರಾಜ್ಯವನ್ನು ಸೇರಿಕೊಂಡವು. ೧೯೭೩ರಲ್ಲಿ ಆಗಿನ ಮುಖ್ಯಮಂತ್ರಿಯಾಗಿದ್ದ ಡಿ. ದೇವರಾಜ ಅರಸು ಅವರ ಸರಕಾರವು ಮೈಸೂರು ರಾಜ್ಯಕ್ಕೆ ಕರ್ನಾಟಕ ಎಂದು ನಾಮಕರಣ ಮಾಡುವ ಮೂಲಕ ಒಂದು ದಿಟ್ಟ ಹಾಗೂ ಐತಿಹಾಸಿಕ ಕ್ರಮ ಕೈಗೊಂಡರು.

ಏಕೀಕರಣಗೊಂಡು ಹಲವಾರು ದಶಕಗಳೇ ಗತಿಸಿದರೂ ಇಂದಿಗೂ ಬೀದರ್, ಕಲಬುರ್ಗಿ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ ಜಿಲ್ಲೆಗಳನ್ನೊಳಗೊಂಡ ಭಾಗವನ್ನು ನಾವು ಹೈದರಾಬಾದ್ ಕರ್ನಾಟಕ ಪ್ರದೇಶವೆಂದು ಗುರುತಿಸಿಕೊಂಡಿದ್ದೇವೆ. ಹೈದರಾಬಾದ್ ನಿಜಾಮನ ಪ್ರಭುತ್ವದಿಂದ ಪ್ರಜಾಪ್ರಭುತ್ವದ ಜನಪ್ರತಿನಿಧಿಗಳಿಗೆ ಅಧಿಕಾರ ಹಸ್ತಾಂತರಗೊಂಡಾಗ ಕರ್ನಾಟಕ ಮತ್ತು ಅದರ ಸಮೃದ್ಧಿಯ ಕನಸು ಕಂಡ ಈ ಭಾಗದ ಜನರಿಗೆ ಬದಲಾವಣೆಯು ನೆಮ್ಮದಿ ಮತ್ತು ಸುಧಾರಣೆಯನ್ನು ತರಲಿಲ್ಲ. ಬದಲಾಗಿ ನಿಜಾಮ್ ಪ್ರಭುತ್ವದಿಂದ ಪ್ರಜಾಪ್ರಭುತ್ವದವರೆಗೆ ನಡೆದುಬಂದ ದಾರಿ ಅಸಮಾನತೆಯ ದಾರಿಯಾಯಿತು. ಇಲ್ಲಿನ ಜನರ ಬದುಕು ಅಭಿವೃದ್ಧಿಯ ಚಾಲನೆಗೆ ಒಳಪಡದೆ ನಿಂತ ನೀರಾಯಿತು. ಭಾಷಾವಾರು ರಾಜ್ಯ ರಚನೆಯಾಗಿ ಶತಮಾನದ ನಂತರವೂ ಇಂದು ರಾಜ್ಯದ ಒಂದು ಭಾಗವು ಪ್ರಗತಿ ಹೊಂದಿ ಸಮರ್ಥವಾಗಿದ್ದರೆ ಅದೇ ರಾಜ್ಯದ ಇನ್ನೊಂದು ಭಾಗವು ಅಭಿವೃದ್ಧಿಯಿಂದ ವಂಚಿತವಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ಅತೀ ಹಿಂದುಳಿದಿದೆ.

ಹೈದರಾಬಾದ್ ನಿಜಾಮನ ಪ್ರಾಂತ್ಯದಿಂದ ಕರ್ನಾಟಕಕ್ಕೆ ವರ್ಗಾವಣೆಯಾದ ಬೀದರ್, ಕಲಬುರ್ಗಿ, ರಾಯಚೂರು, ಕೊಪ್ಪಳ, ಬಳ್ಳಾರಿ ಮತ್ತು ಯಾದಗಿರಿ ಪ್ರದೇಶಗಳು ನಿಜಾಮನ ಆಳ್ವಿಕೆಗೆ ಒಳಪಟ್ಟಾಗಲೇ ನಿರ್ಲಕ್ಷ್ಯಕ್ಕೆ ಮತ್ತು ಅಸಮಾನತೆಗೆ ಒಳಪಟ್ಟಿದ್ದವು. ವಿಶಾಲ ಕರ್ನಾಟಕಕ್ಕೆ ಸೇರ್ಪಡೆ ಆದ ನಂತರವೂ ಈ ಪ್ರದೇಶಗಳ ಅಭಿವೃದ್ಧಿಯ ಸ್ಥಾನಮಾನದಲ್ಲಿ ಬದಲಾವಣೆ ಆಗದೆ ಹಿಂದುಳಿದ ಪ್ರದೇಶವೆಂಬ ಹಣೆಪಟ್ಟಿಯನ್ನು ಪಡೆದುಕೊಂಡಿದೆ. ಇದಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದರೆ ನಿಸರ್ಗದತ್ತ ಅಂಶಗಳ ಜೊತೆಗೆ ಮಾನವ ನಿರ್ಮಿತ ಅಂಶಗಳು ಬಹುಮಟ್ಟಿಗೆ ಗೋಚರಿಸುತ್ತವೆ. ಆಳಿದ ಸರಕಾರಗಳ ಜನಪ್ರತಿನಿಧಿಗಳ ಪ್ರಾಮಾಣಿಕ ಕಾಳಜಿ ಹಾಗೂ ಸಂಕಲ್ಪದ ಕೊರತೆಯಿಂದ ಸಂವಿಧಾನಬದ್ಧವಾಗಿ ದೊರಕಬಹುದಾದ ಸೌಲಭ್ಯಗಳನ್ನು ಪಡೆಯುವಲ್ಲಿ ವಿಫಲವಾಗಿದೆ. ಇಲ್ಲಿನ ಅಭಿವೃದ್ಧಿಗಾಗಿ ಅಸಮಾನತೆಯ ನಿವಾರಣೆಗಾಗಿ

ಸರಕಾರದಿಂದ ೧೯೯೧ರಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಲಾಯಿತು. ನಂತರ ಪ್ರಾದೇಶಿಕ ಅಸಮಾನತೆಯ ಸಮಸ್ಯೆಯನ್ನು ಅಧ್ಯಯನ ಮಾಡಿ ಅವುಗಳ ಪರಿಹಾರಕ್ಕೆ ಮಾರ್ಗೋಪಾಯಗಳನ್ನು ಸೂಚಿಸಲು ಖ್ಯಾತ ಅರ್ಥಶಾಸ್ತ್ರಜ್ಞ ಡಾ.ಡಿ.ಎಂ. ನಂಜುಂಡಪ್ಪನವರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರಿ ಸಮಿತಿಯನ್ನು (೨೦೦೨) ರಚಿಸಿ ವರದಿಯನ್ನು ಪಡೆಯಲಾಯಿತು. ಆದರೆ ಇಂತಹ ಕ್ರಮಗಳಿಂದ ತ್ವರಿತ ಬದಲಾವಣೆ, ಅಭಿವೃದ್ಧಿ ಕಾಣದೆ ಅಸಮಾಧಾನಗೊಂಡ ಕೆಲವು ಮುಖಂಡರು ಪ್ರತ್ಯೇಕ ರಾಜ್ಯದ ಬೇಡಿಕೆಯನ್ನಿಟ್ಟು ಹೋರಾಟ ಮಾಡುವ ಹಾದಿಯಲ್ಲಿದ್ದರು. ಹಾಗೆಯೇ ಸಂವಿಧಾನದ ೩೭೧ನೇ (ಜೆ) ಕಲಂನ ಪ್ರಯೋಜನ ಪಡೆಯುವ ಬಗ್ಗೆಯೂ ಹೋರಾಟವು ಆರಂಭವಾಗಿ ಇಂದು ಅದರ ಪ್ರಯೋಜನ ಪಡೆಯುವ ಸಂದರ್ಭ ಒದಗಿ ಬಂದಿದೆ.[೬]

ಸ್ವಾತಂತ್ರ್ಯ ಪಡೆದ ದಿನದಿಂದ ಇಂದಿನವರೆಗೆ ಹೈದರಾಬಾದ್ ಕರ್ನಾಟಕ ಪ್ರದೇಶವು ಪ್ರಾದೇಶಿಕ ಅಸಮಾನತೆ, ಬಡತನ, ಅಜ್ಞಾನ, ಬರಗಾಲದಿಂದ ತತ್ತರಿಸಿ ಕರ್ನಾಟಕದಲ್ಲಿಯೇ ಅತ್ಯಂತ ಹಿಂದುಳಿದ ಪ್ರದೇಶವೆಂದು ಗುರುತಿಸಿಕೊಂಡಿದೆ. ಹೀಗಾಗಿ ಈ ಪ್ರದೇಶದ ಸ್ಥಿತಿಗತಿಗಳನ್ನು ತಿಳಿಯಬೇಕಾದರೆ ಇಲ್ಲಿನ ಭೌಗೋಳಿಕತೆ, ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳು ಮತ್ತು ಇವುಗಳಿಂದಾದ ಬದಲಾವಣೆಗಳನ್ನು ಗುರುತಿಸುತ್ತ ಅಧ್ಯಯನ ಮಾಡುವುದರ ಮೂಲಕ ಇಲ್ಲಿನ ಜನರ ಬದುಕನ್ನು, ಸಮಸ್ಯೆಗಳನ್ನು, ವಾಸ್ತವ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಬೇಕಾಗುತ್ತದೆ.

ಹೈದರಾಬಾದ್ ಕರ್ನಾಟಕ ಪ್ರದೇಶವು ಪ್ರಾಚೀನ ಕಾಲದಿಂದಲೂ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ ಕೇಂದ್ರವಾಗಿದೆ. ಇದು ಅನೇಕ ರಾಜಮನೆತನಗಳನ್ನು ಮತ್ತು ರಾಜಕೀಯ ಏರಿಳಿತಗಳನ್ನು ಕಂಡಿದೆ. ಈ ಪ್ರದೇಶದಲ್ಲಿ ಕನ್ನಡ, ಉರ್ದು, ತೆಲುಗು, ಮರಾಠಿ ಮತ್ತು ಹಿಂದಿ ಭಾಷೆಗಳನ್ನಾಡುವ ಜನರಿದ್ದಾರೆ. ಹಿಂದೂ, ಮುಸ್ಲಿಮ್ ಜೈನ, ಬೌದ್ಧ ಹಾಗೂ ಕ್ರೈಸ್ತ ಹೀಗೆ ವಿವಿಧ ಧರ್ಮದ ಜನರಿದ್ದಾರೆ. ಇವರೆಲ್ಲರೂ ಸಮಾಜದ ಎಲ್ಲಾ ಕಾರ್ಯಗಳಲ್ಲಿ ಅನ್ಯೋನ್ಯವಾಗಿ ಬೆರೆತು ಬಾಳುತ್ತ ಬಂದಿದ್ದಾರೆ. ಹೈದರಾಬಾದ್ ಕರ್ನಾಟಕ ನೆಲದಲ್ಲಿ ಆಡಳಿತ ನಡೆಸಿದ ಅನೇಕ ರಾಜಮನೆತನ ಹಾಗೂ ನವಾಬರ ಕಾಲದಿಂದಲೂ ನಡೆದು ಬಂದ ಸಾಮಾಜಿಕ ಸಾಮರಸ್ಯವನ್ನು ಇಂದಿಗೂ ಸಹ ಇಲ್ಲಿನ ಜನರಲ್ಲಿ ಗುರುತಿಸಬಹುದಾಗಿದೆ. ವಿವಿಧ ಭಾಷೆ, ಜಾತಿ, ಪಂಥ, ಧರ್ಮಗಳ ವಿಭಿನ್ನ ಸಂಸ್ಕೃತಿಯಿಂದ ಕೂಡಿದ ಈ ಪ್ರದೇಶವು ಕರ್ನಾಟಕದಲ್ಲಿಯೇ ತನ್ನ ಸಾಮಾಜಿಕ ಸ್ಥಾನವನ್ನು ಪ್ರತ್ಯೇಕವಾಗಿ ಗುರುತಿಸಿಕೊಂಡಿದೆ. ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ದೃಷ್ಟಿಯಿಂದ ಅತ್ಯಂತ ಹಿಂದುಳಿದ ಪ್ರದೇಶವಾಗಿದ್ದು, ಇದರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಜೀವನವನ್ನು ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕಾದರೆ ಇಲ್ಲಿನ ರಾಜಕೀಯ ಸ್ಥಿತ್ಯಂತರಗಳು ಧಾರ್ಮಿಕ, ವೈವಾಹಿಕ, ಕೌಟುಂಬಿಕ ಜೀವನವನ್ನು ಅವಲೋಕಿಸಬೇಕಾಗುತ್ತದೆ.

### ೨.೧. ಸಾಮಾಜಿಕ ಸ್ಥಿತಿಗತಿಗಳು

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ವಿವಿಧ ಜಾತಿ, ಪಂಥ, ಭಾಷೆ, ಸಂಸ್ಕೃತಿಗಳು ನೆಲೆಯೂರಲು ಇಲ್ಲಿನ ರಾಜಕೀಯ ಸ್ಥಿತ್ಯಂತರಗಳೇ ಕಾರಣವಾಗಿವೆ. ಉತ್ತರದಿಂದ ಬಂದ ನಾನಾ ವರ್ಗದ ಜನರು

ಬೀದರ್, ಕಲಬುರ್ಗಿ, ರಾಯಚೂರು, ಬಳ್ಳಾರಿ ನಗರಗಳಲ್ಲಿ ನೆಲೆಸಿದರು. ಹೀಗಾಗಿ ದಖನ್ ಪ್ರಾಂತ್ಯದ ಭಾಷೆಗಳು, ಧರ್ಮಗಳು ಮತ್ತು ಸಂಸ್ಕೃತಿಗಳು ಇಸ್ಲಾಮಿನೊಡನೆ ಮುಖಾಮುಖಿಯಾದವು. ಮರಾಠಿ, ಕನ್ನಡ, ತೆಲುಗು ಭಾಷಿಗರ ಪ್ರಭುತ್ವದ ಭಾಷೆಗಳೊಡನೆ ಅನಿವಾರ್ಯವಾಗಿ ಹೊಂದಾಣಿಕೆ ಮಾಡಿಕೊಳ್ಳುವ ಸಂದರ್ಭಗಳು ನಿರ್ಮಾಣವಾದವು. ಹೀಗಾಗಿ ಹಿಂದೂ ಮುಸ್ಲಿಂ ಜನ ಸಮುದಾಯಗಳು ಅನೇಕ ಕಾರಣಗಳಿಂದಾಗಿ ಒಂದು ಕಡೆ ಬೆರೆಯುವ ಒತ್ತಡಗಳಿಗೆ ಒಳಗಾದರು ಎಂದು ತಿಳಿಯಬಹುದು.

ಇಲ್ಲಿ ಆಳ್ವಿಕೆ ಮಾಡುತ್ತಿದ್ದ ಸುಲ್ತಾನರು ಜನರ ಮೇಲೆ ಒತ್ತಾಯವಾಗಿ ಇಸ್ಲಾಮ್ ಧರ್ಮವನ್ನು ಹೇರಲು ಪ್ರಯತ್ನಿಸುತ್ತಿದ್ದುದು ಒಂದೆಡೆಯಾದರೆ, ಇಸ್ಲಾಂ ಧರ್ಮವನ್ನು ಹರಡಬೇಕೆಂಬ ಗುರಿಯನ್ನು ಹೊತ್ತು ಬಂದಿದ್ದ ಸೂಫಿಗಳು ತಮ್ಮದೇ ಆದ ಧಾರ್ಮಿಕ ನೀತಿಯಿಂದ, ವ್ಯಕ್ತಿತ್ವದಿಂದ ಸ್ಥಳೀಯ ಕೆಳವರ್ಗದವರನ್ನು ಆಕರ್ಷಿಸಿ ಸಹಬಾಳ್ವೆಯನ್ನು ರೂಢಿಸಿದರು. ಸ್ಥಳೀಯರು ಅದರಲ್ಲೂ ಕೆಳವರ್ಗದವರು ಮೇಲ್ವರ್ಗಗಳ ಧರ್ಮ, ಧಾರ್ಮಿಕ ಆಚರಣೆಗಳು ಹಾಗೂ ಜಾತಿ ಪದ್ಧತಿಯಿಂದ ಬೇಸತ್ತಿದ್ದರು. ಆಸ್ಪೃಶ್ಯರು ಅವಮಾನಿತರಾಗಿ ಬದುಕುವ ಕ್ರಮದಿಂದ ಬಿಡುಗಡೆಯಾಗಲು ಬಯಸುತ್ತಿದ್ದರು. ಸಾಮಾನ್ಯ ಜನರ ಇಂತಹ ಹಂಬಲಗಳು ಮತಾಂತರಿಗಳಿಗೆ ಪ್ರಚೋದನೆ ನೀಡಿದವು. ಇಸ್ಲಾಂ ಧರ್ಮಕ್ಕೆ ಸೇರುವುದರಿಂದ ಸಾಮಾಜಿಕವಾಗಿ, ಆರ್ಥಿಕವಾಗಿ ಲಾಭ ಪಡೆಯುವುದರೊಂದಿಗೆ ಉತ್ತಮ ಬಾಳ್ವೆ ನಡೆಸುವ ಅವಕಾಶಗಳನ್ನು ಪಡೆಯುತ್ತಿದ್ದರು. ಬಿ.ಷೇಕ್‌ಅಲಿಯವರು ಅಭಿಪ್ರಾಯಪಟ್ಟಿರುವಂತೆ ಒಬ್ಬ ವ್ಯಕ್ತಿಯು ಇಸ್ಲಾಂ ಧರ್ಮದ ತೆಕ್ಕೆಗೆ ಬಂದನೆಂದರೆ ಅವನಿಗೆ ಉತ್ತಮ ಉದ್ಯೋಗಾವಕಾಶ ದೊರೆಯುತ್ತಿತ್ತು ಹಾಗೂ ಅವನ ಸಾಮಾಜಿಕ ಸ್ಥಾನಮಾನ ಮೇಲೇರುತ್ತಿದ್ದುದು ಮಾತ್ರವಲ್ಲದೆ, ಸರಕಾರಿ ಉದ್ಯೋಗದಿಂದಲೋ ಇಲ್ಲವೇ ಯಾವುದಾದರೂ ಕಲೆಯನ್ನೋ, ಕಸಬನ್ನೋ ಕಲಿಯುವ ಮೂಲಕವಾಗಿ ಅವನ ಆರ್ಥಿಕ ಪರಿಸ್ಥಿತಿ ಉತ್ತಮವಾಗುತ್ತಿತ್ತು. ಆ ಮೊದಲು ಅವನು ಕೇವಲ ಒಬ್ಬ ಜೀತದಾಳು ಆಗಿರುತ್ತಿದ್ದನು.

ಹದಿನಾಲ್ಕು ಮತ್ತು ಹದಿನೈದನೆಯ ಶತಮಾನದಲ್ಲಿ ಈ ಪ್ರಾಂತ್ಯದಲ್ಲಿ ಕಾಣಿಸಿಕೊಂಡ ಮತ್ತೊಂದು ಪ್ರಮುಖ ಬೆಳವಣಿಗೆ ಎಂದರೆ ದಖನಿ, ಉರ್ದು ಭಾಷೆಯ ಹುಟ್ಟು ಮತ್ತು ಬೆಳವಣಿಗೆ. ಎತ್ತರದಿಂದ ಹೈದರಾಬಾದ್ ಕರ್ನಾಟಕ ಭಾಗದ ಸಾಮಾಜಿಕ ಜನಜೀವನದ ಪ್ರಮುಖ ಲಕ್ಷಣವೆಂದರೆ ಅವಿಭಕ್ತ ಕುಟುಂಬ ಪದ್ಧತಿ. ಹಿಂದೂಗಳಲ್ಲಿ ತೀರಾ ಇತ್ತೀಚಿನವರೆಗೂ ಅವಿಭಕ್ತ ಕುಟುಂಬ ಪ್ರಧಾನವಾಗಿತ್ತು; ಇಂದಿಗೂ ಕೆಲವು ಮನೆತನಗಳು ಯಾವುದೇ ಪ್ರಶ್ನೆ ಮಾಡದೆ ಇಂತಹ ಪದ್ಧತಿಯನ್ನು ಒಪ್ಪಿಕೊಂಡು ಕುಟುಂಬದ ಯಜಮಾನನಿಗೆ ಸೂಕ್ತ ಗೌರವ ನೀಡುತ್ತಾ ಸಾಮರಸ್ಯದಿಂದ ಬಾಳುತ್ತಿವೆ. ಹಲವಾರು ತಲೆಮಾರುಗಳಿಂದ ಪರಂಪರಾಗತವಾಗಿ ಬಂದ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ಅವಿಭಕ್ತ ಕುಟುಂಬಗಳು ಮಹತ್ವದ ಪಾತ್ರವಹಿಸಿವೆ. ಆದರೆ ಇತ್ತೀಚೆಗೆ ನಗರೀಕರಣದಿಂದ, ಔದ್ಯೋಗೀಕರಣದಿಂದ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವದಿಂದ ಸಮಾಜದಲ್ಲಿ ಬದಲಾವಣೆ ಉಂಟಾಗುತ್ತಿವೆ. ಇಂದು ಅವಿಭಕ್ತ ಕುಟುಂಬಗಳ ಸಂಖ್ಯೆ ತೀರಾ ಕಡಿಮೆಯಾಗುತ್ತ ವಿಭಕ್ತ ಕುಟುಂಬಗಳ ಸಂಖ್ಯೆ ಹೆಚ್ಚಾಗುತ್ತಿವೆ.

ಹೈದರಾಬಾದ್ ಕರ್ನಾಟಕ ಭಾಗದ ಸಾಮಾಜಿಕ ಜೀವನದ ಬಗ್ಗೆ ಅಧ್ಯಯನ ಮಾಡುವಾಗ ತಿಳಿದುಬರುವಂತೆ ಈ ಭಾಗದಲ್ಲಿ ಅನೇಕ ಜಾತಿಗಳಿವೆಯೆಂದು ಸಾಹಿತ್ಯಿಕ ಮೂಲಗಳು, ಶಾಸನಗಳು ಹಾಗೂ ಮುಂತಾದ ದಾಖಲೆಗಳಿಂದ ತಿಳಿದುಬರುತ್ತದೆ. ಇಲ್ಲಿ ಕಂಡುಬರುವ ಮುಖ್ಯ ಜಾತಿಗಳೆಂದರೆ ಬ್ರಾಹ್ಮಣ, ಲಿಂಗಾಯತ, ಮರಾಠ, ರಜಪೂತ, ಬೇಡ, ಪಾಂಚಾಳ, ಮಡಿವಾಳ, ದೇವಾಂಗ, ರೆಡ್ಡಿ, ಕುರುಬ, ವಡ್ಡರ, ಮಾಲ–ಮಾದಿಗ, ಹೊಲೆಯ (ಹರಿಜನ) ಮತ್ತು ಗೌಳಿ ಇತ್ಯಾದಿ.

ಹೈದರಾಬಾದ್ ಕರ್ನಾಟಕ ಭಾಗದ ವಿವಾಹ ಸಂಬಂಧಗಳಲ್ಲಿ ವಿವಿಧ ಜಾತಿ, ಜನಾಂಗಗಳಲ್ಲಿ ತಮ್ಮದೇ ಆದ ಆಚಾರ ಪದ್ಧತಿಗಳು ರೀತಿ–ನೀತಿ, ವಿಧಿ–ವಿಧಾನಗಳು ಹಾಗೂ ಕಟ್ಟುಪಾಡುಗಳನ್ನು ಪಾಲಿಸಲಾಗುತ್ತದೆ. ವಿವಾಹ ಸಾಮಾಜಿಕ ಜೀವನದ ಮಹತ್ವವಾದ ಘಟ್ಟವಾಗಿದೆ. ವಿವಾಹವು ಕೇವಲ ದೈಹಿಕ ಬಂಧನವಾಗಿರದೆ ನೈತಿಕ ಹಾಗೂ ತಾತ್ವಿಕ ಸಂಬಂಧವೆಂದು ನಂಬಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯೂ ಜೀವನದಲ್ಲಿ ವಿವಾಹ ಸಂಸ್ಕಾರವನ್ನು ಪಡೆಯಲೇಬೇಕೆಂಬ ನಿಯಮ ಇದೆ. ಸಾಮಾನ್ಯವಾಗಿ ಮದುವೆ ಸಮಾರಂಭಗಳು ಎರಡು ಅಥವಾ ಮೂರು ದಿನಗಳು ನಡೆಯುತ್ತವೆ. ಇಲ್ಲಿನ ಬ್ರಾಹ್ಮಣರಲ್ಲಿ ನಡೆಯುವ ಮದುವೆಗಳು ಇತರ ಭಾಗಗಳಿಗೂ ಯಾವ ವ್ಯತ್ಯಾಸಗಳು ಇಲ್ಲ. ಲಿಂಗಾಯಿತರ ಮದುವೆಗಳಲ್ಲಿ ಅಗ್ನಿಕುಂಡ ಇರುವುದಿಲ್ಲ. ಬದಲಾಗಿ ಪಂಚಕಲಶಗಳನ್ನು ಹೂಡುತ್ತಾರೆ. ಬ್ರಾಹ್ಮಣರಲ್ಲಿ ಅಗ್ನಿಕುಂಡಗಳ ಪೂಜೆ ಮಹತ್ವ ಪಡೆದುಕೊಂಡಿದೆ.

ಕ್ರಿಶ್ಚಿಯನ್ನರು ತಮ್ಮ ಮದುವೆಗಳನ್ನು ಚರ್ಚುಗಳಲ್ಲಿ ನಡೆಸುತ್ತಾರೆ. ಪಾದ್ರಿ ಅಥವಾ ಅವರಿಗಿಂತ ಮೇಲ್ಮಟ್ಟದ ಧರ್ಮಗುರುಗಳು ಮದುವೆಯ ವಿಧಿ–ವಿಧಾನಗಳನ್ನು ನೆರವೇರಿಸುವರು. ಮದುವೆಗೆ ಸಂಬಂಧಿಸಿದ ವಿಧಿ–ವಿಧಾನಗಳನ್ನು ಮುಗಿಸಿ, ಸರ್ವಿಸ್ ಓದಿದ ಮೇಲೆ ವಧು– ವರರು ಪರಸ್ಪರ ವಿವಾಹ ಬಂಧನಕ್ಕೆ ಸಮ್ಮತಿಸಿದ್ದಾರೆಯೇ ಎಂದು ಕೇಳಲಾಗುವುದು. ವಧು–ವರರ ಒಪ್ಪಿಗೆಯ ನಂತರ ವಿವಾಹವನ್ನು ಪವಿತ್ರೀಕರಿಸಲಾಗುತ್ತದೆ.[೪] ಮುಸ್ಲಿಮರ ವಿವಾಹ ಪದ್ಧತಿಯು ತನ್ನದೇ ಆದ ವಿಧಿ–ವಿಧಾನಗಳನ್ನು ಪಾಲಿಸುತ್ತಾ ಬಂದಿದೆ. ಕನ್ಯೆಯನ್ನು ಅವಳ ಸೋದರಮಾವನಿಗೆ ಮದುವೆ ಮಾಡಿ ಕೊಡುವುದನ್ನು ಕೆಲವು ಮುಸ್ಲಿಂ ಪಂಗಡದವರು ನಿಷೇಧಿಸುತ್ತಾರೆ. ಚಿಕ್ಕಪ್ಪ–ದೊಡ್ಡಪ್ಪಂದಿರ ಮಕ್ಕಳ ನಡುವೆ ಮದುವೆ ಮಾಡುವುದನ್ನು ಕೆಲವು ಮುಸ್ಲಿಂ ಪಂಗಡದವರು ಸಮ್ಮತಿಸುತ್ತಾರೆ. ಇಸ್ಲಾಂ ಧರ್ಮದ ಕೆಲವು ಮಿತಿಗನುಗುಣವಾಗಿ ಬಹುಪತ್ನಿತ್ವಕ್ಕೆ ಅವಕಾಶವಿದೆ. ಖಾಜಿಯು ನಿಕಾವನ್ನು ಓದುತ್ತಾನೆ ಮತ್ತು ಕಾರ್ಯಕಲಾಪಗಳನ್ನು ದಾಖಲಿಸಲಾಗುತ್ತದೆ. ಕುರಾನಿನ ಒಂದು ಅಧ್ಯಾಯವನ್ನು ಪಠಿಸಲಾಗುತ್ತದೆ.

### ೨.೨. ಆರ್ಥಿಕ ಸ್ಥಿತಿಗತಿಗಳು

ಆರ್ಥಿಕ ಜವಾಬ್ದಾರಿ ಎಂದರೆ ಕುಟುಂಬದ ಸದಸ್ಯರ ಜೀವನಕ್ಕೆ ಅವಶ್ಯವಾದ ಹಾಗೂ ಅಭಿವೃದ್ಧಿಗೆ ಪೂರಕವಾದ ವಸ್ತುಗಳು ಹಾಗೂ ಸೇವೆಗಳನ್ನು ಒದಗಿಸುವುದೇ ಆಗಿರುತ್ತದೆ. ಸಾಮಾನ್ಯವಾಗಿ ಪ್ರಭುತ್ವ ಇದನ್ನು ವಹಿಸಿಕೊಂಡು ನಿರ್ವಹಿಸಿರುತ್ತದೆ. ಜೀವನಾವಶ್ಯಕತೆಗಳು ಎಂದರೆ ಪ್ರಮುಖವಾಗಿ ಆಹಾರ, ಬಟ್ಟೆ, ವಸತಿ, ಪ್ರಾಥಮಿಕ ಶಿಕ್ಷಣ, ಪ್ರಾಥಮಿಕ ಆರೋಗ್ಯ ರಕ್ಷಣೆ ಸಾರ್ವಜನಿಕ ಸೇವೆಗಳು ಮುಂತಾದವುಗಳು.

ಅಭಿವೃದ್ಧಿ ಎಂದರೆ ಜೀವನದ ಗುಣಮಟ್ಟವನ್ನು ಉತ್ತಮಪಡಿಸಲು ಇರುವಂಥ ಅವಕಾಶಗಳು. ಜೀವನ ನಿರ್ವಹಣೆ ಮತ್ತು ಅಭಿವೃದ್ಧಿಯ ಸಾಧನೆ ಇವೆರಡಕ್ಕೂ ಅವಶ್ಯವಾದ ನೆರವನ್ನು ಒದಗಿಸುವುದು ಆರ್ಥಿಕ ಸಂಸ್ಥೆಯೇ ಆಗಿರುವುದರಿಂದ ಯಾವುದೇ ಸಮಾಜದಲ್ಲಿ ಆರ್ಥಿಕ ವ್ಯವಸ್ಥೆಯ ಪಾತ್ರ ಬಹುಮುಖ್ಯವಾದುದು.[೫] ಹೈದರಾಬಾದ್ ಸಂಸ್ಥಾನದ ಆದಾಯ ಭಾರತದಲ್ಲಿನ ೫೬೫ ಸಂಸ್ಥಾನಗಳಲ್ಲೇ ಹೆಚ್ಚಿನದಾಗಿತ್ತು. ಸಂಪನ್ಮೂಲಗಳ ಕೊರತೆ ಇರಲಿಲ್ಲ. ಆದರೂ ಜನರ ಜೀವನ ಮಟ್ಟ ಅತ್ಯಂತ ಕೀಳುಮಟ್ಟದ್ದಾಗಿತ್ತು. ಜನತೆಯ ಕುರಿತ ಪ್ರಭುತ್ವ ಧೋರಣೆಯೇ ಇದಕ್ಕೆ ಕಾರಣವಾಗಿತ್ತು. ೨೫,೬೯ ಚದರ ಮೈಲಿ ವಿಸ್ತೀರ್ಣ ಜಮೀನಿನ ಮೇಲೆ ಅಧಿಕಾರ ಪಡೆದಿದ್ದ ಜಮೀನ್ದಾರಿ ಪಾಳೆಗಾರಿಕೆಯಿಂದ ಗ್ರಾಮಾಂತರ ಜನರಿಗೆ ಆರ್ಥಿಕ ಸ್ವಾತಂತ್ರ್ಯವೇ ಇರಲಿಲ್ಲ. ಜಮೀನ್ದಾರರ ಕೈಕೆಳಗೆ ಜನರು ಬದುಕಬೇಕಾಗಿತ್ತು. ಜಮೀನ್ದಾರಿ ಪಾಳೆಗಾರಿಕೆ, ಸಾಂಪ್ರದಾಯಿಕ ಗುಲಾಮಿತನ, ಜೀತದ ದುಡಿಮೆ, ಅಮಾನವೀಯ ಹಾಗೂ ಭ್ರಷ್ಟ ಆಡಳಿತದಿಂದಾಗಿ ಆರ್ಥಿಕತೆಯೂ ಜರ್ಜರಿತವಾಗಿತ್ತು. ಸಾಮಾನ್ಯ ಜನರಿಂದ ಜಮೀನ್ದಾರರು ಜಮೀನನ್ನು ಮೋಸ ಕಪಟಗಳಿಂದ ಕಬಳಿಸುತ್ತಿದ್ದರು. ಅಧಿಕಾರವನ್ನು ತಮ್ಮ ವಶದಲ್ಲಿಟ್ಟುಕೊಂಡಿದ್ದ ಇವರು ಜನರ ಗಮನಕ್ಕೆ ಬಾರದೇ ಜಮೀನನ್ನು ತಮ್ಮ ಹೆಸರಿನಲ್ಲಿ ನೋಂದಾಯಿಸಿಕೊಂಡು ಕಾನೂನಿನ ಪ್ರಕಾರ ಮಾಲೀಕರಾಗಿ ಬಿಡುತ್ತಿದ್ದರು.[೬] ಹೀಗೆ ಜನಸಾಮಾನ್ಯರ ಸಂಪನ್ಮೂಲಗಳನ್ನು ಕಸಿದುಕೊಳ್ಳುವ ಮೂಲಕ ಅವರನ್ನು ನಿರ್ಗತಿಕರನ್ನಾಗಿ ಮಾಡಿ ಜೀವನ ನಿರ್ವಹಣೆಗೆ ಜಮೀನುದಾರರನ್ನೇ ಅವಲಂಬಿಸುವಂತೆ ಮಾಡಲಾಗುತ್ತಿತ್ತು.

ಯಾವ ಜಾತಿಯವರ ಆಸ್ತಿಯನ್ನಾದರೂ ಮುಸಲ್ಮಾನರು ಕೊಳ್ಳಬಹುದು. ಆದರೆ ಮುಸಲ್ಮಾನರ ಆಸ್ತಿಯನ್ನು ಮುಸ್ಲಿಮೇತರರು ಕೊಳ್ಳಬಾರದು. ಮುಸ್ಲಿಂ ಮತಕ್ಕೆ ಮತಾಂತರಗೊಂಡರೆ ಅಂಥವರು 'ಹಿಂದೂ'ಗಳಲ್ಲಿ ಸಾಲ ಮಾಡಿದ್ದರೆ ಅದನ್ನು ಮರಳಿಸಬೇಕಾಗಿಲ್ಲ ಎಂಬ ಫರ್ಮಾನನ್ನು ನಿಜಾಮ ಹೊರಡಿಸಿದ್ದನು.[೭] ಜನರ ಆರ್ಥಿಕ ದುಸ್ಥಿತಿಯನ್ನು ನಿಜಾಮ ರಾಜಕೀಯಕ್ಕೆ ಬಳಸಿಕೊಳ್ಳುತ್ತಿದ್ದ ಹುನ್ನಾರ ಇಲ್ಲಿ ಸ್ಪಷ್ಟವಾಗುತ್ತದೆ. ಸಾಮಾಜಿಕ ಸ್ಥರದಲ್ಲಿ ಆರ್ಥಿಕ ಏರುಪೇರು ಅಜಗಜಾಂತರವಾಗಿತ್ತು. ಶ್ರೀಮಂತರ ಬಡವರ ಮಧ್ಯದ ಕಂದಕ ತೀರ ದೊಡ್ಡದಾಗಿತ್ತು.

ಯಾವುದೇ ಪ್ರದೇಶದ ಆರ್ಥಿಕ ವ್ಯವಸ್ಥೆಯು ಆ ಪ್ರದೇಶದ ಭೌಗೋಳಿಕ ಹಾಗೂ ಔದ್ಯೋಗಿಕ ಸ್ಥಿತಿಗತಿಗಳೊಂದಿಗೆ ನೇರ ಸಂಬಂಧ ಹೊಂದಿರುತ್ತದೆ. ಅದೇ ರೀತಿ ಹೈದರಾಬಾದ್ ಕರ್ನಾಟಕದ ಆರ್ಥಿಕ ಸ್ಥಿತಿಗತಿಗಳು ಅಲ್ಲಿನ ಭೌಗೋಳಿಕ ಪರಿಸ್ಥಿತಿಯ ಮೇಲೆ ರೂಪುಗೊಂಡಿದೆ. ಸಾಧಾರಣವಾಗಿ ಹೈದರಾಬಾದ್ ಕರ್ನಾಟಕ ಎಂದಾಕ್ಷಣ ಎಲ್ಲರಿಗೂ ನೆನಪಾಗುವುದು ಬಿಸಿಲು, ಬರಗಾಲ, ಬಡತನ, ನಿರುದ್ಯೋಗ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುವ ಗ್ರಾಮಗಳು, ನಗರಗಳು, ಅಸಮರ್ಪಕ ಸಾರಿಗೆ ವ್ಯವಸ್ಥೆ, ಕುಡಿಯುವ ನೀರಿನ ಅಭಾವ ಹೀಗೆ ಅನೇಕ ಅಂಶಗಳ ಜೊತೆಗೆ ಕರ್ನಾಟಕದಲ್ಲಿಯೇ ಅತ್ಯಂತ ಹಿಂದುಳಿದ ಪ್ರದೇಶ ಎಂಬ ಹಣೆಪಟ್ಟಿಯೊಂದಿಗೆ ಮುಂದೆ ಬರುತ್ತದೆ. ಇಲ್ಲಿನ ಇಂತಹ ಸ್ಥಿತಿಗತಿಗೆ ಅನೇಕ ಕಾರಣಗಳಿವೆ. ವಸಾಹತುಶಾಹಿ ಆಡಳಿತದ ಅನುಕೂಲ ಪಡೆಯದ ಪ್ರದೇಶ ಇದಾಗಿದ್ದರಿಂದ ಅನೇಕ ಸೌಲಭ್ಯಗಳಿಂದ ವಂಚಿತವಾಯಿತು. ನಿಜಾಮರ ಆಳ್ವಿಕೆಯ ಕಾಲದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಯಿತು. ಸ್ವಾತಂತ್ರ್ಯದ

ನಂತರವು ಆಳಿದ ಸರ್ಕಾರಗಳ ಜನಪ್ರತಿನಿಧಿಗಳ ನಿರ್ಲಕ್ಷ್ಯ ಧೋರಣೆ ಮುಂತಾದ ಕಾರಣಗಳಿಂದ ಇದು ಕರ್ನಾಟಕದಲ್ಲಿಯೇ ಅತ್ಯಂತ ಹಿಂದುಳಿದ ಪ್ರದೇಶ ಎಂದು ಕರೆಯಿಸಿಕೊಳ್ಳುವಂತಾಯಿತು. ಹೀಗೆ ಒಟ್ಟು ಪ್ರದೇಶ ಅಭಿವೃದ್ಧಿಯಲ್ಲಿ ಹಿಂದುಳಿದಿದ್ದರಿಂದಾಗಿ ಅದು ಈ ಭಾಗದ ಆರ್ಥಿಕ ಪ್ರಗತಿಯ ಮೇಲೂ ದುಷ್ಪರಿಣಾಮ ಬೀರಿದೆ ಎನ್ನಬಹುದು.

ಹೈದರಾಬಾದ್ ಕರ್ನಾಟಕ ಭಾಗದ ಜನರ ಪ್ರಮುಖ ಉದ್ಯೋಗ ಕೃಷಿಯಾಗಿದೆ. ೭೦%ರಿಂದ ೭೫%ರಷ್ಟು ವ್ಯವಸಾಯವನ್ನೇ ಅವಲಂಬಿಸಿದ್ದಾರೆ. ಇಲ್ಲಿನ ಕಪ್ಪು ಮಣ್ಣು ಮತ್ತು ವಾಯುಗುಣ ಹತ್ತಿ, ತೊಗರಿ, ಎಣ್ಣೆಕಾಳು, ಬೆಳೆಗಳಿಗೆ ಅನುಕೂಲವಾಗಿದೆ. ಕೃಷ್ಣಾ, ಭೀಮಾ, ಕಾಗಿಣಾ, ಅಮಿಚಾರ, ಬೆಣ್ಣೆ, ತೋರೆ, ಮುಲ್ಲಾಮಾರಿ, ತುಂಗಭದ್ರದಂತೆ ಅನೇಕ ದೊಡ್ಡ ಮತ್ತು ಉಪನದಿಗಳು, ಹಳ್ಳಗಳು, ಕೆರೆಗಳು ಇಲ್ಲಿವೆ. ಆದರೆ ನೀರಾವರಿ ಮಾತ್ರ ತುಂಬಾ ಕಡಿಮೆಯಾಗಿದೆ. ಇದಕ್ಕೆ ಕಾರಣ ಅನೇಕ ದಶಕಗಳಿಂದ ಮುಗಿಯದ ನೀರಾವರಿ ಯೋಜನೆಗಳು ಹಾಗೂ ಮಳೆಗಾಲದ ನಂತರ ಅವುಗಳ ನೀರು ಬಹಳ ಬೇಗ ಖಾಲಿಯಾಗಿ ಜಲಾಶಯಗಳು ಬತ್ತಿ ಹೋಗುವ ಸಂಭವವೇ ಹೆಚ್ಚು. ಹೀಗಾಗಿ ಮಳೆಯಾಧಾರಿತ ಕೃಷಿಯ ಮೇಲೆ ಹೆಚ್ಚು ಜನ ಅವಲಂಬಿತರಾಗಿದ್ದಾರೆ. ಇಲ್ಲಿಯ ಮಣ್ಣು ವಿವಿಧ ಬೆಳೆಗಳನ್ನು ಬೆಳೆಯಲು ಅನುಕೂಲವಾಗಿದೆ. ಕಲಬುರ್ಗಿ, ಬೀದರ್, ಯಾದಗಿರಿ ಜಿಲ್ಲೆಗಳಲ್ಲಿ ಕಪ್ಪು ಮಣ್ಣು ಹೆಚ್ಚಿದ್ದು ತೊಗರಿ, ಜೋಳ, ಹತ್ತಿ, ಎಣ್ಣೆ ಬೀಜಗಳು, ನೆಲಗಡಲೆಗಳನ್ನು ಪ್ರಮುಖವಾಗಿ ಬೆಳೆದರೆ, ರಾಯಚೂರು, ಬಳ್ಳಾರಿ, ಕೊಪ್ಪಳ ಜಿಲ್ಲೆಗಳ ಪ್ರದೇಶದಲ್ಲಿ ಭತ್ತ, ಕಬ್ಬು ಹಾಗೂ ತೋಟಗಾರಿಕಾ ಬೆಳೆಗಳನ್ನು ಬೆಳೆಯುತ್ತಾರೆ. ಇದರ ಜೊತೆ ಹತ್ತಿ, ಮೆಕ್ಕೆಜೋಳ, ನೆಲಗಡಲೆ, ಹೊಗೆಸೊಪ್ಪು, ಸಜ್ಜೆ, ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ.[೮]

ಹೈದರಾಬಾದ್ ಕರ್ನಾಟಕದ ಜಿಲ್ಲೆಗಳು ಕೃಷಿ ಪ್ರಗತಿ ಕುರಿತಂತೆ ಇತ್ತೀಚಿಗೆ ಹಲವಾರು ಸಮಸ್ಯೆಗಳನ್ನು ಎದುರಿಸಿದರೆ, ಕಲಬುರ್ಗಿ ಒಳಗೊಂಡಂತೆ ಅನೇಕ ಜಿಲ್ಲೆಗಳಲ್ಲಿ ಮಳೆಯ ಪ್ರಮಾಣ ಕಡಿಮೆಯಾಗುತ್ತಿದೆ. ಅತೀವೃಷ್ಟಿ, ಅನಾವೃಷ್ಟಿ ವೈಪರೀತ್ಯಗಳಿಂದ ಉತ್ಪಾದನೆ ಕಡಿಮೆಯಾಗಿದೆ. ಇಲ್ಲಿನ ಕೃಷ್ಣ ಮೇಲ್ದಂಡೆ ಯೋಜನೆ, ಭೀಮಾ, ಸಿಂಟಲೂರ ಏತನೀರಾವರಿ ಯೋಜನೆ, ಚಂದ್ರಂಪಳ್ಳಿ ನೀರಾವರಿ ಯೋಜನೆ, ಹತ್ತಿಕುಣಿ, ಸೌದಾಗರ್ ಅಣೆಕಟ್ಟು, ಬೆಣ್ಣೆ ತೊರೆ, ಅಮಜಾರ ಯೋಜನೆಗಳು ಹಲವಾರು ವರ್ಷಗಳಿಂದ ನಿಧಾನಗತಿಯಲ್ಲಿ ಸಾಗಿವೆ. ಹೀಗಾಗಿ ಸಪ್ತನದಿಗಳ ನಾಡಿನಲ್ಲಿ ಜನ ನೀರಿಗಾಗಿ ಪರಿತಪಿಸುವಂತಾಗಿದೆ. ಇಂತಹ ಅನೇಕ ಸಮಸ್ಯೆಗಳು ಇಲ್ಲಿನ ಆರ್ಥಿಕ ಬೆಳವಣಿಗೆಯ ಹಿನ್ನಡೆಗೆ ಪರೋಕ್ಷ ಕಾರಣಗಳಾಗಿವೆ.

ಹೈದರಾಬಾದ್ ಕರ್ನಾಟಕದಲ್ಲಿ ಕೈಗಾರಿಕೆಗಳು ಅಷ್ಟು ಬೆಳವಣಿಗೆಯಾಗಿಲ್ಲ. ೧೯೮೦ರವರೆಗೆ ಬೀದರ್ ಉದ್ದಿಮೆ ಇಲ್ಲದ ಜಿಲ್ಲೆ ಎಂದೇ ಘೋಷಿಸಲ್ಪಟ್ಟಿತ್ತು. ಕಲಬುರ್ಗಿ ಜಿಲ್ಲೆಯಲ್ಲಿ ಹಿಂದಿನಿಂದಲೂ ಹತ್ತಿಬಟ್ಟೆ, ಸಿಮೆಂಟ್ ಮತ್ತು ಕಲ್ಲು ಪಾಲಿಶ್ ಮಾಡುವ ಕಾರ್ಖಾನೆಗಳಿವೆ. ಕಲಬುರ್ಗಿ ಜಿಲ್ಲೆಯ ಸುತ್ತಮುತ್ತ ಗುಣಮಟ್ಟದ ಹತ್ತಿ ಬೆಳೆಯುತ್ತಿದ್ದುದರಿಂದ ೧೮೮೪ರಲ್ಲಿ ಕಲಬುರ್ಗಿಯಲ್ಲಿ ಎಂ.ಎಸ್.ಕೆ.ಮಿಲ್ ಸ್ಥಾಪನೆಯಾಯಿತು. ಇಲ್ಲಿ ತಯಾರಾದ ಹತ್ತಿ ಬಟ್ಟೆಗಳನ್ನು ವಿದೇಶಗಳಿಗೂ ರಫ್ತು ಮಾಡಲಾಗುತ್ತಿತ್ತು. ಆದರೆ ಈಗ ನಷ್ಟದ ಕಾರಣ ಮಿಲ್ಲನ್ನು ಮುಚ್ಚಲಾಗಿದೆ. ಇನ್ನು ಇಲ್ಲಿನ ಎಸಿಸಿ ಸಿಮೆಂಟ್ ಪೂರೈಸುವ ವಾಸವದತ್ತಾ

ಸಿಮೆಂಟ್, ರಾಜಶ್ರೀ ಸಿಮೆಂಟ್ ಕಾರ್ಖಾನೆಗಳು ಇಡೀ ಭಾರತಕ್ಕೆ ಸಿಮೆಂಟನ್ನು ಪೂರೈಸುತ್ತಿದ್ದವು. ಹಾಗೆಯೇ ಸುಣ್ಣದ ಕಲ್ಲು, ವರಕದ ಮರಳು, ಚಿನ್ನ, ಕೆಂಪು ಕಾವಿಮಣ್ಣು, ತಾಮ್ರ, ಬೆಸ್ಸಮ್, ಸುಣ್ಣದ ಶಿಲೆ ಮುಂತಾದ ಖನಿಜ ನಿಕ್ಷೇಪಗಳು ಕಲಬುರ್ಗಿ ಜಿಲ್ಲೆಯ ಸುತ್ತಮುತ್ತ ಇದೆ. ಆದರೆ ಬಂಡವಾಳದ ಅಭಾವ, ಮೂಲಸೌಕರ್ಯಗಳ ಅಲಭ್ಯತೆ, ಅನಕ್ಷರತೆ, ಬಡತನದಿಂದ ಅಭಿವೃದ್ಧಿ ಕುಂಠಿತವಾಗುತ್ತಿದೆ. ಹೀಗಾಗಿ ಇಂದು ಕಲಬುರ್ಗಿ, ಬೀದರ್ ಜಿಲ್ಲೆಗಳಲ್ಲಿ ಹಲವಾರು ಉದ್ದಿಮೆಗಳು ಬೆಳೆಯುತ್ತಿರುವ ಮಾರುಕಟ್ಟೆಯ ಸ್ಪರ್ಧೆಯನ್ನು ಎದುರಿಸಲಾರದೆ ನಷ್ಟದಿಂದ ಮುಚ್ಚಿ ಹೋಗಿವೆ. ಪ್ರಸ್ತುತ ರಾಯಚೂರು ಜಿಲ್ಲೆಯ ಹಟ್ಟಿ ಚಿನ್ನದ ಗಣಿ ಪ್ರತಿವರ್ಷ ಲಾಭ ಗಳಿಸುತ್ತಾ ಅನೇಕ ಕಾರ್ಮಿಕರಿಗೆ ಜೀವನ ಒದಗಿಸಿಕೊಟ್ಟಿದೆ. ಇಲ್ಲಿನ ಅನೇಕ ಉದ್ದಿಮೆಗಳ ಆರ್ಥಿಕ ಚಟುವಟಿಕೆಗಳಿಂದ ಅನೇಕ ಜನರಿಗೆ ಕೂಲಿಜೀವನ ದೊರೆತರೂ ಬಂಡವಾಳಗಾರರು, ಮಾಲೀಕರು ಉದ್ಧಾರವಾಗುತ್ತಿದ್ದಾರೆಯೇ ಹೊರತು ಸಾಮಾನ್ಯ ಜನರ ಆರ್ಥಿಕ ಸ್ಥಿತಿ ಜೀವನಮಟ್ಟ ಸುಧಾರಿಸಲು ಸಾಧ್ಯವಾಗಿಲ್ಲ. ಇಲ್ಲಿರುವ ಅವಕಾಶಗಳು ಹೊರ ರಾಜ್ಯದವರ ಒಡೆತನದಲ್ಲಿವೆ. ಬಳ್ಳಾರಿ ಜಿಲ್ಲೆಯಲ್ಲಿ ನೈಸರ್ಗಿಕ ಸಂಪತ್ತನ್ನಾಧರಿಸಿ ಆಧುನಿಕ ತಂತ್ರಜ್ಞಾನದ ಸಹಾಯದಿಂದ ಬೃಹತ್ ಕೈಗಾರಿಕೆಗಳು ಸ್ಥಾಪಿತವಾಗಿವೆ. ಸಾರ್ವಜನಿಕ ವರ್ಗದ ಎನ್.ಎಂ.ಡಿ.ಸಿ. ಸಂಸ್ಥೆ, ಜಿಂದಾಲ್ ವಿಜಯನಗರ ಉಕ್ಕು ಕಾರ್ಖಾನೆ, ತುಂಗಭದ್ರ ಸ್ಟೀಲ್ ಪ್ರಾಡೆಕ್ಟ್, ಕಿರ್ಲೋಸ್ಕರ್ ಕಲ್ಯಾಣ ಮುಂಕುಂದ ಕಾರ್ಖಾನೆಗಳು, ಸಂಡೂರಿನ ಮ್ಯಾಂಗನೀಸ್ ಮತ್ತು ಐರನ್ ಓರ್ಸ್ ಲಿಮಿಟೆಡ್; ಹೊಸಪೇಟೆಯ ಸಕ್ಕರೆ ಕಾರ್ಖಾನೆ, ಬಲ್ಡೋಟಾ ಕಂಪನಿ ಹಾಗೂ ಈ ಪ್ರದೇಶದಲ್ಲಿ ನಡೆಯುತ್ತಿರುವ ಖನಿಜ ನಿಕ್ಷೇಪಗಳು ಗಣಿಗಾರಿಕೆ ಉದ್ಯಮ, ಕಂಪ್ಲಿ–ಸಿರುಗುಪ್ಪ ಪ್ರದೇಶಗಳಲ್ಲಿನ ರೈಸ್ ಮಿಲ್‌ಗಳು ಬಳ್ಳಾರಿಯ ಜೀನ್ಸ್ ಉದ್ಯಮ ಇವು ಆರ್ಥಿಕವಾಗಿ ಅಭಿವೃದ್ಧಿ ಮಾದರಿಗಳಾಗಿವೆ.[೯] ಹೀಗೆ ಇಲ್ಲಿನ ಸಂಪನ್ಮೂಲಗಳು ಬೇರೆಯವರ ಪಾಲಾಗಿ ಹೋಗುತ್ತಿದೆ. ಇತ್ತೀಚೆಗೆ ಸಣ್ಣಪುಟ್ಟ ಉದ್ಯಮಗಳಿಗೆ ಸರಕಾರ ನೀಡುವ ಪ್ರೋತ್ಸಾಹ, ಸಾಲ ಸೌಲಭ್ಯ, ಸಬ್ಸಿಡಿಗಳಿಂದಾಗಿ ಇಲ್ಲಿ ಕೋಳಿ ಸಾಗಾಣಿಕೆ, ಕುರಿಸಾಗಾಣಿಕೆ, ಹಾಲು ಉತ್ಪಾದನೆ, ಬೀಜಗಳ ಉತ್ಪಾದನೆ ಮುಂತಾದ ಉದ್ದಿಮೆಗಳು ನಿಧಾನವಾಗಿ ಅಭಿವೃದ್ಧಿಯಾಗುತ್ತಿವೆ. ಆದರೆ ಹೈದರಾಬಾದ್ ಕರ್ನಾಟಕ ಆರ್ಥಿಕ ಸ್ಥಿತಿಯನ್ನು ಇಡೀ ರಾಜ್ಯಕ್ಕೆ ಹೋಲಿಸಿದರೆ ಈ ಪ್ರದೇಶವು ಅತ್ಯಂತ ಕೆಳಮಟ್ಟದಲ್ಲಿದೆಯಲ್ಲದೆ ಅನೇಕ ಆರ್ಥಿಕ ಸಮಸ್ಯೆಗಳನ್ನು ಅಸಮಾನತೆಯನ್ನು ಎದುರಿಸುತ್ತಿದೆ.

### ೨.೩. ಧಾರ್ಮಿಕ ಸ್ಥಿತಿಗತಿ

ವಿಶ್ವದಾದ್ಯಂತ ಇಂದಿಗೂ ಜನಜೀವನದ ಹಾಗೂ ಸಂಸ್ಕೃತಿಗಳ ಮೇಲೆ ಪ್ರಭಾವವನ್ನು ಬೀರುತ್ತಿರುವುದು ಧರ್ಮ. ಸಮಾಜವನ್ನು ಕುರಿತು ವ್ಯವಸ್ಥಿತ ಅಧ್ಯಯನ ಪ್ರಾರಂಭವಾಗುವ ಮೊದಲೇ ಸಮಕಾಲೀನ ಸಮಾಜವನ್ನು ಕುರಿತ ಚಿತ್ರಣ ಧರ್ಮಗ್ರಂಥಗಳಲ್ಲಿ ದೊರೆಯುತ್ತಿದ್ದು, ಧರ್ಮ ಸಮಾಜದ ಒಂದು ಅವಿಭಾಜ್ಯ ಅಂಗವಾಗಿದೆ. ಧರ್ಮ ಸಾಮಾಜಿಕ ಮೌಲ್ಯಗಳನ್ನು ರೂಪಿಸುವಲ್ಲಿ ಹಾಗೂ ಆಚರಣೆಗಳನ್ನು ನಿರ್ದೇಶಿಸುಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುವುದರಿಂದ ಪುರುಷ ಪ್ರಧಾನತೆಯನ್ನು, ಸ್ತ್ರೀಯ ಪರಾಧೀನತೆಯನ್ನು ಬೆಂಬಲಿಸುವ ವ್ಯವಸ್ಥೆ ಜಗತ್ತಿನ ಎಲ್ಲಾ ಧರ್ಮಗಳಲ್ಲೂ ಕಂಡುಬರುತ್ತದೆ. ಧಾರ್ಮಿಕ ಕಾರ್ಯ ಕೈಗೊಳ್ಳಲು

ಅನುಮತಿ ಇರಲಿಲ್ಲ. ರಾಜಮಹಾರಾಜರ ನೆರವಿನಲ್ಲಿ ನಡೆಯುತ್ತಿದ್ದ ಧಾರ್ಮಿಕ ಸಂಸ್ಥೆಗಳು ಮುಸ್ಲಿಂ ರಾಜರ ಆಳ್ವಿಕೆಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾದವು. ಹಿಂದೂಗಳನ್ನು ಮುಸ್ಲಿಮರಾಗಿ ಮತಾಂತರಿಸುವ ಕಾರ್ಯ ಹಾಗೂ ದೇವಾಲಯಗಳನ್ನು ಮಸೀದಿಗಳಾಗಿ ಮಾಡುವ ಕಾರ್ಯ ರಜಾಕಾರರ ನೇತೃತ್ವದಲ್ಲಿ ತೀವ್ರಗತಿಯಲ್ಲಿ ನಡೆಯಿತು. ಮುಸ್ಲಿಂ ಧರ್ಮೀಯನಾಗಿದ್ದ ನವಾಬನು ಆಡಳಿತ ಸೂತ್ರಗಳನ್ನು ಮುಸ್ಲಿಮ್ ಅಧಿಕಾರಿಗಳ ವಶಕ್ಕೆ ಕೊಟ್ಟಿದ್ದನು. ಇದರಿಂದ ಸಂಸ್ಥಾನದ ಪ್ರಜೆಗಳ ಮೇಲೆ ಉಂಟಾಗಬಹುದಾದ ದುಷ್ಪರಿಣಾಮಗಳ ಬಗ್ಗೆ ಅವನು ತಲೆಕೆಡಿಸಿಕೊಳ್ಳಲಿಲ್ಲ. ಖಜಾನೆಗೆ ಕಂದಾಯ ಸಂದಾಯವಾಗುವುದು ಮಾತ್ರ ನಿಜಾಮನಿಗೆ ಮುಖ್ಯವಾಗಿತ್ತು. ಈ ಪ್ರದೇಶದಲ್ಲಿ ಮುಸ್ಲಿಮರು ಗ್ರಾಮಾಂತರ ಪ್ರದೇಶಗಳಿಗಿಂತ ಹೆಚ್ಚಾಗಿ ಸಣ್ಣ ಸಣ್ಣ ನಗರಗಳಲ್ಲಿ ನೆಲೆಸಲು ಬಯಸುತ್ತಿದ್ದರು. ಇದರಿಂದಾಗಿ ನಗರಗಳಲ್ಲಿ ಹಿಂದೂಗಳ ಪ್ರಭಾವವನ್ನು ತಗ್ಗಿಸಲು ಬೇಕಾದ ಎಲ್ಲಾ ನೆರವನ್ನು ಮುಸ್ಲಿಮರಿಗೆ ಅಧಿಕಾರಿಗಳು ಒದಗಿಸುತ್ತಿದ್ದರು. ನಿಜಾಮನಿಗೆ ಮುಸ್ಲಿಮರು ದೇವರ ಮಕ್ಕಳಾಗಿಯೂ, ಇತರ ಧರ್ಮಾವಲಂಬಿಗಳು ಕಾಫಿರ್‌ರಾಗಿ ಕಾಣುತ್ತಿದ್ದರು. ಗ್ರಾಮಾಂತರ ಪ್ರದೇಶಗಳಲ್ಲಿ ಮಸೀದಿ ನಿರ್ಮಿಸಲು ಹಣಕಾಸು ನೆರವು ನೀಡಲಾಗುತ್ತಿತ್ತು. ಬ್ರಿಟಿಷ್ ಆಡಳಿತಗಾರರ ಸಮುದಾಯಕ್ಕೆ ಸೇರಿದ್ದ ಕ್ರಿಶ್ಚಿಯನ್ನರ ಬಗ್ಗೆ ನಿಜಾಮನ ಅಧಿಕಾರಿಗಳು ಮೃದುವಾಗಿದ್ದರು. ಇದರಿಂದಾಗಿ ಹೆಚ್ಚಾಗಿ ಹಿಂದೂಗಳು ತೀವ್ರವಾಗಿ ನೋವು ಅನುಭವಿಸಬೇಕಾಗುತ್ತಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿನ ಜನರು ಎಷ್ಟು ಮುಗ್ಧರಾಗಿದ್ದರೆಂದರೆ ಅವರು ನಿಜಾಮನನ್ನು ದೇವರೆಂದೇ ಪರಿಗಣಿಸಿದ್ದರು.

ಬಿ.ಸಿ. ಮಹಾಬಲೇಶ್ವರಪ್ಪ ಅವರ ಈ ವಿವರಣೆಯಲ್ಲಿ ಆಳರಸರ ಧರ್ಮ, ಜನಸಾಮಾನ್ಯರ ಮೇಲೆ ಹೇರಲ್ಪಡುವ ಮತ್ತು ಅದನ್ನೊಪ್ಪದ ಜನರನ್ನು ಹೀನಾಯವಾಗಿ ಕಾಣಲಾಗುತ್ತಿತ್ತೆಂದು ವಿವರಗಳು ದೊರೆಯುತ್ತವೆ. ಅಲ್ಲದೆ ನವಾಬ ತನ್ನ ಸಂಸ್ಥಾನದಲ್ಲಿದ್ದ ಮುಸ್ಲಿಂ ಪ್ರಜೆಗಳಲ್ಲಿ ಹಿಂದೂಗಳ ಬಗ್ಗೆ ದ್ವೇಷ ಕೆರಳುವಂತೆ ಮಾಡಿ ಅವರನ್ನು ತನ್ನ ಪರವಾಗಿ ಹೋರಾಟಕ್ಕಿಳಿಸಲು ಪ್ರಯತ್ನಿಸುತ್ತಿದ್ದನು. ಆದರೆ ಈ ಪ್ರಯತ್ನಗಳಲ್ಲಿ ನವಾಬನು ಸಫಲನಾಗಲಿಲ್ಲ. ಸಂಸ್ಥಾನದ ಮುಸ್ಲಿಂರಲ್ಲಿ ಒಂದು ಸಣ್ಣ ವಿಭಾಗ ನಿಜಾಮನ ಪರವಾಗಿದ್ದರೂ ಆಳ್ವಿಕೆಯಲ್ಲಿ ಬಹುಸಂಖ್ಯಾತ ಮುಸ್ಲಿಂ ಪ್ರಜೆಗಳು ಬೆಂಬಲ ಕೊಡಲಿಲ್ಲ. ಏಕೆಂದರೆ ನಿಜಾಮನ ಆಳ್ವಿಕೆಯಲ್ಲಿ ಅವರೂ ಕಡು ಬಡವರಾಗಿದ್ದು, ಶೋಷಿತರಾಗಿದ್ದರು.

ಮುಸ್ಲಿಂ ಆಳ್ವಿಕೆ ಬಹುದೀರ್ಘ ಕಾಲ ನಡೆದುದರಿಂದ ಇಸ್ಲಾಂ ಧರ್ಮ ಇತರ ಜನ ಸಮುದಾಯಗಳ ಮೇಲೆ ಬಹಳಷ್ಟು ಪ್ರಭಾವ ಬೀರಿತು. ಉತ್ತರದಿಂದ ಬಂದ ಸೂಫಿಗಳು ಈ ಪ್ರಾಂತ್ಯದ ಕೆಳ ಸಮುದಾಯಗಳಲ್ಲೂ ಒಂದೇ ಬಗೆಯ ಧಾರ್ಮಿಕ ನಂಬಿಕೆ, ಪದ್ಧತಿಗಳು ಇರಲಿಲ್ಲ. ಕೆಳವರ್ಗದ ಜನರ ಜೀವನ ಕ್ರಮಗಳೂ ಬೇರೆಯಾಗಿದ್ದವು. ಹೀಗಿರುವಾಗ ಮುಸ್ಲಿಂ ಆಳರಸರ ಆಳ್ವಿಕೆ ಮತ್ತು ಧಾರ್ಮಿಕತೆಯಿಂದ ಒಂದು ಬಗೆಯ ಸಂತರ ಸಂಸ್ಕೃತಿ ರೂಪುಗೊಳ್ಳುವಂತಾಯಿತು. ಹಿಂದೂ-ಮುಸ್ಲಿಮ್ ಸಂಸ್ಕೃತಿಗಳು ಒಂದರೊಳಗೊಂದು ಬೆರೆತು ಹೋದವು. ಇದನ್ನು ಕಪಟರಾಳ ಕೃಷ್ಣರಾವ್ ಅವರು ಹೀಗೆ ವ್ಯಕ್ತಪಡಿಸಿದ್ದಾರೆ. ಮುಸಲ್ಮಾನ ಫಕೀರರು ಗುರುಗಳಾದರು. ವೇದವು ಕುರಾನವು ಒಂದೇಯಾಯಿತು. ಈ ಫಕೀರರ ಗೋರಿಗಳೇ ದೇವಸ್ಥಾನ ಗಳಾದವು. ಕನ್ನಡಿಗರಿಗೆ ಗೋರಿಗಳು ಕುಲದೈವಗಳಾದವು. ಸಮಾಜದ ಮಾರ್ಗದರ್ಶಿಗಳಾದ ಮೇಲ್ಜಾತಿಯ

ಜನರ ಸ್ಥಿತಿಯು ಈ ರೀತಿಯಾಗಿ ಮಾನಸಿಕ ಬದಲಾವಣೆಯಾದಲ್ಲಿ ಸಮಾಜದ ಸಾಮಾನ್ಯ ಜನರು ಲಾಡಿ ಕಟ್ಟಿಕೊಂಡು ದೀನ್ ದೀನ್ ಎನ್ನುತ್ತ ಗೋರಿಗಳಿಗೂ ಫೀರ್‌ಗಳಿಗೂ ನೈವೇದ್ಯವನ್ನು ಕೊಡುವುದು ರೂಢಿಯಾದದ್ದೇನು ಆಶ್ಚರ್ಯದ ಮಾತೇನಲ್ಲ.[೧೦]

ಕಾಲ ಕಳೆದಂತೆ ೧೯೪೮ರ ಸೆಪ್ಟೆಂಬರ್ ೧೭ರಂದು ಹೈದರಾಬಾದ್ ಕರ್ನಾಟಕವನ್ನು ನಿಜಾಮನ ಅಧೀನದಿಂದ ಮುಕ್ತಿಗೊಳಿಸಿದರು. ಅದೇ ರೀತಿಯಾಗಿ ನವೆಂಬರ್ ೧-೧೯೫೬ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾಗಿ ಕರ್ನಾಟಕದಲ್ಲಿ ಸೇರಿದಂದಿನಿಂದ ಈ ಭಾಗದ ಪ್ರದೇಶದಲ್ಲಿ ಅನೇಕ ಧರ್ಮಗಳು ತಮ್ಮ ತಮ್ಮ ಧಾರ್ಮಿಕ ಆಚರಣೆಗಳನ್ನು ಆಚರಿಸಲು ಪ್ರಾರಂಭಿಸಿದರು.

ಬಹುತೇಕ ಜನರ ಬಾಳನ್ನು ರೂಪಿಸುವಲ್ಲಿ ಸಾಮಾಜಿಕ ಧಾರ್ಮಿಕ ಚಟುವಟಿಕೆಗಳನ್ನು ಸಂಘಟಿಸುವಲ್ಲಿ ಧರ್ಮವು ತನ್ನದೇ ಆದ ಪಾತ್ರವನ್ನು ವಹಿಸಿದೆ. ಇಲ್ಲಿ ವಾಸಿಸುವವರಲ್ಲಿ ಬಹುಪಾಲು ಜನರು ಹಿಂದೂಗಳು, ಮುಸ್ಲಿಮ್, ಬ್ರಾಹ್ಮಣರು, ಲಿಂಗಾಯಿತರು, ನಾಯಕರು, ಕುರುಬರು, ಗೌಳಿಗರು, ವಡ್ಡರು, ಉಪ್ಪಾರರು, ರಾಜಪೂತರು, ಗಾಣಿಗರು, ಮಡಿವಾಳರು, ಮರಾಠರು, ರೆಡ್ಡಿಗಳು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಸಹ ಹೆಚ್ಚಾಗಿದ್ದಾರೆ. ಇತರೆ ಜಾತಿ ಜನಾಂಗದವರು ನೆಲೆಸಿದ್ದಾರೆ. ೧೨ನೇ ಶತಮಾನದಲ್ಲಿ ಶರಣರು ಮಾಡಿದ ಸಾಮಾಜಿಕ ಮತ್ತು ಧಾರ್ಮಿಕ ಚಳುವಳಿಯಿಂದಾಗಿ ಆಯಾ ರಂಗದಲ್ಲಿ ಬದಲಾವಣೆ ಗಳಾದವು. ಅವರ ಪ್ರಭಾವ ಜನಜೀವನದ ಮೇಲೆ ಸಾಕಷ್ಟಾಗಿದೆ. ಇತರ ಧರ್ಮದವರಾದ ಮುಸ್ಲಿಂ, ಕ್ರೈಸ್ತರು, ಫಾರಸಿಗಳು, ಯಹೂದಿಗಳು ಸಾಕಷ್ಟು ಸಂಖ್ಯೆಯಲ್ಲಿದ್ದು ಧಾರ್ಮಿಕ ಕ್ಷೇತ್ರಕ್ಕೆ ಅಪಾರ ಕೊಡುಗೆ ಸಲ್ಲಿಸಿದ್ದಾರೆ. ಮುಸ್ಲಿಮರು ಕಲಬುರ್ಗಿ, ಯಾದಗಿರಿ, ಚಿತ್ತಾಪುರ, ಜೇವರ್ಗಿ, ಕೊಪ್ಪಳ ಮತ್ತು ಬೀದರ್‌ಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ಕ್ರಿಶ್ಚಿಯನ್ನರು ಹೆಚ್ಚಾಗಿ ಕಲಬುರ್ಗಿ, ಯಾದಗಿರಿ, ರಾಯಚೂರುನಲ್ಲಿ ನೆಲೆಸಿದ್ದಾರೆ. ಬೀದರ್‌ನಲ್ಲಿ ಸಿಖ್‌ರ ಜನಸಂಖ್ಯೆಯು ಹೆಚ್ಚಾಗಿದ್ದು ಕೆಲವು ಕ್ಷೇತ್ರಗಳಲ್ಲಿ ಅವರ ಪ್ರಭಾವ ಎದ್ದು ಕಾಣುತ್ತದೆ.

ಕಲ್ಯಾಣದ ಹೆಬ್ಬಾಗಿಲು ಎನಿಸಿದ ಕಲಬುರ್ಗಿಯಲ್ಲಿ ಶ್ರೀ ಶರಣಬಸವೇಶ್ವರ ಭವ್ಯ ದೇವಾಲಯವಿದೆ. ಇಲ್ಲಿ ಪ್ರತಿ ವರ್ಷವೂ ವಿಜೃಂಭಣೆಯಿಂದ ಜಾತ್ರೆ ನಡೆಯುತ್ತದೆ. ಇದೊಂದು ಪವಿತ್ರ ಯಾತ್ರಾಕ್ಷೇತ್ರವಾಗಿದೆ. ಕೇಂದ್ರ ಸರ್ಕಾರ ಇದನ್ನು ರಾಷ್ಟ್ರೀಯ ಪ್ರವಾಸಿ ಕೇಂದ್ರವೆಂದು ಪರಿಗಣಿಸಿದೆ. ಇದೇ ನಗರದಲ್ಲಿರುವ ಹಜರತ್ ಖಾಜಾ ಬಂದೇನವಾಜರ ದರ್ಗಾ ಇದೆ. ಹಜರತ್ ಖಾಜಾ ಬಂದೇನವಾಜರು ಒಬ್ಬ ಸಂತರು, ಮಹಾತ್ಮರು. ಜಾತಿ, ಮತ, ಪಂಥ ಯಾವ ಭೇದ-ಭಾವಗಳಿಲ್ಲದೆ ಎಲ್ಲಾ ಜನರೂ ಅವರನ್ನು ಗೌರವಿಸುತ್ತಾರೆ. ಈ ದರ್ಗಾ ದಕ್ಷಿಣ ಭಾರತದಲ್ಲಿಯೇ ಅತ್ಯಂತ ಶ್ರೇಷ್ಠವಾದುದಾಗಿದೆ. ಮೋನಪ್ಪನು (ತಿಂಥಿಣಿ ಮೌನೇಶ್ವರ) ಸುರಪುರ ತಾಲೂಕಿನ ದೇವರಗೋನಾಳದಲ್ಲಿ ಜನಿಸಿದ ಧರ್ಮ ಸಮನ್ವಯೀ ಸಂತ. ಹಿಂದೂ ಮುಸ್ಲಿಮರನ್ನು ಸಮಾನ ದೃಷ್ಟಿಯಿಂದ ಕಂಡ ಸಂತ. ಈತನ ಸಮಾಧಿಯ ಮೇಲೆ ಭವ್ಯವಾದ ಮಂದಿರವಿದೆ. ಈ ಗುಡಿ ಹಿಂದೂ-ಮುಸ್ಲಿಮ್ ಸಮ್ಮಿಶ್ರ ಸಂಸ್ಕೃತಿಯನ್ನು ಹೊಂದಿದೆ. ಅದೇ ರೀತಿಯಾಗಿ ಕೊಡೆಕಲ್ ಗ್ರಾಮದಲ್ಲಿ ನೆಲೆನಿಂತ ಶರಣ ಕೊಡೆಕಲ್ ಬಸವಣ್ಣ ಜಾತಿ, ಮತಗಳನ್ನು ಮೀರಿ ನಿಂತ ಸಂತ. ಮುಸ್ಲಿಮರು ಈತನಿಗೆ

ಸಮಾಧಿ ನಿರ್ಮಿಸಿದ್ದು ಅದರ ಮೇಲೆ ಭವ್ಯ ಮಠವಿದೆ. ಈ ಮಠ ಹಿಂದೂ-ಮುಸ್ಲಿಮರ ಯಾತ್ರಾ ಸ್ಥಳವಾಗಿದೆ.[೧೧]

ಜೈನ ಧರ್ಮದವರ ಜನಸಂಖ್ಯೆ ತೀರಾ ಕಡಿಮೆ ಇದೆ. ಸೇಡಂ ನಗರವು ರಾಷ್ಟ್ರಕೂಟರ, ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಪ್ರಮುಖ ಜೈನಕೇಂದ್ರವಾಗಿತ್ತು. ಇದು ಜೈನ ಧರ್ಮದ ನೆಲೆಗಟ್ಟು ಆಗಿತ್ತೆಂಬುದಕ್ಕೆ ಅಲ್ಲಿ ಸಿಗುವ ಅಳಿದುಳಿದ ಜಿನಮಂದಿರಗಳು, ಜಿನಬಸದಿಗಳು, ಯಕ್ಷ-ಯಕ್ಷಿಣಿಯರ ವಿಗ್ರಹಗಳು ಸಾಕ್ಷಿಯಾಗಿವೆ. ಇಲ್ಲಿರುವ ಅನೇಕ ಶಾಸನಗಳಲ್ಲಿ ಶಾಂತಿನಾಥ ಬಸದಿ, ಲೋಕಜಿನಾಲಯ, ಪಾರ್ಶ್ವನಾಥ ಬಸದಿ, ತೆಂಕಣ ಬಸದಿ ಇನ್ನಿತರ ಜಿನಮಂದಿರಗಳ ಬಗ್ಗೆ ಮಾಹಿತಿ ಸಿಗುತ್ತವೆ. ಆಳಂದದಲ್ಲಿ ಜೈನರು ಹೆಚ್ಚಾಗಿ ನೆಲೆಸಿದ್ದಾರೆ. ಇವರು ಹೆಚ್ಚಾಗಿ ವ್ಯಾಪಾರ ಮತ್ತು ವಾಣಿಜ್ಯ ವೃತ್ತಿಯಲ್ಲಿ ತೊಡಗಿದ್ದಾರೆ. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಬೌದ್ಧ ಧರ್ಮದ ಅನುಯಾಯಿಗಳು ಇಲ್ಲವೆ ಇಲ್ಲ ಎನ್ನುವಷ್ಟು ಕಡಿಮೆ ಇತ್ತು. ಆದರೆ ಇತ್ತೀಚೆಗೆ ಕೇಂದ್ರ ಕಾರ್ಮಿಕ ಸಚಿವರಾಗಿದ್ದ ಹಿರಿಯ ರಾಜಕಾರಣಿಗಳಾದ ಡಾ.ಎಂ. ಮಲ್ಲಿಕಾರ್ಜುನ ಖರ್ಗೆ ಅವರ ಆಸಕ್ತಿ ಹಾಗೂ "ಸಿದ್ಧಾರ್ಥ ವಿಹಾರ ಟ್ರಸ್ಟ್"ನ ನೇತೃತ್ವದಲ್ಲಿ ಕಲಬುರ್ಗಿ ನಗರದ ಹೊರವಲಯದಲ್ಲಿ ಕಲಬುರ್ಗಿ ವಿಶ್ವವಿದ್ಯಾಲಯದ ಸಮೀಪ 'ಬುದ್ಧ ವಿಹಾರ'ವನ್ನು ನಿರ್ಮಿಸಲಾಗಿದೆ. ಈ ಬುದ್ಧ ವಿಹಾರವು ಏಷ್ಯದ ಬೃಹತ್ ವಿಹಾರಗಳಲ್ಲಿ ಒಂದಾಗಿದೆ. ಬುದ್ಧ ವಿಹಾರದ ಸ್ಥಾಪನೆ ನಂತರ ಅನೇಕ ಬೌದ್ಧ ಸನ್ಯಾಸಿಗಳು, ಅನುಯಾಯಿಗಳು ಇಲ್ಲಿಗೆ ಭೇಟಿ ನೀಡುತ್ತಿದ್ದಾರೆ. ಕೆಲವರು ಇಲ್ಲಿಯೇ ಬಂದು ನೆಲೆಸಿದ್ದಾರೆ. ಅಲ್ಲದೆ ಸ್ವಲ್ಪ ಪ್ರಮಾಣದಲ್ಲಿ ಕೆಲವು ಹಿಂದುಳಿದ ವರ್ಗದವರು ಸಾಮಾಜಿಕ ಸ್ಥಾನಮಾನ ಪಡೆಯಲು ಬೌದ್ಧ ಧರ್ಮಕ್ಕೆ ಮತಾಂತರವಾಗುತ್ತಿದ್ದಾರೆ. ಹೀಗಾಗಿ ಬೌದ್ಧ ಧರ್ಮದ ಅನುಯಾಯಿಗಳು ಅಲ್ಲಲ್ಲಿ ಕಂಡುಬರುತ್ತಾರೆ.

ವಿಜಯನಗರದ ಅರಸರು ಶೈವ ಮತ್ತು ವೈಷ್ಣವ ಮುಂತಾಗಿ ಬಹು ಧಾರ್ಮಿಕ ಸಂಸ್ಕೃತಿಯ ಅಭಿವ್ಯಕ್ತಿ ರೂಪಗಳಾಗಿ ದೇವಾಲಯ-ವಾಸ್ತುಶಿಲ್ಪವನ್ನು ಬೆಳೆಸಿದರು. ಇಂಥದೇ ಬಹು ಸಂಸ್ಕೃತಿಗಳ ಸಾಹಿತ್ಯ ಸೃಷ್ಟಿ, ಧಾರ್ಮಿಕ ಉತ್ಸವ ಆಚರಣಾದಿಗಳನ್ನು ಅಸ್ತಿತ್ವದಲ್ಲಿ ತಂದರು. ಪ್ರೌಢದೇವರಾಯ ಖುರಾನನ್ನು ತನ್ನ ಪಕ್ಕದಲ್ಲಿಟ್ಟುಕೊಂಡೇ ರಾಜ್ಯಭಾರ ಮಾಡುತ್ತಿದ್ದುದು ಪ್ರತೀತಿ.[೧೨]

ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಹಿಂದೂ-ಮುಸ್ಲಿಮರ ಹಬ್ಬಗಳು ಆಚರಣೆಯಲ್ಲಿವೆ. ಜೊತೆಗೆ ಸಂಪ್ರದಾಯ ಮತ್ತು ಮೂಢನಂಬಿಕೆ ಆಧಾರಿತ ಅರಳಿಮರ ಹಾಗೂ ಬನ್ನಿಮರಕ್ಕೆ ಪೂಜೆ ಸಲ್ಲಿಸುವ, ನಾಗಪೂಜೆ, ಮಾರಿಮಸಣಿ ಮೊದಲಾದ ಗ್ರಾಮದೇವತೆ ಹರಕೆ ಹೊತ್ತು ಆರಾಧಿಸುವ ಸಾಂಪ್ರದಾಯಿಕ ಆಚರಣೆಗಳು ಬಹಳ ಪ್ರಾಚೀನ ಕಾಲದಿಂದಲೂ ಇಲ್ಲಿ ರೂಢಿಯಲ್ಲಿವೆ. ಅನೇಕ ಭಿನ್ನ ಮತ-ಧರ್ಮಗಳ ಅನುಯಾಯಿಗಳು ಜಿಲ್ಲೆಯಲ್ಲಿದ್ದರೂ ಕೂಡ ಈ ಭಾಗವು ಮತ ಸಹಿಷ್ಣುತೆಗೆ ಹೆಸರಾಗಿದೆ. ಇಲ್ಲಿ ಸರ್ವಧರ್ಮ ಸಮನ್ವಯ ಕ್ಷೇತ್ರಗಳು ಇವೆ. ಹಾಗೆಯೇ ಬೀದರ ಸಿಖ್‌ರ ಗುರುದ್ವಾರ ಎಲ್ಲಾ ವರ್ಗದವರನ್ನು ಆಕರ್ಷಿಸುವ ಧಾರ್ಮಿಕ ಕೇಂದ್ರವಾಗಿದೆ. ಅದೇ ರೀತಿ ಬಸವ ಕಲ್ಯಾಣದ ಬಾಲ್ಕಿಯ ಪಟ್ಟಾಧ್ಯಕ್ಷರಾದ ಡಾ.ಚನ್ನಬಸವ ಪಟ್ಟದೇವರು ಹಾಗೂ ಕೊಪ್ಪಳದ ಶ್ರೀ ಗವಿಸಿದ್ಧೇಶ್ವರ ಶಿವಯೋಗಿಗಳು. ಶ್ರೀ ಗವಿಮಠ

ಸಾಮಾಜಿಕ ಸಾಮರಸ್ಯ ಮೂಡಿಸುವಲ್ಲಿ, ವೈಚಾರಿಕ ಕ್ರಾಂತಿ ಪಸರಿಸುವ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ರಾಯಚೂರಿನ ಶಂಶಾಲ ತಾತ ದರ್ಗಾದ ಉರುಸ್, ಕಲ್ಮಾಲ ಕರಿಯಪ್ಪ ತಾತ ಜಾತ್ರೆ, ಸೂಗೂರೇಶ್ವರ ಜಾತ್ರೆ, ಹರೋಲಿ ಹುಲಿಗೆಮ್ಮ ಜಾತ್ರೆ, ನೀರಮಾನ್ವಿ ರೇಣುಕಾ ಯಲ್ಲಮ್ಮದೇವಿ ಜಾತ್ರೆ ಮತ್ತು ಮುದುಗಲ್‌ನಲ್ಲಿ ಮೊಹರಂ ಮುಂತಾದ ಹಬ್ಬಗಳನ್ನು ಹಿಂದೂ–ಮುಸ್ಲಿಂ ಜನರು ಸೇರಿ ಆಚರಣೆ ಮಾಡುತ್ತಾರೆ. ಈ ಭಾಗದಲ್ಲಿ ಜಾತ್ರೆಗಳು, ಉರುಸ್, ಹಬ್ಬಗಳು ಹಿಂದೂ–ಮುಸ್ಲಿಂ ಹಾಗೂ ಇತರೆ ಎಲ್ಲಾ ಜನಾಂಗದವರ ಸಮನ್ವಯತೆಗೆ ಸಾಕ್ಷಿಯಾಗಿವೆ.

## ೨.೪. ಶೈಕ್ಷಣಿಕ ಸ್ಥಿತಿ

ಹೈದರಾಬಾದ್ ಕರ್ನಾಟಕ ಪ್ರದೇಶದ ಶೈಕ್ಷಣಿಕ ಹಿಂದುಳಿದಿರುವಿಕೆಯು ಪ್ರಸಿದ್ಧ ನಾಣ್ಣುಡಿಯಾಗಿ ಬಿಟ್ಟಿದೆ. ಭಾರತದ ಉಳಿದ ಭಾಗ ಪಾಶ್ಚಿಮಾತ್ಯ ಶಿಕ್ಷಣದ ಪ್ರಭಾವದಿಂದಾಗಿ ಗಣನೀಯ ಪ್ರಗತಿ ಹೊಂದುತ್ತಿದ್ದಾರೆ. ಹೈದರಾಬಾದ್ ಕರ್ನಾಟಕವು ವಿಶ್ವದಲ್ಲಿನ ಬೆಳವಣಿಗೆಗೆ ಸ್ಪಂದಿಸದೆ ಮೌಢ್ಯದಲ್ಲಿ ಮುಳುಗಿ ಬಿಟ್ಟಿತ್ತು. ಅಕ್ಷರ ಜ್ಞಾನದ ನಿರ್ಲಕ್ಷ್ಯದಿಂದಾಗಿ ಜನತೆಯ ಬಡತನ ಮತ್ತು ಅನಾರೋಗ್ಯದಿಂದ ನರಳುತ್ತಿದ್ದರೆಂದು ಹಾಗೂ ಈ ಭಾಗದಲ್ಲಿದ್ದ ಆಂಗ್ಲ ಭಾರತೀಯ ಭಾಷಾ ಸಂಯುಕ್ತ ಭಾಷೆಗಳನ್ನೆಲ್ಲಾ ನಿಜಾಮನು ಉರ್ದು ಶಿಕ್ಷಣ ಮಾಧ್ಯಮದ ಉಸ್ಮಾನಿಯಾ ಪ್ರೌಢಶಾಲೆಗಳಾಗಿ ಪರಿವರ್ತಿಸಿದ್ದನೆಂದು ತಿಳಿದುಬರುತ್ತದೆ. ಪ್ರಧಾನವಾಗಿ ಗ್ರಾಮೀಣ ಲಕ್ಷಣವನ್ನು ಹೊಂದಿದ್ದ ಹೈದರಾಬಾದ್ ಸಂಸ್ಥಾನದಲ್ಲಿ ಜನರ ಶಿಕ್ಷಣಕ್ಕೆ ಯಾವುದೇ ಅನುಕೂಲಗಳನ್ನು ಒದಗಿಸಿರಲಿಲ್ಲ. ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಹೈದರಾಬಾದ್ ನಗರದಲ್ಲಿ ಪ್ರಾರಂಭವಾಗಿದ್ದ ಕೆಲವು ಶಾಲೆಗಳು ಶ್ರೀಮಂತ ಮತ್ತು ಉನ್ನತ, ಮಾಧ್ಯಮ ವರ್ಗದ ಮುಸ್ಲಿಂ ಸಮುದಾಯದ ಹಾಗೂ ಕೆಲವೇ ಕೆಲವು ಶ್ರೀಮಂತ ಹಿಂದೂ ಮನೆತನಗಳ ಮಕ್ಕಳಿಗೆ ಮಾತ್ರ ಶಿಕ್ಷಣ ಒದಗಿಸುವ ಕೇಂದ್ರಗಳಾಗಿದ್ದವು.

ಹೈದರಾಬಾದ್ ಕರ್ನಾಟಕಕ್ಕೆ ಸಂಬಂಧಿಸಿದಂತೆ ಶೈಕ್ಷಣಿಕ ಇತಿಹಾಸವನ್ನು ತಿಳಿಯುವ ಅತ್ಯಂತ ಪ್ರಾಚೀನ ಸ್ಥಳವೆಂದರೆ ಕಲಬುರ್ಗಿ ಜಿಲ್ಲೆಯ ಇಂದಿನ ಚಿತ್ತಾಪುರ ತಾಲೂಕಿನ 'ನಾಗಾಯಿ'. ಕ್ರಿ.ಶ. ೮–೯ನೇ ಶತಮಾನದ ಪೂರ್ವದಲ್ಲಿ ನಾಗಾಯಿ ವಿಶ್ವವಿದ್ಯಾಲಯವು ಉನ್ನತ ಮಟ್ಟದ ಶಿಕ್ಷಣ ಸಂಸ್ಥೆಯಾಗಿತ್ತು ಹಾಗೂ ವಿಶ್ವಮಟ್ಟದ ಜ್ಞಾನ ಪ್ರಸಾರ ಕೇಂದ್ರವಾಗಿತ್ತು. ನಂತರ ಮಧ್ಯ ಯುಗದಲ್ಲಿ ಮಹಮ್ಮದೀಯ ಅರಸರ ಆಳ್ವಿಕೆಯಲ್ಲಿ ಇಸ್ಲಾಂ ಮಾದರಿಯ ಶಿಕ್ಷಣ ವ್ಯವಸ್ಥೆ ಜಾರಿಯಾಯಿತು. ಬೀದರ್‌ನ ಬಹಮನಿ ಸುಲ್ತಾನರ ಪ್ರಧಾನ ಮಂತ್ರಿಯಾಗಿದ್ದ ಮಹಮ್ಮದ್ ಗವಾನ್ ಶಿಕ್ಷಣ ಪ್ರೇಮಿಯಾಗಿದ್ದು, ಅನೇಕ 'ಮಕ್ತಾಬ'(ಪ್ರಾಥಮಿಕ ಶಿಕ್ಷಣ)ಗಳನ್ನು ತೆರೆದರು. ಬೀದರ್‌ನಲ್ಲಿ ಉನ್ನತ ಶಿಕ್ಷಣ ನೀಡುವ ಮದರಸ ಅಥವಾ ಕಾಲೇಜು ಪ್ರಾರಂಭಿಸಿದನು. ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಶಿಕ್ಷಣ ಕೇವಲ ಮಹಮ್ಮದಿಯರಿಗೆ ಮಾತ್ರ ಲಭ್ಯವಿತ್ತು. ಹಿಂದೂಗಳು ತಮ್ಮ ತಮ್ಮ ನಿವಾಸಗಳಲ್ಲೋ ಅಥವಾ ಮಠಮಾನ್ಯಗಳಲ್ಲೋ ಜ್ಞಾನಾರ್ಜನೆ ಮಾಡಿಕೊಳ್ಳುತ್ತಿದ್ದರು. ಮಹಿಳಾ ಶಿಕ್ಷಣ ಆ ಕಾಲದಲ್ಲಿ ತೀರಾ ಅಪರೂಪವಾಗಿತ್ತು. 'ಪರ್ದಾ' ಪದ್ಧತಿ ಜಾರಿಯಲ್ಲಿದ್ದು, ಕೇವಲ ರಾಜಮನೆತನದ ಹಾಗೂ ಅವರ ಬಂಧುಗಳಾದ ಸ್ತ್ರೀಯರಿಗೆ ಮಾತ್ರ ಶಿಕ್ಷಣ ಅವರವರ ನಿವಾಸಗಳಲ್ಲಿ ದೊರೆಯುತ್ತಿತ್ತು.

ಶೈಕ್ಷಣಿಕ ಪ್ರಗತಿಯ ವರದಿಗಳಲ್ಲಿ ಒಂದಾದ ೧೮೫೪ರ 'ಚಾರ್ಲ್ಸ್ ವುಡ್' ವರದಿಯ ಅಂಶಗಳು ಹೈದರಾಬಾದ್ ರಾಜ್ಯದಲ್ಲಿ ಸ್ವತಂತ್ರವಾದ 'ಶಿಕ್ಷಣ ಇಲಾಖೆ' ಪ್ರಾರಂಭವಾಯಿತು. ಇದರ ಅಡಿಯಲ್ಲಿ ಪ್ರತಿ ತಾಲೂಕಿಗೆ ಎರಡರಂತೆ ಜಿಲ್ಲಾ ಕೇಂದ್ರದಲ್ಲಿ ಒಂದರಂತೆ ಉರ್ದು ಮಾಧ್ಯಮದ ಶಾಲೆಯೊಂದು ತೆರೆಯಲ್ಪಟ್ಟಿತು. ಈ ಶಾಲೆಯಲ್ಲಿ ಉರ್ದು ಮಾಧ್ಯಮದಲ್ಲಿ ಶಿಕ್ಷಣ ನೀಡುತ್ತಿದ್ದು, ಆಂಗ್ಲಭಾಷೆಯನ್ನು ಒಂದು ವಿಷಯವನ್ನಾಗಿ ಬೋಧಿಸಲಾಗುತ್ತಿತ್ತು.

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಮೊಟ್ಟಮೊದಲು ಪ್ರೌಢಶಾಲೆ ೧೮೮೫–೮೬ರಲ್ಲಿ ಕಲಬುರ್ಗಿಯಲ್ಲೂ ಹಾಗೂ ೧೯೧೧ರಲ್ಲಿ ಬೀದರ್‌ನಲ್ಲೂ ಆರಂಭವಾದವು. ೧೯೧೦ರಿಂದ ಉನ್ನತ ಪ್ರಾಥಮಿಕ ಹಂತದ ಶಿಕ್ಷಣದ ನಂತರ ವಿಶೇಷ 'ಮುಲ್ಕೀ' ಪರೀಕ್ಷೆ ನಡೆಸುವ ವ್ಯವಸ್ಥೆ ಪ್ರಾರಂಭವಾಯಿತು. ೧೯೦೪ರಲ್ಲಿ ತಾಂತ್ರಿಕ ಮತ್ತು ಇಂಜಿನಿಯರಿಂಗ್ ಸ್ವರೂಪದ ಸಂಸ್ಥೆಗಳು ಪ್ರಾರಂಭವಾಗುವುದರ ಮೂಲಕ ಪ್ರಪ್ರಥಮವಾಗಿ ಇಲ್ಲಿನ ಜನತೆಗೆ ವೃತ್ತಿಪರ ಶಿಕ್ಷಣ ದೊರೆಯಿತು. ೧೯೦೧ರಲ್ಲಿ ನಿಜಾಮರ ರಾಜ್ಯದಲ್ಲಿ ಮೆಟ್ರಿಕುಲೇಷನ್ ಬೋರ್ಡ್ ಅಸ್ತಿತ್ವಕ್ಕೆ ಬಂದಿತು. ಈ ಭಾಗದ ಶಿಕ್ಷಣ ಕ್ಷೇತ್ರದಲ್ಲಿ ಮತ್ತೊಂದು ಪ್ರಮುಖ ಹೆಜ್ಜೆ ಎಂದರೆ ೧೯೧೮ರಲ್ಲಿ ಹೈದರಾಬಾದಿನಲ್ಲಿ 'ಉಸ್ಮಾನಿಯ' ವಿಶ್ವವಿದ್ಯಾಲಯ ಸ್ಥಾಪನೆಗೊಂಡಿತು. ಹೈದರಾಬಾದಿನ ನಿಜಾಮರ ಆಡಳಿತ ಭಾಷೆ ಉರ್ದು ಆಗಿದ್ದರಿಂದ ಶಿಕ್ಷಣವನ್ನು ಉರ್ದು ಭಾಷೆಯಲ್ಲೇ ನೀಡಲಾಗುತ್ತಿತ್ತು. ಇದರಿಂದಾಗಿ ಹಿಂದೂಗಳು ಖಾಸಗಿಯಾಗಿ ಮೋಡಿ ಅಥವಾ ಮರಾಠಿ ಭಾಷೆಯಲ್ಲಿ ಕಲಿಯಬೇಕಾಯಿತು.

ಶರಣಬಸವೇಶ್ವರ ಕಲಾ, ವಿಜ್ಞಾನ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಮಾತೋಶ್ರೀ ಗೋದುತಾಯಿ ದೊಡ್ಡಪ್ಪ ಅಪ್ಪ ಮಹಿಳಾ ಮಹಾವಿದ್ಯಾಲಯ ಹಾಗೂ ಎಚ್.ಕೆ.ಇ. ಸಂಸ್ಥೆ ಮಹಾದೇವಪ್ಪ ರಾಂಪುರ ಮೆಡಿಕಲ್ ಕಾಲೇಜ್, ವೀರಮ್ಮ ಗಂಗಸಿರಿ ಮಹಿಳಾ ಮಹಾವಿದ್ಯಾಲಯ, ಎಂ.ಎಸ್. ಇರುಣಿ ಪದವಿ ಮಹಾವಿದ್ಯಾಲಯ, ಶಂಕರ ಲಾಹೋಟಿ ಕಾನೂನು ಮಹಾವಿದ್ಯಾಲಯ ಮತ್ತು ಕೊತ್ತಲ ಬಸವೇಶ್ವರ ಶಿಕ್ಷಣ ಸಂಸ್ಥೆ ಸೇಡಂ, ಅಂಬೇಡ್ಕರ್ ಪದವಿ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ ಇವೆಲ್ಲ ಈ ಭಾಗದ ಶಿಕ್ಷಣ ಕೇಂದ್ರಗಳು. ಈ ಜಿಲ್ಲೆಯ ಮತ್ತೊಂದು ದೊಡ್ಡ ಸಂಸ್ಥೆಯೆಂದರೆ ಖಾಜಾ ಎಜ್ಯುಕೇಷನ್ ಸೊಸೈಟಿ, ಕೆ.ಬಿ.ಎನ್. ಇಂಜಿನಿಯರಿಂಗ್ ಕಾಲೇಜು, ಕೆ.ಬಿ.ಎನ್. ಡೆಂಟಲ್ ಕಾಲೇಜು ಹಾಗೂ ಪದವಿ ಹಂತದಲ್ಲಿ ಮಹಿಳೆಯರಿಗಾಗಿ ಶಿಕ್ಷಣ ಒದಗಿಸುವ ಬೇಬಿ ರಝಾ ಪದವಿಪೂರ್ವ ಮತ್ತು ಪದವಿ ಮಹಾವಿದ್ಯಾಲಯಗಳು ಕಲಬುರ್ಗಿ ವಿಶ್ವವಿದ್ಯಾಲಯ ಸ್ಥಾಪನೆಯಾದ ಮೇಲೆ ಬಹಳಷ್ಟು ಮಹಾವಿದ್ಯಾಲಯಗಳು ಅಸ್ತಿತ್ವಕ್ಕೆ ಬಂದು ಶೈಕ್ಷಣಿಕ ಬೆಳವಣಿಗೆಗೆ ದಾರಿ ಮಾಡಿಕೊಟ್ಟಿವೆ.[೧೩]

ಬೀದರ್ ಜಿಲ್ಲೆಯ ಪ್ರಗತಿ ಸಾಧನೆಯಲ್ಲಿ ಅಂದು ಆರ್ಯ ಸಮಾಜದ ಕೊಡುಗೆಯ ಜೊತೆಗೆ ರಮಾನಂದ ತೀರ್ಥರಂತಹ ನಾಯಕರ ಆದರ್ಶದ ಛಾಪು ಇದೆ. ಭಾಲ್ಕಿ ಹಿರೇಮಠ ಸಂಸ್ಥಾನದ ಡಾ. ಚನ್ನಬಸವ ಪಟ್ಟದೇವರು ಕೊಡುಗೆ ನೀಡಿರುತ್ತಾರೆ. ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆ, ಹೈದರಾಬಾದ್ ಕರ್ನಾಟಕ ಶಿಕ್ಷಣ ಸಂಸ್ಥೆಗಳು ಶೈಕ್ಷಣಿಕ ಅಭಿವೃದ್ಧಿ ಹೊಂದಿದ ನಂತರ ಜಿಲ್ಲೆಯಾದ್ಯಂತ ಹಲವಾರು ಶಿಕ್ಷಣ

ಸಂಸ್ಥೆಗಳು ಬೆಳೆದು ಬಂದುದರ ಪರಿಣಾಮವಾಗಿ ಬೀದರ್ ಜಿಲ್ಲೆ ಇಂದು ರಾಜ್ಯದ ಶಿಕ್ಷಣ ಕ್ಷೇತ್ರದಲ್ಲಿ ಎದ್ದು ಕಾಣಲಾರಂಬಿಸಿದೆ. ಈ ಜಿಲ್ಲೆಯಲ್ಲಿ ಪಶು ವೈದ್ಯಕೀಯ ವಿಶ್ವವಿದ್ಯಾಲಯ ಅನೇಕ ವಿದ್ಯಾರ್ಥಿಗಳಿಗೆ ಜ್ಞಾನ ಒದಗಿಸುತ್ತದೆ.[೧೪]

೨೦ನೇ ಶತಮಾನದ ಪ್ರಾರಂಭದಲ್ಲಿ ಇಲ್ಲಿ ವ್ಯವಸ್ಥಿತವಾದ ಖಾಸಗಿ ಶಿಕ್ಷಣವೂ ಕೂಡ ಜಾರಿಗೊಂಡಿತು. ಇಲ್ಲಿನ ಅಭಿವೃದ್ಧಿಯ ಬಗ್ಗೆ ಕಾಳಜಿ ಹೊಂದಿದ್ದ ಅನೇಕ ಜನನಾಯಕರ ಶ್ರಮ ಹಾಗೂ ಮುಂದಾಲೋಚನೆ ಯಿಂದ ಹಲವಾರು ವಿದ್ಯಾಸಂಸ್ಥೆಗಳು ತೆರೆಯಲ್ಪಟ್ಟವು. ಅವುಗಳಲ್ಲಿ ಮುಖ್ಯವೆಂದರೆ "ನೂತನ ವಿದ್ಯಾಲಯ ಸಂಸ್ಥೆ ಮತ್ತು ಶರಣಬಸವೇಶ್ವರ ವಿದ್ಯಾವರ್ಧಕ ಸಂಸ್ಥೆ. ೧೯೦೭ರಲ್ಲಿ ನೂತನ ವಿದ್ಯಾಲಯ ಸಂಸ್ಥೆ ಸ್ಥಾಪನೆ ಗೊಂಡು ಅದೇ ವರ್ಷ ಮರಾಠಿ ಮಾಧ್ಯಮದಲ್ಲಿ ಪ್ರಥಮ ಶಾಲೆಯೊಂದನ್ನು ಪ್ರಾರಂಭಿಸಿತು. ಹೀಗಾಗಿ ಖಾಸಗಿಯಾಗಿ ದೇಶಿಯ ಮಾಧ್ಯಮದಲ್ಲಿ ಪ್ರಥಮವಾಗಿ ಶಾಲೆಯನ್ನು ತೆರೆದ ಶ್ರೇಯಸ್ಸು ಈ ಸಂಸ್ಥೆಗೆ ಸಲ್ಲುತ್ತದೆ. ಹಾಗೆಯೇ ೧೯೧೮ರಲ್ಲಿ ಶರಣಬಸವೇಶ್ವರ ಸಂಸ್ಥಾನದ ೭ನೇ ಪೀಠಾಧಿಪತಿಯಾಗಿ ಪೂಜ್ಯ ದೊಡ್ಡಪ್ಪ ಅಪ್ಪನವರು ಜಿಲ್ಲಾ ಕೇಂದ್ರದಲ್ಲೂ ಸಾರ್ವಜನಿಕ ವಾಚನಾಲಯ ಒಂದನ್ನು ತೆರೆದರು. ಹಾಗೂ ಇಲ್ಲಿನ ಜನತೆಯಲ್ಲಿ ಶೈಕ್ಷಣಿಕ ಹಾಗೂ ರಾಜಕೀಯ ಪ್ರಜ್ಞೆ ಮೂಡಿಸುವ ಉದ್ದೇಶಕ್ಕಾಗಿ ಶರಣಬಸವೇಶ್ವರ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿ, ಶೈಕ್ಷಣಿಕ ಬೆಳವಣಿಗೆಗೆ ದಾರಿ ಮಾಡಿದರು. ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಹಾಗೂ ಸಂಶೋಧನಾತ್ಮಕ ಪರಂಪರೆಯು ವ್ಯಾಪಕವಾಗಿದೆ. ಗುಲ್ಬರ್ಗಾ ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ ನಂದಿಹಳ್ಳಿ. ಈ ಕೇಂದ್ರವು ಭೂವಿಜ್ಞಾನಕ್ಕೆ ಸಂಬಂಧಿಸಿದಂತೆ ವಿಶಿಷ್ಟವಾದ ಹೊಸ ಹೊಸ ಕೋರ್ಸ್‌ಗಳನ್ನು ಹೊಂದಿದೆ. ತದನಂತರ ಹಂಪಿ ಕನ್ನಡ ವಿಶ್ವವಿದ್ಯಾಲಯ, ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ, ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಕೇಂದ್ರಗಳು, ಇಂಜಿನಿಯರಿಂಗ್ ಮಹಾವಿದ್ಯಾಲಯಗಳು ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು ಬಹಳಷ್ಟಿವೆ.[೧೫]

ಇದೇ ಸಮಯದಲ್ಲಿ ರಾಯಚೂರಿನಲ್ಲಿ ಶಿಕ್ಷಣ ತಜ್ಞರು, ಶಿಕ್ಷಕರು ಸಮಾಜ ಸುಧಾರಕರೂ, ಸ್ವಾತಂತ್ರ್ಯ ಹೋರಾಟಗಾರರು ಆದ ಪಂಡಿತ ತಾರಾನಾಥರು ೧೯೨೦ರಲ್ಲಿ ತಾರಾನಾಥ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ ಇದರ ಆಶ್ರಯದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದರು. ಮುಂದೆ ಇದೇ ಸಂಸ್ಥೆಯ ಅಡಿಯಲ್ಲಿ ಹಮ್‌ದರ್ದ ಪ್ರೌಢಶಾಲೆ, ಲಕ್ಷ್ಮೀ ವೆಂಕಟೇಶ್ವರ ದೇಸಾಯಿ (ಎಲ್.ವಿ.ಡಿ.) ಮಹಾವಿದ್ಯಾಲಯ, ಬಿ.ಆರ್.ಬಿ. ವಾಣಿಜ್ಯ ಮಹಾವಿದ್ಯಾಲಯ, ಎಸ್.ಎಸ್.ಆರ್.ಜಿ. ಮಹಿಳಾ ಮಹಾವಿದ್ಯಾಲಯ, ಟಾಗೋರ್ ಸ್ಮಾರಕ ಸೀತಾ ಸುಬ್ಬರಾಜು ಮಹಾವಿದ್ಯಾಲಯ, ವೀರಶೈವ ಸಮಾಜ ಶಿಕ್ಷಣ ಸಂಸ್ಥೆ, ಹೆಚ್.ಸಿ.ಎಂ.ಎಸ್.ಕೆ. ವಾಣಿಜ್ಯ ವಿಜ್ಞಾನ ಮತ್ತು ಕಲಾ ಮಹಾವಿದ್ಯಾಲಯ, ಎಸ್.ಆರ್.ಕೆ. ಶಿಕ್ಷಣ ಮಹಾವಿದ್ಯಾಲಯ, ಸಿಲ್ ಮಹಾವಿದ್ಯಾಲಯ, ಎ.ಎಂ.ಇ. ದಂತ ಮಹಾವಿದ್ಯಾಲಯ ಮತ್ತು ಸಂಶೋಧನಾ ಕೇಂದ್ರ, ಎಸ್.ಎಲ್.ಎನ್. ಇಂಜಿನಿಯರಿಂಗ್ ಕಾಲೇಜ್, ಸೇಂಟ್ ಮೇರೀಸ್ ಕಾನ್ವೆಂಟ್ ಶಾಲೆ ಮತ್ತು ಕಾಲೇಜು ನವೋದಯ ಮೆಡಿಕಲ್ ಕಾಲೇಜು ಮತ್ತು ಸಂಶೋಧನಾ ಕೇಂದ್ರ., ಶ್ರೀ ಎಂ. ನಾಗಪ್ಪ ಕಾನೂನು ಮಹಾವಿದ್ಯಾಲಯ, ದುಧಿಬೆನ ಠಾಕರ್ಸಿ ಜೋಬನಪುತ್ರ ಬಾಲಕಿಯರ ಪ್ರೌಢಶಾಲೆ, ಕಲಬುರ್ಗಿ ವಿಶ್ವವಿದ್ಯಾಲಯ, ಸ್ನಾತಕೋತ್ತರ ಕೇಂದ್ರ ಯರಗೇರಾ,

ರಾಯಚೂರು ಕೃಷಿ ವಿಶ್ವವಿದ್ಯಾಲಯ, ಶ್ರೀ ಸೂಗೂರೇಶ್ವರ ಸೇವಾ ಸಮಿತಿ ಟ್ರಸ್ಟ್, ಶ್ರೀ ಸಿ.ಎಂ. ಪದವಿ ಮಹಾವಿದ್ಯಾಲಯ ದೇವಸೂಗುರು, ಭಾಷುಮಿಯಾ ಸಾಹುಕಾರ ಸರಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ, ಮಾನ್ವಿ, ವಿ.ಸಿ.ಬಿ. ಮಹಾವಿದ್ಯಾಲಯ ಮತ್ತು ಸಂಗಮೇಶ್ವರ ಮಹಾವಿದ್ಯಾಲಯ ಲಿಂಗಸೂಗೂರು. ಸರಕಾರಿ ಪ್ರಥಮ ದರ್ಜೆ ಮತ್ತು ಪದವಿ ಮಹಾವಿದ್ಯಾಲಯ, ಶಂಕರ ಟ್ರಸ್ಟ್ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಶಾರದಾ ಮಹಿಳಾ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ ಸಿಂಧನೂರು, ಸರಕಾರಿ ಪ್ರಥಮ ದರ್ಜೆ ಕಾಲೇಜ್ ಮಸ್ಕಿ, ಸರಕಾರಿ ಪ್ರಥಮ ದರ್ಜೆ ಮತ್ತು ಪದವಿ ಮಹಾವಿದ್ಯಾಲಯ, ದೇವದುರ್ಗ ಹೀಗೆ ರಾಯಚೂರು ಶೈಕ್ಷಣಿಕವಾಗಿ ಬೆಳೆಯುತ್ತಿದೆ.[೧೬]

ಕೊಪ್ಪಳ ಜಿಲ್ಲೆಯು ಪ್ರಾಚೀನ ಕಾಲದ ಅಗ್ರಹಾರಗಳು, ಮಠಗಳು, ಘಟಿಕೆಗಳು ಪ್ರಸಿದ್ಧಿ ಪಡೆದಿದ್ದನ್ನು ತಿಳಿಯಬಹುದು. ಕೊಪ್ಪಳ ನಗರದಲ್ಲಿ ಶ್ರೀ ಗವಿಸಿದ್ದೇಶ್ವರ ವಿದ್ಯಾವರ್ಧಕ ಸಂಸ್ಥೆಯ ಜಗದ್ಗುರು ಶ್ರೀ ಗವಿಸಿದ್ದೇಶ್ವರ ಆಯುರ್ವೇದ ಮೆಡಿಕಲ್ ಕಾಲೇಜು ಇದೆ. ಜಿಲ್ಲೆಯಲ್ಲಿ ಡಿಎಡ್ ಮತ್ತು ಬಿಎಡ್ ಕಾಲೇಜುಗಳಿವೆ. ವಿಜಯಪುರ ಮಹಿಳಾ ವಿಶ್ವವಿದ್ಯಾಲಯ, ಬಿ.ಪಿ.ಎಡ್ ಹಾಗೂ ಮುನಿರಾಬಾದಿನಲ್ಲಿ ಮಹಿಳಾ ಕಾಲೇಜುಗಳು ಇವೆ. ಕುಕನೂರಿನ ನವೋದಯ ಶಾಲೆ ಹಾಗೂ ಕುಷ್ಟಗಿಯ ಮುರಾರ್ಜಿ ವಸತಿ ಶಾಲೆ ಮತ್ತು ಕೂಡಲಸಂಗಮ ವಿದ್ಯಾಸಂಸ್ಥೆಯ ಹೇಮರೆಡ್ಡಿ ಮಲ್ಲಮ್ಮ ವಸತಿ ಶಾಲೆ ಕುಣಿಗೇರಿ ಗ್ರಾಮದಲ್ಲಿದೆ.

ಪೂಜ್ಯ ದೊಡ್ಡಪ್ಪ ಅಪ್ಪನವರು ಕಲಬುರ್ಗಿಯಲ್ಲಿ ೧೯೩೪ರಲ್ಲಿ ಮೊಟ್ಟಮೊದಲ ಬಾರಿಗೆ ಕನ್ನಡ ಮಾಧ್ಯಮದಲ್ಲಿ ಹೆಣ್ಣು ಮಕ್ಕಳಿಗಾಗಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿ ಈ ಭಾಗದ ಸ್ತ್ರೀ ಶಿಕ್ಷಣದ ಹರಿಕಾರರೆಂದೇ ಹೆಸರಾಗಿದ್ದಾರೆ. ಹೀಗೆ ಹೈದರಾಬಾದ್ ಕರ್ನಾಟಕದಲ್ಲಿ ಶಿಕ್ಷಣದ ಮಟ್ಟ ಹೆಚ್ಚುತ್ತಾ ಹೋಯಿತು.

ರಾಜ್ಯಗಳ ಪುನರ್‌ವಿಂಗಡಣೆ ನಂತರ ಹೈದರಾಬಾದ್ ಕರ್ನಾಟಕದಲ್ಲಿ ಕನ್ನಡ ಭಾಷೆಯಲ್ಲಿ ಅನೇಕ ಶಾಲಾ ಕಾಲೇಜುಗಳು ಸ್ಥಾಪಿತವಾದವು. ಕಲಬುರ್ಗಿಯಲ್ಲಿ ನೂತನ ವಿದ್ಯಾಲಯ, ಶರಣ ಬಸವೇಶ್ವರ ಸಂಸ್ಥೆ, ಹೆಚ್.ಕೆ.ಇ. ಸಂಸ್ಥೆ, ಪೀಪಲ್ಸ್ ಶಿಕ್ಷಣ ಸಂಸ್ಥೆ, ರೋಟರಿ ಕ್ಲಬ್, ವಿಜಯಾ ವಿದ್ಯಾಲಯ ೧೯೧೮ರಲ್ಲಿ ಕಲಬುರ್ಗಿ ವಿದ್ಯಾಲಯ ಸ್ಥಾಪನೆ ಹಾಗೂ ಯಾದಗಿರಿಯಲ್ಲಿ ಚಂದ್ರಶೇಖರ ಎಜುಕೇಷನ್ ಸಂಸ್ಥೆ ಮತ್ತು ರಾಯಚೂರಿನಲ್ಲಿ ತಾರಾನಾಥ ಶಿಕ್ಷಣ ಸಂಸ್ಥೆಯ ಜೊತೆಗೆ ಟಾಗೋರ್ ಸ್ಮಾರಕ ಸೀತಾ ಸುಬ್ಬರಾಜು ಮಹಾವಿದ್ಯಾಲಯ, ಹೆಚ್.ಸಿ.ಎಂ.ಎಸ್.ಕೆ. ಮೆಥೋಡಿಸ್ಟ್ ಸಂಸ್ಥೆ, ಶ್ರೀ ಸೂಗೂರೇಶ್ವರ ಸೇವಾ ಸಮಿತಿ ಟ್ರಸ್ಟ್ ಸ್ಥಾಪನೆಯಡಿ ಶಾಲಾ ಕಾಲೇಜುಗಳು ಆರಂಭವಾದವು. ಇನ್ನೂ ಕೊಪ್ಪಳದಲ್ಲಿ ಶ್ರೀ ಗವಿಸಿದ್ಧೇಶ್ವರ ಶಿಕ್ಷಣ ಸಂಸ್ಥೆಯಡಿಯಲ್ಲಿ ಶಾಲಾ ಕಾಲೇಜುಗಳು ಆಯುರ್ವೇದ ಕಾಲೇಜುಗಳು ಪ್ರಾರಂಭ ಗೊಂಡವು. ಪ್ರತಿಷ್ಠಿತ ಸಂಸ್ಥೆಗಳು ಶಿಕ್ಷಣದ ಬೆಳವಣಿಗೆಗೆ ಕಾರಣವಾಗಿವೆ. ಇತ್ತೀಚಿನ ವರ್ಷಗಳಲ್ಲಿ ಸಾಮಾನ್ಯ ಜನರಲ್ಲಿ ಹೊಸ ಪೀಳಿಗೆಯ ಯುವಕರಲ್ಲಿ ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಹಾಗೂ ಮಹಿಳೆಯರಲ್ಲಿ ಶಿಕ್ಷಣದ ಮಹತ್ವದ ಅರಿವು, ಜಾಗೃತಿ ಮೂಡುತ್ತಿರುವುದನ್ನು ಗಮನಿಸಬಹುದಾಗಿದೆ.

ಎಲ್ಲಾ ವರ್ಗದ ಜನರಲ್ಲಿ ಜ್ಞಾನಾರ್ಜನೆಯ ಹಸಿವು ಹೆಚ್ಚಾದಂತೆ ಹೊಸ ಹೊಸ ವಿದ್ಯಾಸಂಸ್ಥೆಗಳು, ಶಾಲಾ-ಕಾಲೇಜುಗಳು, ತಾಂತ್ರಿಕ ಹಾಗೂ ವೈದ್ಯಕೀಯ ಕಾಲೇಜುಗಳು ತಲೆ ಎತ್ತುತ್ತಿರುವುದು ಶಿಕ್ಷಣ ಕ್ಷೇತ್ರದಲ್ಲಿ ಸ್ವಲ್ಪಮಟ್ಟಿನ ಕ್ರಾಂತಿ ಎನ್ನಬಹುದು.

ಎಸ್.ಎಸ್.ಎಲ್.ಸಿ. ಮತ್ತು ಪದವಿ ಪೂರ್ವ ಶಿಕ್ಷಣದಲ್ಲಿ ಹೈದರಾಬಾದ್ ಕರ್ನಾಟಕ ಜಿಲ್ಲೆಗಳು ಹಿಂದುಳಿದಿವೆ. ಆದರೆ ಈ ಭಾಗದಲ್ಲಿ ಎಷ್ಟೋ ಕಡೆಗೆ ಮೂಲಭೂತ ಸೌಲಭ್ಯಗಳೇ ಇಲ್ಲ. ಕಾಲೇಜುಗಳಿದ್ದರೂ ಹಲವು ಕಡೆಗೆ ಉಪನ್ಯಾಸಕರ ಕೊರತೆ ಇದೆ. ಶಿಕ್ಷಕರ ಉಪನ್ಯಾಸಕರ ನೇಮಕಾತಿಯಲ್ಲಿ ಇಲ್ಲಿನವರು ಹೆಚ್ಚಾಗಿ ಆಯ್ಕೆಯಾಗದೆ ಬೇರೆ ಕಡೆಯಿಂದ ಬಂದವರು ಆಯ್ಕೆಯಾಗುತ್ತಾರೆ. ಆದರೆ ಇವರುಗಳು ಸ್ವಲ್ಪ ದಿನದಲ್ಲಿ ವರ್ಗಾವಣೆ ಮಾಡಿಸಿಕೊಂಡು ಹೋಗುವುದರ ಪರಿಣಾಮ ಶಿಕ್ಷಕರ ಕೊರತೆಗೆ ಕಾರಣವಾಗುತ್ತದೆ. ಹೀಗಾಗಿ ಇಲ್ಲಿ ಪರೀಕ್ಷೆ ಫಲಿತಾಂಶಗಳಲ್ಲಿ ನಿರೀಕ್ಷೆಯಂತೆ ಪ್ರಗತಿ ಕಾಣುತ್ತಿಲ್ಲ. ಹೀಗಾಗಿ ಹೈದರಾಬಾದ್ ಕರ್ನಾಟಕದ ಶೈಕ್ಷಣಿಕ ಬೆಳವಣಿಗೆಗೆ ಅನೇಕ ಮೂಲಭೂತ ಸೌಲಭ್ಯಗಳ ಜೊತೆಗೆ ಶಿಕ್ಷಣದ ಅರಿವು, ಅವಕಾಶ, ಉತ್ತಮ ಶಿಕ್ಷಕರು ಮತ್ತು ಹೆಚ್ಚಿನ ಅನುದಾನವನ್ನು ಒದಗಿಸುವುದು ಅತ್ಯವಶ್ಯಕವಾಗಿದೆ. ಈ ನಿಟ್ಟಿನಲ್ಲಿ ಹೈದರಾಬಾದ್ ಕರ್ನಾಟಕ ವಿಶೇಷ ಸ್ಥಾನಮಾನದಂತಹ ಕಾರ್ಯಕ್ರಮಗಳನ್ನು ಸರಕಾರ ತ್ವರಿತವಾಗಿ ಕೈಗೊಂಡಲ್ಲಿ ಈ ಪ್ರದೇಶವು ಶೈಕ್ಷಣಿಕವಾಗಿ ಮುಂದೆ ಸಾಧ್ಯವಾಗಬಹುದು.

### ೨.೫. ಭೌಗೋಳಿಕ ಸ್ಥಿತಿಗತಿ

ಜನಸಾಮಾನ್ಯರ ಬದುಕು ಚರಿತ್ರೆಯಾದದ್ದು ತೀರ ಕಡಿಮೆ. ರಾಜಮಹಾರಾಜರ ಚರಿತ್ರೆಯಲ್ಲೇ ಪೂರಕವಾಗಿಯೋ ಪ್ರಾಸಂಗಿಕವಾಗಿಯೋ ಜನಸಾಮಾನ್ಯರ ಚರಿತ್ರೆ ನುಸುಳಿರುತ್ತದೆ. ಅದೇ ರೀತಿಯಾಗಿ ಹೈದರಾಬಾದ್ ಸಂಸ್ಥಾನದ ಆಡಳಿತದಲ್ಲಿ ಬ್ರಿಟೀಷ್ ಅಧೀನದಲ್ಲಿ ದೇಶಮುಖ್ ದೇಸಾಯಿ, ಪಾಟೀಲ ಮುಂತಾದವರು ಇದ್ದರು. ಇವರ ಅಧೀನದಲ್ಲಿ ದುಡಿಯುವ ಸಾಮಾನ್ಯ ಜನರಿದ್ದರು.[೭] ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಬ್ರಿಟೀಷ್ ಸರಕಾರದ ನಿಷ್ಠಾವಂತನೆಂದು ಸಾಬೀತುಪಡಿಸಲು ನಿಜಾಮನು ತನ್ನ ಸಂಸ್ಥಾನದಲ್ಲಿ ಕೋಮುವಾದಿ ಹಾಗೂ ದಮನಕಾರಿ ನೀತಿಯನ್ನು ಜಾರಿಗೆ ತಂದನು. ಬ್ರಿಟೀಷರಿಗೆ ಬೇಕಾದುದು ಕೂಡ ಅದೇ ಆಗಿತ್ತಂತೆ. ನಿಜಾಮ ಜನತೆಯ ಆಶೋತ್ತರಗಳಿಗೆ ಕಿವುಡಾಗಿದ್ದನು. ಜನರು ನಿಜಾಮನ ನೇತೃತ್ವದಲ್ಲಿ ಜನಪ್ರಿಯ ಸರಕಾರ ರಚಿಸುವ ಕನಸು ಕಟ್ಟಿದ್ದರು. ಆದರೆ ಕಾಸಿಂ ರಜನಿಯ ನಾಯಕತ್ವದಲ್ಲಿ ರಜಾಕಾರರು ಹೈದರಾಬಾದ್ ಸಂಸ್ಥಾನದಲ್ಲಿ ನಡೆಸಿದ ಅತ್ಯಾಚಾರಗಳು ಅವರ್ಣನೀಯ. ಒಂದು ಕೈಯಲ್ಲಿ ಕುರಾನ್, ಇನ್ನೊಂದು ಕೈಯಲ್ಲಿ ಕತ್ತಿ ಹಿಡಿದು ಭಾರತದ ನಾಲ್ಕೂವರೆ ಕೋಟಿ ಮುಸ್ಲಿಮರೇ ನಮ್ಮ ಸೈನ್ಯ ಎಂಬ ಮಾತುಗಳಿಂದ ಪ್ರಚೋದಿಸುತ್ತಿದ್ದರು.[೮]

ನಿಜಾಮ ಜನಸಾಮಾನ್ಯರ ಸುಖ-ದುಃಖಗಳನ್ನರಿಯದ ನಿರಂಕುಶ ಪ್ರಭುವಾಗಿದ್ದ ಎಂದು ಹಿರಿಯರು ಹೇಳಿದ ವೃತ್ತಾಂತ ಹೀಗಿದೆ. ನಿಜಾಮನು ಮೆಹಬೂಬ ಅಲಿಖಾನ್ ರಾಜ್ಯವಾಳುತ್ತಿದ್ದ ಕಾಲಕ್ಕೆ ಸಂಸ್ಥಾನದಲ್ಲಿ ಬರಗಾಲ ಬಂದಿತ್ತು. ಜನರ ನಿಯೋಗವೊಂದು ನಿಜಾಮನನ್ನು ಭೇಟಿಯಾಗಿ ರಾಜ್ಯದಲ್ಲಿ ಬರಗಾಲ

ಬಂದಿದೆ. ಜನರು ಹಸಿವೆಯಿಂದ ಕಂಗಾಲಾಗಿದ್ದಾರೆ. ಸರ್ಕಾರ ಏನಾದರೂ ಕ್ರಮಕೈಗೊಳ್ಳಬೇಕು ಎಂದು ತಮ್ಮ ಅಹವಾಲನ್ನು ಸಲ್ಲಿಸಿದರು. ಆಗ "ಕ್ಯಾ ಲೋಗೊಂಕೋ ಘೀ ಖಿಚಡಿ ಭೀ ನಹಿ ಮಿಲ್ತಿ" ಜನರಿಗೆ ಹುಗ್ಗಿ, ತುಪ್ಪ ಕೂಡ ಸಿಗುವುದಿಲ್ಲವೇ? ಎಂದು ಆಶ್ಚರ್ಯದಿಂದ ಕೇಳಿದನಂತೆ.[೧೯]

ನಿಜಾಮ್ ಸಂಸ್ಥಾನದಲ್ಲಿ ಯಾವ ಪ್ರಜೆಗೂ ಯಾವ ವಿಷಯದ ಮೇಲೂ ತನ್ನ ಅಭಿಪ್ರಾಯ ವ್ಯಕ್ತಪಡಿಸುವ ಸ್ವಾತಂತ್ರ್ಯವಿರಲಿಲ್ಲ. ನಿಜಾಮನ ಆಜ್ಞೆಗಳನ್ನು ಯಾರು ಪ್ರಶ್ನಿಸುವಂತಿರಲಿಲ್ಲ. ಸಭೆ ಮೆರವಣಿಗೆಗಳನ್ನು ನಡೆಸಲು ಕೂಡ ಸರಕಾರದ ಅನುಮತಿ ಪಡೆಯಬೇಕಾಗಿತ್ತು. ಯಾವ ಬರಹವೂ ಸರಕಾರದ ಕಣ್ಣು ತಪ್ಪಿಸಿ ಪ್ರಕಟವಾಗುವಂತಿರಲಿಲ್ಲ. ಸೆನ್ಸಾರ್ ಅಷ್ಟು ಬಿಗಿಯಾಗಿತ್ತು. ದೇಶಾದ್ಯಂತ ಸ್ವಾತಂತ್ರ್ಯ ಚಳುವಳಿಯ ನೇತಾರ ಪಕ್ಷವಾಗಿದ್ದ ಕಾಂಗ್ರೆಸ್ ಕೂಡ ಹೈದರಾಬಾದ್ ಕರ್ನಾಟಕ ಸಂಸ್ಥಾನದ ರಾಜಕೀಯ, ಆರ್ಥಿಕ ವ್ಯವಸ್ಥೆ ನೂರಕ್ಕೆ ನೂರು ಪಾಳೆಗಾರಿ ಸ್ವರೂಪದ್ದಾಗಿತ್ತು. ಸಂಸ್ಥಾನದ ನೆಲದ ಒಟ್ಟು ೫೩,೦೦೦,೦೦೦ ಎಕರೆ ವಿಸ್ತೀರ್ಣದಲ್ಲಿ ಸುಮಾರು ೬೦%ರಷ್ಟು ಭೂಮಿ ದಿವಾನಿ ಅಥವಾ ಖಾಲ್ಸಾ ಪ್ರದೇಶವೆಂದು ಕರೆಸಿಕೊಂಡಿತ್ತು. ಅಂದರೆ ಇಲ್ಲಿ ರೆವೆನ್ಯೂ ಆಡಳಿತದ ಸಂಪೂರ್ಣ ಅಧಿಕಾರ ಸರಕಾರದ್ದೆ ಹತ್ತು ಪ್ರತಿಶತದಷ್ಟು ಜಮೀನು ನಿಜಾಮನಿಗೆ ವರ್ಷಕ್ಕೆ ೨೫,೦೦೦,೦೦೦ ರೂ.ಗಳಷ್ಟು ಸ್ವಾತಂತ್ರ್ಯಪೂರ್ವದಲ್ಲಿಯೇ ಆದಾಯವಿತ್ತೆಂದು ತಿಳಿದುಬರುತ್ತದೆ. ಈ ಪ್ರದೇಶದ ರೈತರ ಬೆಳೆಯಲ್ಲಿ ಬಹುಭಾಗ ನಿಜಾಮನ ಸ್ವಂತ ಖಜಾನೆ ಸೇರಿದರೂ ಆತ ಈ ಪ್ರದೇಶದ ಅಭಿವೃದ್ಧಿಗೋಸ್ಕರ ಅಥವಾ ಅಲ್ಲಿ ದುಡಿಯುವ ಜನರ ಒಳಿತಿಗೋಸ್ಕರ ಒಂದು ಸವೆದ ಕಾಸನ್ನು ಖರ್ಚು ಮಾಡುತ್ತಿರಲಿಲ್ಲ ಎಂದು ತಿಳಿಯಬಹುದು.

ತಮ್ಮ ದೇಶದ ಊಳಿಗಮಾನ್ಯತೆಯ ವಿರುದ್ಧ ಪ್ರಗತಿಪರ ಹೋರಾಟವನ್ನು ನಡೆಸಿದ್ದಂತಹ ಬ್ರಿಟಿಷ್ ವಸಾಹತುಶಾಹಿ ಬಂಡವಾಳಿಗಳು ಭಾರತದಲ್ಲಿ ಲೂಟಿಗೆ ಅಗ್ಗದ ದರದಲ್ಲಿ ಕಚ್ಚಾವಸ್ತುಗಳು ಮತ್ತು ಅಗ್ಗದ ಶ್ರಮವೂ ಅಗತ್ಯವಾಗಿದ್ದವು. ನಮ್ಮ ದೇಶದ ಊಳಿಗಮಾನ್ಯ ರಚನೆಯು ಇವೆರಡನ್ನು ವಸಾಹತುಶಾಹಿಗಳಿಗೆ ಒದಗಿಸಿತು.[೨೦] ಸಂಸ್ಥಾನದ ಜಮೀನುದಾರರ ಮನೆಗೆಲಸ ಜಮೀನಿನ ಕೆಲಸ ಅಥವಾ ಅವರು ಹೇಳಿದ ಯಾವ ಕೆಲಸವನ್ನೇ ಆಗಲಿ ಅವರು ಆಳುಗಳು ಸಂಬಳ ತೆಗೆದುಕೊಳ್ಳದೇ ಮಾಡಬೇಕಾಗಿತ್ತು. ವರ್ಷದಲ್ಲಿ ಕೆಲವು ದಿನ ಊರಿನ ಪ್ರತಿಯೊಂದು ಮನೆಯವರು ಜಮೀನುದಾರರ ಮನೆಯ ಕೆಲಸಗಳನ್ನು ಪ್ರತಿಫಲವಿಲ್ಲದೆ ಮಾಡಬೇಕಾಗಿತ್ತು. ಇದಕ್ಕೆ ಬಿಟ್ಟಿ ಚಾಕರಿ ಎನ್ನುತ್ತಿದ್ದರು. ಬುಡಕಟ್ಟು ಜನರು ವಾಸಿಸುವ ಪ್ರದೇಶಗಳು ಮತ್ತು ಅತ್ಯಂತ ಹಿಂದುಳಿದ ಪ್ರದೇಶಗಳಲ್ಲಿ ಈ ಬಿಟ್ಟಿ ಅಥವಾ ಬೇಗಾರು ಪದ್ಧತಿ ಈಗಲೂ ರೂಢಿಯಲ್ಲಿದೆ. ಆಗ ಈ ಬಿಟ್ಟಿ ದುಡಿಮೆ ಸಾರ್ವತ್ರಿಕವಾಗಿತ್ತು. ಇಲ್ಲಿನ ಹಳ್ಳಿಗಳಲ್ಲಿ ಪ್ರತಿಯೊಂದು ಹರಿಜನ ಕುಟುಂಬದಲ್ಲಿಯೂ ಒಬ್ಬರು ಜಮೀನುದಾರರಲ್ಲಿ ಬಿಟ್ಟಿ ಕೆಲಸ ಮಾಡಲೇಬೇಕಾಗಿತ್ತು. ಈಗಲೂ ಸಾಮಾನ್ಯ ಜನ ಶ್ರೀಮಂತರನ್ನು, ಜಮೀನುದಾರರನ್ನು, ದೊರೆ, ಗೌಡ, ಮಹಾರಾಜ ಎಂಬುದಾಗಿ ಸಂಭೋದಿಸುವುದನ್ನು ಹಳ್ಳಿ ಪರಿಸರಗಳಲ್ಲಿ ಕಾಣಬಹುದಾಗಿದೆ. ಅಕ್ಷರ ಜ್ಞಾನವಿಲ್ಲದೆ ಆರ್ಥಿಕ ಭದ್ರತೆಯಿಲ್ಲದೆ ಬಡತನದಿಂದ ನಲುಗಿದೆ. ಅಂಧಾನುಕರಣೆಗಳ ಆಗರವಾಗಿರುವ ಜನ ಸುಧಾರಣೆ ಸೋಂಕಿಲ್ಲದಂತೆ ಬದುಕುತ್ತಿದ್ದಾರೆ.

### ೨.೬. ಭಾಷಾ ಸ್ಥಿತಿಗತಿ

ಹೈದರಾಬಾದ್ ಕರ್ನಾಟಕದ ಹಿಂದುಳಿದಿರುವಿಕೆಗೆ ಭಾಷಾ ಸ್ಥಿತಿಯೂ ಕಾರಣವಾಗಿದೆ. ನಿಜಾಮ್ ಆಳ್ವಿಕೆಯಲ್ಲಿ ಭಾಷಾ ದಬ್ಬಾಳಿಕೆಯ ಪಾತ್ರವು ಮಹತ್ವದ್ದಾಗಿದೆ. ಭಾಷಾ ದಬ್ಬಾಳಿಕೆಯೆಂದರೆ ಭಾಷೆಗಳ ನಡುವಿನ ತಾರತಮ್ಯವಾಗಿದೆ. ನಿಜಾಮ್ ಆಡಳಿತದಲ್ಲಿ ಉರ್ದು ಭಾಷೆಯು ಆಡಳಿತ ಭಾಷೆಯಾಗಿ ಮತ್ತು ಶಿಕ್ಷಣ ಮಾಧ್ಯಮದ ಪ್ರಧಾನ ಭಾಷೆಯಾಗಿ ಅಸ್ತಿತ್ವಕ್ಕೆ ಬಂದಿತ್ತೆಂದು ಚಾರಿತ್ರಿಕವಾಗಿ ತಿಳಿದುಬರುತ್ತದೆ.

ನಿಜಾಮ್ ಆಳ್ವಿಕೆಯ ಕಾಲದಲ್ಲಿ ಮೊದಲು ಫಾರಸಿ ಭಾಷೆಯು ಮುಂಚೂಣಿಯಲ್ಲಿತ್ತೆಂದು, ನಂತರ ಉರ್ದು ಭಾಷೆಯನ್ನು ರಾಜ್ಯದ ಆಡಳಿತ ಭಾಷೆಯನ್ನಾಗಿ ಕಡ್ಡಾಯಗೊಳಿಸಿದ್ದರು. ಅಂದರೆ ಹೈದರಾಬಾದಿನ ನಿಜಾಮ್‌ನು ಉರ್ದು ಭಾಷೆಯನ್ನು ಅಭಿವೃದ್ಧಿಪಡಿಸಲು ಕ್ರಮ ಕೈಗೊಂಡಿದ್ದನ್ನು ಹೈದರಾಬಾದ್ ಸಂಸ್ಥಾನದ ಪ್ರಾಂತ್ಯದಲ್ಲಿ ಕನ್ನಡ, ಮರಾಠಿ, ತೆಲುಗು ಭಾಷೆಗಳು ದೇಶೀ ಭಾಷೆಗಳಾಗಿದ್ದವು. ಬಹುಸಂಖ್ಯಾತರಾದ ಕನ್ನಡಿಗರು ಕನ್ನಡ ಭಾಷೆ ಮತ್ತು ಸಂಸ್ಕೃತಿಯನ್ನು ಬದಿಗೊತ್ತಿ ಪ್ರಭುತ್ವದ ಉರ್ದು ಭಾಷೆಯನ್ನು ಕಲಿಯುವ ಒತ್ತಡಕ್ಕೆ ಒಳಗಾದರು.

ಉರ್ದು ಭಾಷೆಯನ್ನು ದೇಶೀ ಭಾಷೆಯನ್ನಾಗಿ ಮಾಡಲು ನಿಜಾಮ್ ಸರಕಾರ ಶ್ರಮಿಸಿತು. ಆದರೆ ಸಂಸ್ಥಾನದ ದೇಶಿ ಭಾಷೆಗಳು ಕನ್ನಡ, ತೆಲುಗು, ಮರಾಠಿ ಆಗಿದ್ದವು.[೨೧] ಬಹುಸಂಖ್ಯಾತರಾಗಿದ್ದ ಕನ್ನಡಿಗರು ಕನ್ನಡ ಭಾಷೆಯಲ್ಲಿ ಶಿಕ್ಷಣ ಪಡೆದು ಮುಂದೊಂದು ದಿನ ನಿಜಾಮ್ ಸಂಸ್ಥಾನಕ್ಕೆ ಮಾರಕವಾಗಬಹುದು ಎನ್ನುವ ದೃಷ್ಟಿಯಿಂದ ನಿಜಾಮ್ ಉರ್ದು ಭಾಷೆಯನ್ನು ಅಸ್ತಿತ್ವಕ್ಕೆ ತಂದೆನ್ನಲಾಗಿದೆ. ಕನ್ನಡ ಭಾಷೆಯನ್ನಾಡುವ ಜನರು ಕಾಲದ ಒತ್ತಡಕ್ಕೆ ಮಣಿದು ಉರ್ದು ಮಾಧ್ಯಮದಲ್ಲಿಯೇ ಶಿಕ್ಷಣವನ್ನು ಪಡೆಯಬೇಕಾಯಿತು. ಶೈಕ್ಷಣಿಕ ಅವಶ್ಯಕತೆಗಳಿಗಾಗಿ ಉರ್ದು ಭಾಷೆಯನ್ನು ಕಲಿಯಬೇಕಾಗಿತ್ತು.[೨೨] ಇದರಿಂದ ವಿದ್ಯಾರ್ಥಿಗಳು ಬಹಳಷ್ಟು ಸಂಕಷ್ಟಕ್ಕೆ ಒಳಗಾಗಿದ್ದರು. ವಿದ್ಯಾರ್ಥಿಗಳ ಸಂಖ್ಯೆಯು ಕೂಡ ಇಳಿಮುಖವಾಗತೊಡಗಿತು. ಇದಕ್ಕೆ ನಿಜಾಮ್ ಭಾಷಾ ನೀತಿ ಹಾಗೂ ಶಿಕ್ಷಣ ನೀತಿಗಳೇ ಕಾರಣವಾಗಿದ್ದವು. ಉರ್ದು ಶಿಕ್ಷಣದ ಉದ್ದೇಶ ವೆಂದರೆ ಸರ್ಕಾರಿ ಸೇವೆಗೆ ನೇಮಕಗೊಳ್ಳಲು ಉರ್ದು ಭಾಷಿಕರನ್ನು ತಯಾರಿಸುವುದಾಗಿತ್ತು. ಈ ರೀತಿಯ ಉರ್ದು ಭಾಷೆಯ ಹೇರಿಕೆ ಬಹುಸಂಖ್ಯಾತ ಜನರ ಶೈಕ್ಷಣಿಕ ಅವಕಾಶಗಳನ್ನು ಮೊಟಕುಗೊಳಿಸಿತು.[೨೩] ಆ ಕಾಲದ ಪರಿಸ್ಥಿತಿಯನ್ನು ಹಿಂದೂ ರಾಷ್ಟ್ರೀಯವಾದಿ ಬರಹಗಾರರು ವಿಶ್ಲೇಷಿಸಲು ಯತ್ನಿಸಿದರು. ಅವರು ಮಾಡಿರುವ ಸಾಮಾನ್ಯೀಕರಣವು ಪ್ರಶ್ನಾರ್ಹವಾಗಿದೆ. ಮೇಲೆ ತಿಳಿಸಿದ ಕನ್ನಡಿಗರಾದ ಈ ಪ್ರಾಂತ್ಯದ ಜನರು ಎಂದುಕೊಂಡರೆ ಇತರ ಭಾಷಿಕರು ಈ ಪ್ರಾಂತ್ಯದವರಾಗುವುದಿಲ್ಲ. ಪ್ರಭುತ್ವದ ಈ ಧೋರಣೆಯಿಂದಾಗಿ ಕನ್ನಡ ಭಾಷೆಯ ಬೆಳವಣಿಗೆ ಕುಂಠಿತಗೊಂಡಿತು. ಆಳುವ ವರ್ಗದ ಭಾಷೆಯಾದ ಉರ್ದುವನ್ನು ಪ್ರಾಥಮಿಕ ಹಂತದಿಂದ ಸ್ನಾತಕೋತ್ತರ ಪದವಿಯವರೆಗೆ ಕಲಿಯಬೇಕಿತ್ತು. ರಾಜಮನೆತನಗಳ ಆಳ್ವಿಕೆಯಲ್ಲಿ ಕನ್ನಡ ಸಂಪೂರ್ಣವಾಗಿ ನಿರ್ಲಕ್ಷ್ಯಕ್ಕೆ ಒಳಗಾಯಿತು.[೨೪]

ಒಟ್ಟಾರೆಯಾಗಿ ಹೇಳಬೇಕೆಂದರೆ ಹೈದರಾಬಾದ್ ಕರ್ನಾಟಕ ಸಾಮಾಜಿಕ ವಾಸ್ತವ ಒಟ್ಟು ಕರ್ನಾಟಕದ ಸಾಮಾಜಿಕ ವಾಸ್ತವಕ್ಕಿಂತ ಬಹಳ ಹಿಂದುಳಿದ ಪ್ರದೇಶವಾಗಿದೆ. ಇದಕ್ಕೆ ವಿರುದ್ಧವಾಗಿ ಬೆಳೆಯುತ್ತಿರುವ

ಜನಸಂಖ್ಯೆ, ಬಡತನ, ಹಿಂದುಳಿದ ಸಾಮಾಜಿಕ ವ್ಯವಸ್ಥೆ ಮಹಿಳೆಯರ ಅನಕ್ಷರತೆ ಹಾಗೂ ಕಡಿಮೆ ಮಟ್ಟದ ಸ್ಥಾನಮಾನ, ಮೂಢನಂಬಿಕೆಗಳು ಕಾರಣವಾಗಿವೆ. ಪ್ರತಿನಿಧಿಗಳಿಗೆ ಅಧಿಕಾರ ಹಸ್ತಾಂತರಗೊಂಡಾಗ ಅಖಂಡ ಕರ್ನಾಟಕ ಮತ್ತು ಅದರ ಸಮೃದ್ಧಿಯ ಕನಸು ಕಂಡ ಈ ಭಾಗದ ಜನರಿಗೆ ಬದಲಾವಣೆಯು ನೆಮ್ಮದಿ ಮತ್ತು ಸುಧಾರಣೆಯನ್ನು ತರಲಿಲ್ಲ. ಬದಲಾಗಿ ನಿಜಾಮ್ ಪ್ರಭುತ್ವದಿಂದ ಪ್ರಜಾಪ್ರಭುತ್ವದವರೆಗೆ ನಡೆದುಬಂದ ದಾರಿ ಅಸಮಾನತೆಯ ದಾರಿಯಾಯಿತು. ಇಲ್ಲಿನ ಜನರ ಬದುಕು ಅಭಿವೃದ್ಧಿಯ ಚಾಲನೆಗೆ ಒಳಪಡದೆ ನಿಂತ ನೀರಾಯಿತು. ಭಾಷಾವಾರು ರಾಜ್ಯ ರಚನೆಯಾಗಿ ಅದರ ಶತಮಾನದ ನಂತರವೂ ಇಂದು ರಾಜ್ಯದ ಒಂದು ಭಾಗವು ಪ್ರಗತಿ ಹೊಂದಿ ಸಮರ್ಥವಾಗಿದ್ದರೆ ಅದೇ ರಾಜ್ಯದ ಇನ್ನೊಂದು ಭಾಗವು ಅಭಿವೃದ್ಧಿಯಿಂದ ವಂಚಿತವಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ಅತೀ ಹಿಂದುಳಿದಿದ್ದು, ಇನ್ನು ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿದೆ.

**ಅಡಿಟಿಪ್ಪಣಿಗಳು**

೧. ಅಮರೇಶ ನುಗಡೋಣಿ, ನುಡಿವ ಬೆಡಗು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೨. ಅಮರೇಶ ನುಗಡೋಣಿ, ಸಂ., ಹೈದರಾಬಾದ್ ಕರ್ನಾಟಕದ ಹಾಡು-ಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಷೇಕ್‌ಅಲಿ (ಸಂ.), ಕರ್ನಾಟಕ ಚರಿತ್ರೆ ಸಂಪುಟ-೪, ಪು. ೨೨೪-೨೨೫.

೪. ಷೇಕ್‌ಅಲಿ (ಸಂ.), ಕರ್ನಾಟಕ ಚರಿತ್ರೆ ಮಾಲೆ-೬, ಪು. ೧೭೬.

೫. ಶಿವಕುಮಾರ ನಾಗವಾರ ಸಂ., ಹಣದಿ, ಲೋಹಿಯ ಪ್ರಕಾಶನ, ಬಳ್ಳಾರಿ, ೨೦೦೦, ಪು-VIII

೬. ಬಿ.ಸಿ. ಮಹಾಬಲೇಶ್ವರಪ್ಪ ಸಂ., ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ ೧೯೯೭, ಪು.೨೦.

೭. ಜಿ. ರಾಜಶೇಖರ ಸಂ., ತೆಲಂಗಾಣ ರೈತ ಹೋರಾಟ, ಸಮುದಾಯ ಪ್ರಕಾಶನ, ಬೆಂಗಳೂರು, ೧೯೮೧, ಪು. ೬-೮.

೮. ಷೇಕ್‌ಅಲಿ ಬಿ., (ಸಂ.), ಕರ್ನಾಟಕ ಚರಿತ್ರೆ ಮಾಲೆ-೬, ಪು. ೧೭೬.

೯. ವಸಂತ ಬನ್ನಾಡಿ (ಸಂ.), ಸಂಸ್ಕೃತಿ ಚಿಂತನೆ: ಅರಿವು, ಬರಹ ಪ್ರಕಾಶನ, ೧೯೯೫, ಪು.೪.

೧೦. ರವೀಂದ್ರನಾಥ ಕೆ. (ಸಂ.), ಬಳ್ಳಾರಿ ಜಿಲ್ಲಾದರ್ಶನ, ಪ್ರಸಾರಾಂಗ, ಗುಲ್ಬರ್ಗಾ, ೨೦೦೫, ಪು. ೭

೧೧. ಭಾಸ್ಕರ ಟಿ.ಎಂ., ಶ್ರೀ ರಾಜಶೇಖರ ಹತಗುಂದಿ, ಕಲ್ಬುರ್ಗಿ ಜಿಲ್ಲಾ ದರ್ಶನ, ಸಂ. ಸಾಂಸ್ಕೃತಿಕ ಪರಂಪರೆ ಮತ್ತು ಸ್ಥಿತ್ಯಂತರಗಳು, ಡಾ.ವ್ಹಿ.ಜಿ. ಪೂಜಾರ, ೨೦೦೫, ಪು.೩

೧೨. ಅದೇ, ಪು. ೬

೧೩. ಅದೇ, ಪು. ೨೧

೧೪. ಬೀದರ ಜಿಲ್ಲಾ ದರ್ಶನ, ಪು. ೧೦೦

೧೫. ರವೀಂದ್ರನಾಥ ಕೆ. ಸಂ., ಬಳ್ಳಾರಿ ಜಿಲ್ಲಾದರ್ಶನ, ಪ್ರಸಾರಾಂಗ, ಗುಲ್ಬರ್ಗಾ, ೨೦೦೫, ಪು. ೭

೧೬. ಮೃತ್ಯುಂಜಯ ಹೊರಕೇರಿ, ಬಸವಲಿಂಗ ಸೊಪ್ಪಿಮಠ, ರಾಯಚೂರು ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫, ಪು. ೯

೧೭. ಅಮರೇಶ ನುಗಡೋಣಿ, ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ್ ಕರ್ನಾಟಕ ವಿಮೋಚನಾ ಚಳುವಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು. ೨.

೧೮. ಎಸ್.ಆರ್. ರಾಮಸ್ವಾಮಿ, ಸರ್ದಾರ ವಲ್ಲಭಬಾಯಿ ಪಟೇಲ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೦, ಪು. ೨೮.

೧೯. ಗೋಪಾಲರಾವ್ ಹೇಜಿ ಸಂ., ಹೈದರಾಬಾದ್ ಮುಕ್ತಿ ಸಂಘರ್ಷ, ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಾಶನ, ಬೆಂಗಳೂರು, ೨೦೦೧, ಪು. ೨೦.

೨೦. ಶಿವಕುಮಾರ ನಾಗವಾರ, ಹಣದಿ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೦

೨೧. ಪ್ರೊ. ಛಾಯಾ ದೇಗಾಂವಕರ, ಲೇಖನ: ಸಂಯುಕ್ತ ಕರ್ನಾಟಕ

೨೨. ಅಮರೇಶ ನುಗಡೋಣಿ, ನುಡಿವ ಬೆಡಗು, ಪು. ೩೩.

೨೩. ಜಿ. ರಾಜಶೇಖರ, ತೆಲಂಗಾಣ ರೈತ ಹೋರಾಟ, ಸಮುದಾಯ ಪ್ರಕಾಶನ, ಬೆಂಗಳೂರು, ೧೯೮೧, ಪು. ೨೬.

೨೪. ಆರ್. ಇಂದಿರಾ, ಮಹಿಳೆ ಸಮಾಜ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೦–೨೧.

❋ ❋ ❋

ಅಧ್ಯಾಯ ಮೂರು

# ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿ ಗಂಡು–ಹೆಣ್ಣಿನ ಸ್ವರೂಪ

೩.೧. ವೇದಗಳ ಕಾಲದಲ್ಲಿ ಹೆಣ್ಣು

೩.೨. ಸ್ಮೃತಿಗಳ ಯುಗದಲ್ಲಿ

೩.೩. ಬೌದ್ಧ ಧರ್ಮದಲ್ಲಿ

೩.೪. ಜೈನ ಧರ್ಮದಲ್ಲಿ ಹೆಣ್ಣಿನ ಸ್ಥಾನಮಾನ

೩.೫. ಇಸ್ಲಾಂ ಧರ್ಮದಲ್ಲಿ ಹೆಣ್ಣಿನ ಸ್ಥಿತಿಗತಿ

೩.೬. ವಚನ ಸಾಹಿತ್ಯದಲ್ಲಿ

೩.೭. ಜನಪದ ಮಹಾಕಾವ್ಯಗಳಲ್ಲಿ ಹೆಣ್ಣು

೩.೮. ಕೌಟುಂಬಿಕ ಸಂಬಂಧಗಳು

ಅಧ್ಯಾಯ ಮೂರು

# ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿ ಗಂಡು-ಹೆಣ್ಣಿನ ಸ್ವರೂಪ

ನಿಸರ್ಗದಲ್ಲಿ ಸಸ್ಯವರ್ಗ ಒಳಗೊಂಡಂತೆ ಪಕ್ಷಿ-ಪ್ರಾಣಿ ವರ್ಗದ ಗಂಡು-ಹೆಣ್ಣುಗಳು ಸೃಷ್ಟಿಕ್ರಿಯೆಯಲ್ಲಿ ಪ್ರಧಾನ ಪಾತ್ರವಹಿಸುತ್ತವೆ. ಮಾನವ ಜನಾಂಗದಲ್ಲಿಯೂ ಸ್ತ್ರೀ-ಪುರುಷರು ಸೃಷ್ಟಿ ಪ್ರಕ್ರಿಯೆಯಲ್ಲಿ ಪ್ರಮುಖರು. ಇವರಲ್ಲಿ ಯಾರೂ ಶ್ರೇಷ್ಠರಲ್ಲ, ಯಾರೂ ಕನಿಷ್ಠರೂ ಅಲ್ಲ. ಇಬ್ಬರೂ ಸಮಾನರು. ಆದ್ದರಿಂದಲೇ ಮಾನವ ಸಮಾಜದಲ್ಲಿ ಸ್ತ್ರೀ-ಪುರುಷರನ್ನು ಸೃಷ್ಟಿಯ ಎರಡು ಕಣ್ಣುಗಳೆಂದು ಹಾಗೂ ಒಂದೇ ನಾಣ್ಯದ ಎರಡು ಮುಖಗಳೆಂದು ಕರೆಯುವುದುಂಟು.

ಸಂಸ್ಕೃತಿಯ ಪೂರ್ವಯುಗ ಅಥವಾ ಶಿಲಾಯುಗದಲ್ಲಿ ಸ್ತ್ರೀ-ಪುರುಷರು ಸರ್ವಕ್ಷೇತ್ರಗಳಲ್ಲಿಯೂ ಸಮಾನರಾಗಿಯೇ ಇದ್ದರು. ಹುಟ್ಟುಡುಗೆಯಲ್ಲಿಯೇ ಇದ್ದರೂ ದೈಹಿಕ ಹಾಗೂ ಮಾನಸಿಕವಾದ ಬೇಧಭಾವ ವಿರಲಿಲ್ಲ. ಕೂಡಿಯೇ ಬೇಟೆಯಾಡುವುದು, ಮಾಂಸ ಬೇಯಿಸುವುದು, ತಿನ್ನುವುದು, ತಿರುಗುವುದು, ಮೀಯುವುದು, ಮಲಗುವುದು, ಏಳುವುದು, ವಿಹರಿಸುವುದು ಹೀಗೆ ದೈನಂದಿನ ಎಲ್ಲಾ ಕ್ರಿಯೆಗಳೂ ಯಾವ ತಾರತಮ್ಯವಿಲ್ಲದೆ ಸಮಾನವಾಗಿಯೇ ಜರುಗುತ್ತಿದ್ದವು. ಹೆಣ್ಣು ಎಂದರೆ ಅಬಲೆ, ಅಜ್ಞಾನಿ, ಪಾಪಿ, ನೀಚಳು ಎಂಬ ಭಾವನೆಯೇ ಇರಲಿಲ್ಲ. ಇಂದೂ ಕೂಡ ಆಫ್ರಿಕಾ ಖಂಡದಲ್ಲಿ ಕಾಣಸಿಗುವ ಆದಿವಾಸಿ ಸ್ತ್ರೀ-ಪುರುಷರು ಎಲ್ಲ ಕ್ಷೇತ್ರಗಳಲ್ಲಿ ಸಮಾನವಾಗಿಯೇ ಇರುವುದನ್ನು ಕಾಣಬಹುದು.

ಮಾನವ ಆದಿಮಾನವನ ಅವಸ್ಥೆಯನ್ನು ದಾಟಿ ಮನೆ-ಮಹಲನ್ನು ಕಟ್ಟಿಕೊಂಡು ಆಸ್ತಿ-ಪಾಸ್ತಿಯನ್ನು ಮಾಡಿಕೊಳ್ಳಲು ತೊಡಗಿದಾಗ ಗಂಡು ಹೆಣ್ಣನ್ನು ತನ್ನ ಅಧೀನದಲ್ಲಿಟ್ಟುಕೊಂಡು ತಾನು ಯಜಮಾನನಾದ. ನೈಸರ್ಗಿಕವಾದ ಸ್ತ್ರೀಯ ಗರ್ಭ, ಹೆರಿಗೆ, ಬಾಣಂತನ, ಮಕ್ಕಳ ಪೋಷಣೆಗಳು ಅವಳನ್ನು ಕೆಲವು ಕಾಲ ಮನೆಗೆ ಮಾತ್ರ ಸೀಮಿತಗೊಳಿಸಿರುವುದು ಪುರುಷನ ಯಜಮಾನಿಕೆಗೆ ಕೇಡು ಮಾಡಿಸಿದವು. ವ್ಯವಸಾಯ,

ವ್ಯವಹಾರ, ಯುದ್ಧ, ಅಸಹಾಯಕ ಸ್ತ್ರೀಯ ರಕ್ಷಣೆ ಇತ್ಯಾದಿ ಜವಾಬ್ದಾರಿಗಳನ್ನು ಪುರುಷ ತನ್ನದಾಗಿಸಿಕೊಂಡು ಅವಳನ್ನು ದಾಸ್ಯೆ, ದಾಸಿ ಎಂದು ಮುಂತಾಗಿ ಜರಿಯತೊಡಗಿದ. ಹೆಣ್ಣನ್ನು ತನ್ನ 'ಸೊತ್ತು' ಎಂದು ಪರಿಗಣಿಸಿ ಬೇಕಾದ ಹಾಗೆ ಬಳಸಿಕೊಳ್ಳುವ, ಮಾರಿಕೊಳ್ಳುವ ಯಜಮಾನಿಕೆಯನ್ನು ಪಡೆದ. ಪ್ರಾಚೀನ ನಾಗರಿಕತೆಗಳಲ್ಲಿ ಸ್ತ್ರೀಯರ ಸ್ಥಾನಮಾನಗಳು ಅಷ್ಟೊಂದು ಕುಸಿದಿರಲಿಲ್ಲವೆಂದೇ ಹೇಳಬೇಕು. ಇಜಿಪ್ತ್ ನಾಗರಿಕತೆಯು (ಕ್ರಿಪೂ. ೩೫೦೦) ಮಾತೃಪ್ರಧಾನವಾಗಿತ್ತು. ಆಸ್ತಿಯು ತಾಯಿಯಿಂದ ಮಗಳಿಗೆ ಹಸ್ತಾಂತರ ವಾಗುತ್ತಿತ್ತು. ಇದರಿಂದ ರಾಜರು(ಫೇರೋ) ತಮ್ಮ ಸ್ವಂತ ಮಗಳನ್ನೇ ಮದುವೆಯಾಗುತ್ತಿದ್ದರು. ಇದು ಮುಂದೆ ಅಣ್ಣ-ತಂಗಿಯರಲ್ಲಿಯೂ ಬಳಕೆಗೆ ಬಂದಿತು ಎಂದು ಇತಿಹಾಸದಿಂದ ತಿಳಿದುಬರುತ್ತದೆ.

ಮೆಸಪೊಟೋಮಿಯ ಸಂಸ್ಕೃತಿಯು ಪಿತೃಪ್ರಧಾನವಾಗಿದ್ದರೂ ಸ್ತ್ರೀಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮ ಪಾಲಿತ್ತು. ಆದರೆ ರಾಜಕೀಯದಲ್ಲಿ ಸ್ತ್ರೀಯರ ಪ್ರವೇಶಕ್ಕೆ ಅವಕಾಶವೇ ಇರಲಿಲ್ಲ. ಸುಮೇರಿಯನ್ನರ ಸಮಾಜದಲ್ಲಿ ಗುಲಾಮ ವರ್ಗದ ಸ್ತ್ರೀಯರನ್ನು ಹೊರತುಪಡಿಸಿ ರಾಜಮನೆತನದ, ಪುರೋಹಿತರ ಹಾಗೂ ಶ್ರೀಮಂತ ವರ್ಗದ ಸ್ತ್ರೀಯರಿಗೆ ಉನ್ನತ ಸ್ಥಾನಮಾನಗಳಿದ್ದವು. ಹಮ್ಮುರಾಬಿಯ ಕಾನೂನು ಸ್ತ್ರೀ-ಪುರುಷರಿಗೆ ಸಮಾನವಾಗಿತ್ತು. ಹದ್ದುಮೀರಿ ವರ್ತಿಸಿದ ಹೆಂಡತಿಗೂ ಮರಣದಂಡನೆಯಿತ್ತು. ಬಹುಪತ್ನಿತ್ವ ಪದ್ಧತಿ ಶ್ರೀಮಂತ ವರ್ಗದವರಲ್ಲಿ ವಿಶೇಷವಾಗಿತ್ತು ಎಂದು ತಿಳಿದುಬರುತ್ತದೆ. ನಾಗರಿಕ ಪೂರ್ವಯುಗದಲ್ಲಿ ವಿವಾಹ ವ್ಯವಸ್ಥೆಯೇ ಇರಲಿಲ್ಲ. ನಾಗರಿಕ ಜೀವನದ ವಿವಾಹ ವ್ಯವಸ್ಥೆಯೂ ಒಂದು ಹೆಣ್ಣಿನ ಲೈಂಗಿಕತೆಯನ್ನು ಪುರುಷ ತನ್ನೊಬ್ಬನಿಗೆ ಮಾತ್ರ ಸೀಮಿತಗೊಳಿಸಿಕೊಳ್ಳುವಂತೆ ಮಾಡಿತು. ಇಲ್ಲಿಂದಲೇ ಸ್ತ್ರೀಯ ಲೈಂಗಿಕ ಮುಕ್ತತೆ, ಸ್ವಾತಂತ್ರ್ಯ ತಪ್ಪಿ ಶೋಷಣೆ ಪ್ರಾರಂಭವಾಯಿತೆನ್ನಬಹುದು. ಬಹುಪತ್ನಿತ್ವ ಪದ್ಧತಿಯಂತೂ ಹೆಣ್ಣಿನ ಲೈಂಗಿಕ ದಾಸ್ಯದ ಪರಮಾವಧಿಯೆನ್ನಬಹುದು. ಚೀನಾ ದೇಶದ ಪ್ರಾಚೀನ ನಾಗರಿಕತೆಯ ತತ್ವಜ್ಞಾನಿ ಕನ್‌ಫ್ಯೂಸಿಯಸ್ ಮಕ್ಕಳು ತಂದೆ-ತಾಯಿಯರಿಗೆ, ವಿದ್ಯಾರ್ಥಿಗಳು ಗುರುಗಳಿಗೆ ವಿಧೇಯರಾಗಿರುವಂತೆಯೇ ಹೆಂಡತಿ ಗಂಡನಿಗೆ ವಿಧೇಯಳಾಗಿರಬೇಕು ಎನ್ನುವ ಹೇಳಿಕೆಯಲ್ಲಿ ಸ್ತ್ರೀ-ಪುರುಷ ಸಮಾನತೆಯು ತಪ್ಪಿ ಪುರುಷನ ಯಜಮಾನಿಕೆ, ಸ್ತ್ರೀಯ ದಾಸ್ಯ ಪ್ರಾರಂಭವಾಗಿರುವುದನ್ನು ಸಮರ್ಥಿಸುತ್ತದೆ. ಮಾನವ ಸಮಾಜದಲ್ಲಿ ಪುರುಷ-ಪುರುಷನನ್ನು ದಾಸ್ಯದಲ್ಲಿಟ್ಟುಕೊಳ್ಳುವ ಮೊದಲೇ ಸ್ತ್ರೀಯನ್ನು ದಾಸ್ಯದಲ್ಲಿಟ್ಟುಕೊಂಡನೆಂದು ಹೇಳಬಹುದು.

ಮಾತೃಪ್ರಧಾನ ಅಥವಾ ಸ್ತ್ರೀಪ್ರಧಾನ ಸಮಾಜ ವ್ಯವಸ್ಥೆಗಳಲ್ಲಿ ಸ್ತ್ರೀಯರು ಎಲ್ಲಾ ಕ್ಷೇತ್ರಗಳಲ್ಲಿಯೂ ಸ್ವಾತಂತ್ರ್ಯವನ್ನು ಪಡೆದರೆ, ಪಿತೃಪ್ರಧಾನ ಇಲ್ಲವೆ ಪುರುಷ ಪ್ರಧಾನ ನಾಗರಿಕ ವ್ಯವಸ್ಥೆಗಳಲ್ಲಿ ಸ್ತ್ರೀ ತನ್ನ ಎಲ್ಲಾ ಸ್ವಾತಂತ್ರ್ಯಗಳನ್ನು ಕಳೆದುಕೊಂಡು ಪುರುಷಾಧೀನಳಾಗಿ ಬದುಕುವಂತಾಯಿತು. ಇಷ್ಟೇ ಅಲ್ಲದೆ ಪುರುಷನಿಗಾಗಿಯೇ ಬದುಕಬೇಕಾಯಿತು ಎಂದು ಹೇಳಿದರೆ ತಪ್ಪಾಗಲಾರದು. ಗಂಡಿಗಾಗಿ ಹೆಣ್ಣು; ಹೆಣ್ಣಿಗಾಗಿ ಗಂಡು ಎಂಬ ನಿಸರ್ಗ ಸಮಾನತೆಯ ತತ್ವ ಮಾಯವಾಗಿ ಗಂಡಿಗಾಗಿ ಹೆಣ್ಣು, ಹೆಣ್ಣಿಗಾಗಿ ಗಂಡಲ್ಲ ಎಂಬ ಪುರುಷ ಪ್ರಧಾನ ವ್ಯವಸ್ಥೆಯ ತತ್ವ ಸ್ಥಾಪಿತವಾಯಿತೆನ್ನಬಹುದು.[೧]

ಗಂಡು ಎಂಬ ಪದಕ್ಕೆ ಗಂಡಸು, ಪುರುಷ, ಮಾನವ, ಮರ್ತ್ಯ, ಮನುಜ, ಮಾನುಷ, ನರ ಮೊದಲಾದ ಸಮಾನಾರ್ಥಕ ಪದಗಳಿವೆ. ಮನುಷ್ಯ, ಮನುಷ್ಯತ್ವ, ಮಾನುಷ, ಮನಿಸ, ಮನಿಸರ್ ಇವೆಲ್ಲ

ಸಮೀಪ ಅರ್ಥಸಂಬಂಧಿ ಪದಗಳಾಗಿದ್ದು, ಕೆಲವು ನಿರ್ದಿಷ್ಟ ಗುಣಗಳನ್ನು ಅಪೇಕ್ಷಿಸುತ್ತವೆ. 'ಅವನಿಗೆ ಮನುಷ್ಯತ್ವವೇ ಇಲ್ಲ' ಎನ್ನುವಲ್ಲಿ ಮನುಷ್ಯನಿಗೆ ಸಹಜವಾದ ಕೆಲವು ಗುಣಗಳಿರಬೇಕೆಂಬ ಅಪೇಕ್ಷೆ ಇದೆ. ಅಮಾನುಷ ಎನ್ನುವಲ್ಲಿ ಮಾನುಷಕ್ಕೆ ಸರಿಬರದ 'ಪಶುತ್ವ' ಎಂಬ ಅರ್ಥ ಉಂಟಾಗುತ್ತದೆ. ಮಾನವ ಎನ್ನುವುದು ಪೂರ್ಣವಾಗಿ ಪುರುಷ ಸಂಕುಲವನ್ನು ಪ್ರತಿಬಿಂಬಿಸುತ್ತದೆ. 'ಮಾನವ ಸ್ತ್ರೀ' ಎಂಬ ಪದ ಪ್ರಯೋಗವು ನಮ್ಮಲ್ಲಿದ್ದು, ಮಾನವರಲ್ಲಿ ಸ್ತ್ರೀ ಒಂದು ಭಾಗ ಎಂಬ ಅರ್ಥ ಮೂಡುವಂತಿದೆ. ಮಾನವ, ಮಾನವೀಯ ಎನ್ನುವ ಪದಗಳು ನಮ್ಮಲ್ಲಿ ಬಳಕೆಯಲ್ಲಿವೆ. ಕೆಲವು ನಿರ್ದಿಷ್ಟ ಗುಣಗಳಿರುವ ವ್ಯಕ್ತಿ ಎನ್ನುವಲ್ಲಿ ಮಾನವೀಯ ಎಂದೂ, ಆ ನಿರ್ದಿಷ್ಟ ಗುಣಗಳ ಅಭಾವವಿರುವಲ್ಲಿ 'ಅಮಾನವೀಯ' ಎನ್ನುವ ಅರ್ಥ ಬರುತ್ತದೆ. ಆ ನಿರ್ದಿಷ್ಟ ಗುಣಗಳು ಮನುಷ್ಯನನ್ನು ಪಶುತ್ವದಿಂದ ಮೇಲೇರಿಸುವ ಅಂದರೆ ಪಶುಗಳಲ್ಲಿ ಇಲ್ಲದಿರುವ ವಿಶೇಷವಾಗಿ ಮನುಷ್ಯರಲ್ಲಿ ಮಾತ್ರ ಇರಬಹುದಾದ ವಿಶಿಷ್ಟತೆಗಳು ಎಂದು ಗುರುತಿಸಬಹುದು. ದಯೆ, ಕರುಣೆ, ಅನುಕಂಪ, ಪ್ರೀತಿ, ಸಹಕಾರ, ಆಲೋಚನೆ, ಮಾತು ಇತ್ಯಾದಿಗಳು ಆ ವಿಶಿಷ್ಟತೆಗಳಾಗಿವೆ. ಅಮಾನುಷ, ಅಮಾನವೀಯ, ಮನುಷ್ಯತ್ವ, ಮಾನವೀಯ ಈ ಪದಗಳು ಕೇವಲ ಪುರುಷ ಕೇಂದ್ರಿತ ನೆಲೆಯಿಂದ ಮೂಡಿ ಒಟ್ಟಾರೆ ಪುರುಷ ಸಂಕುಲವನ್ನು ಪ್ರತಿಬಿಂಬಿಸುತ್ತವೆ. ಗಂಡು ಎಂದರೆ 'ಪುರುಷ', ಪುರುಷದಿಂದ ಪೌರುಷ, ಪೌರುಷ ಅಂದರೆ ಬಲ, ಬಲದಿಂದ ಪ್ರಬಲ, ಪ್ರಬಲದಿಂದ ಪ್ರಾಬಲ್ಯ ಅಂದರೆ ಗಂಡು ಪ್ರಬಲನಾದವನು, ಬಲಯುತ ಎಂಬುದು ಅರಿವಾಗುತ್ತದೆ. ಇದೇ ಸಂದರ್ಭದಲ್ಲಿ ಹೆಣ್ಣನ್ನು 'ಅಬಲೆ' ಎಂದು ಗುರುತಿಸುವುದನ್ನು ಕಾಣುತ್ತೇವೆ. ಇದು ಗಂಡು ಹೆಣ್ಣಿನ ದೈಹಿಕ ಸಾಮರ್ಥ್ಯವನ್ನು ಆದರಿಸಿರುವಂಥದ್ದು. ಗಂಡು ಸಹಜವಾಗಿ ಬಲಯುತನೇ; ಅವನಿಗೆ ಯಾವುದೇ ವಿಧವಾದ, ಅವನನ್ನು ನಿರ್ಬಲನನ್ನಾಗಿ ಮಾಡುವಂತಹ ದೈಹಿಕ ಬದಲಾವಣೆಯ ಗುಣಗಳಿಲ್ಲ. (ಅಂದರೆ ಸ್ತ್ರೀಗೆ ಇರುವಂತೆ ಬಸಿರು, ಬಾಣಂತನ, ಮುಟ್ಟು ಇತ್ಯಾದಿ) ಹಾಗಾಗಿಯೇ ಗಂಡು ಯಾವಾಗಲೂ 'ಸಬಲನೆ'; ಅಂದರೆ ಹೆಣ್ಣನ್ನು ಬಸಿರು, ಬಾಣಂತನ, ಮುಟ್ಟು ಇತ್ಯಾದಿ ಸಂದರ್ಭಗಳು 'ಅಬಲೆ'ಯನ್ನಾಗಿ ಮಾಡಿಬಿಡುತ್ತವೆ.

ಈ ಸಂದರ್ಭದಲ್ಲಿ ಹೆಣ್ಣು ಗಂಡಿನ ಸರಿಸಮನಾಗಿ ಯಾವ ಕೆಲಸ ಕಾರ್ಯಗಳನ್ನು ಮಾಡಲು ಸಾಧ್ಯವಾಗುವುದಿಲ್ಲ. ಆಗ ಸಹಜವಾಗಿಯೇ ಅವಳು ಪುರುಷನ ಜೊತೆ ಸಮಸ್ಪರ್ಧೆಯಿಂದ ಹಿಂದುಳಿಯುತ್ತಾಳೆ. ಈ ವಿಷಯಗಳನ್ನು ನಾವು ಆದಿಮಾನವ (ಶಿಲಾಯುಗ) ಸಂದರ್ಭಕ್ಕೆ ಪರಿಗಣಿಸುವುದಾದರೆ ಬೇಟೆಯೇ ಅಂದಿನ ಮುಖ್ಯ ಉದ್ಯೋಗವಾಗಿತ್ತು. ಆಹಾರ ಸಂಗ್ರಹಣೆಗಾಗಿ ಪರದಾಡುವುದು, ಗಡ್ಡೆ-ಗೆಣಸುಗಳಿಗಾಗಿ ನೆಲ ಅಗೆಯುವುದು, ಹಣ್ಣುಗಳಿಗಾಗಿ ಮರವೇರುವುದು, ಪ್ರಾಣಿಗಳನ್ನು ಬೆನ್ನಟ್ಟುವುದು ಮತ್ತು ಅವುಗಳನ್ನು ಕೊಲ್ಲುವುದು ಇವೆಲ್ಲವೂ ಬಲವನ್ನು ಬಯಸುವಂತಹ ಕ್ರಿಯೆಗಳು. ಈ ಕ್ರಿಯೆಗಳಲ್ಲಿ ಸ್ತ್ರೀ ಎಲ್ಲ ಸಂದರ್ಭದಲ್ಲೂ ಗಂಡಿಗೆ ಸರಿ ಸಮಾನವಾಗಿ ಸಹಕರಿಸಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಅಸಹಾಯಕ ಪರಿಸ್ಥಿತಿಯಲ್ಲಿ ಹೆಣ್ಣು ಗಂಡನ್ನು ಅವಲಂಬಿಸುವಂತಾಯಿತು. ಈ ಅವಲಂಬನೆ ಅವಳನ್ನು ಎರಡನೇ ಸ್ಥಾನಕ್ಕಿಳಿಸಿತು. ಇಂತಹ ಸಂದರ್ಭದಲ್ಲಿ ಗಂಡು ಪ್ರಬಲನಾದ, ಹೆಣ್ಣು ಅಬಲೆಯಾದಳು. ಈ ಹಂತದಲ್ಲಿಯೇ ಆದಿಮಾನವ ಪಶುಪಾಲನೆಯಲ್ಲಿ ತೊಡಗಿಸಿಕೊಂಡ. ಆಹಾರಕ್ಕಾಗಿ, ಹುಲ್ಲಿಗಾಗಿ, ಸಹಾಯಕ್ಕಾಗಿ ಸಾಧುಪ್ರಾಣಿಗಳನ್ನು

ಸಾಕುವ ಕೆಲಸಕ್ಕೆ ಕೈಹಾಕಿ ಯಶಸ್ವಿಯಾದ. ಅವುಗಳ ಸಂಖ್ಯೆ ಹೆಚ್ಚಾದಂತೆ ಬಲವೂ ಹೆಚ್ಚಾಯಿತು. ಬಲ ಹೆಚ್ಚಾಗುವುದು ಪ್ರಾಬಲ್ಯ ಸ್ಥಾಪನೆಗೆ ಅಡಿಗಲ್ಲಾಗುತ್ತದೆ. ಸಹಜವಾಗಿಯೇ ಬಲಹೀನರ ಮೇಲೆ ಆಕ್ರಮಣ ಮಾಡಿ ಅವರನ್ನು ಸೇವಕರನ್ನಾಗಿಸಿಕೊಳ್ಳುವುದು ಸುಲಭವಾಗುತ್ತದೆ. ಹೀಗಾಗಿ ಗುಲಾಮ ವರ್ಗ ಸೃಷ್ಟಿಯಾಯಿತು. ಮನೆ-ಮಕ್ಕಳ ಪಾಲನೆ ಪೋಷಣೆ ಕಾರ್ಯದಲ್ಲಿಯೇ ಬಿಡುವಿಲ್ಲದಂತಿರುವ ಮಹಿಳೆಯರು ದುಡಿಮೆಯಲ್ಲಿ ಪಾಲ್ಗೊಳ್ಳದೇ ಇರುವ ಕಾರಣ ಅವರು ಸಹ ತಮ್ಮ ಗಂಡಂದಿರ ಮತ್ತು ಪುರುಷರ ಸೇವಕರಾದರು, ಅಧೀನತೆಗೊಳಗಾದರು.

ಪಂಪ 'ಮನುಷ್ಯ ಜಾತಿ ತಾನೊಂದೆ ವಲಂ' ಎಂದು ಹೇಳಿ ಜಾತಿ, ವರ್ಣ, ವರ್ಗ, ಬೇಧಗಳನ್ನು ನಿರಾಕರಿಸುತ್ತಾನೆ. ಆದರೆ 'ಮನುಷ್ಯ' ಎನ್ನುವಲ್ಲಿ ಪುರುಷ ಕಲ್ಪನೆಯನ್ನು ಮಾತ್ರವೇ ಸ್ವೀಕೃತ ಮೌಲ್ಯವಾಗಿಸಿರುವಂತಿದೆ. ಮನುಷ್ಯ ಎಂದ ಕೂಡಲೇ ಅದರಲ್ಲಿ ಗಂಡು ಹೆಣ್ಣು ಎಂಬ ಭಿನ್ನ ಲಿಂಗ ವಿಭಾಗವನ್ನು ಹೇಳಲೇಬೇಕಾಗಿದೆ. ಆದರೆ ಮೂಲಭೂತವಾಗಿ ಗಂಡಿನಿಂದ ಹೆಣ್ಣು ಹುಟ್ಟಿದಳೋ ಅಥವಾ ಹೆಣ್ಣಿನಿಂದ ಗಂಡು ಹುಟ್ಟಿದನೋ ಹೇಳುವುದು ಕಷ್ಟ. ಅಲ್ಲದೆ ಇವರಿಬ್ಬರೂ ಏಕಕಾಲದಲ್ಲಿ ಹುಟ್ಟಿದರು ಎಂದು ಹೇಳುವುದು ಇನ್ನೂ ಕಷ್ಟವಾದುದು. ಗಂಡಿನಲ್ಲಿ ಹೆಣ್ಣಿನ ಗುಣಸ್ವಭಾವ ಬೆರೆತಿರುವಂತೆ, ಹೆಣ್ಣಿನಲ್ಲಿ ಗಂಡಿನ ಗುಣ ಸ್ವಭಾವವೂ ಬೆರೆತಿರುತ್ತದೆ. ಈ ಗುಣ ಸ್ವಭಾವಗಳ ಶೇಕಡವಾರು ಪ್ರಮಾಣದ ಆಧಾರದ ಮೇಲೆ ಗಂಡು-ಹೆಣ್ಣು ಎಂಬುದು ನಿರ್ಧರಿಸಲ್ಪಡುತ್ತದೆ. ತಾಯಿಯ ಗರ್ಭದಲ್ಲಿದ್ದಾಗ ಮಗುವಿಗೆ ಅದು ಹೆಣ್ಣಾಗಲಿ, ಗಂಡಾಗಲಿ ತಾಯಿಯ ಮೂಲಕವಾಗಿ ಆಹಾರವು ಸರಬರಾಜಾಗುತ್ತಿರುತ್ತದೆ. ತಾಯ ಗರ್ಭದಿಂದ ಬೆಳವಣಿಗೆಗೊಂಡು ಕರುಳ ಬಳ್ಳಿಯನ್ನು ಕತ್ತರಿಸಿಕೊಂಡು ಹೊರಬಂದಾಗಲೂ ನಿರ್ದಿಷ್ಟ ಅವಧಿಯವರೆಗೆ ಸಾಮಾನ್ಯವೆನ್ನಬಹುದಾದ ಮಗುವಿನ ಗುಣಗಳಿರುತ್ತವೆ. ಅದಕ್ಕೆ ಹೆಣ್ಣು ಗಂಡೆಂಬ ಪ್ರತ್ಯೇಕತೆ ಅಷ್ಟೊಂದು ದೃಢವಾಗಿರುವುದಿಲ್ಲ. ಅದಕ್ಕೆ ಇರಬೇಕು ಮಗುವನ್ನು ನಪುಂಸಕ ವರ್ಗಕ್ಕೆ ಸೇರಿಸಿರುವುದು. ಧ್ವನಿಯಲ್ಲಾಗಲಿ ದೇಹದ ಬೆಳವಣಿಗೆಯಲ್ಲಾಗಲೀ (ಜನನಾಂಗಗಳ ಇರುವಿಕೆಯನ್ನು ಹೊರತುಪಡಿಸಿ) ವ್ಯತ್ಯಾಸವೇ ಇರುವುದಿಲ್ಲ. ನಿರ್ದಿಷ್ಟ ವಯಸ್ಸಿನ ನಂತರ ವ್ಯತ್ಯಾಸಗಳು ಕಾಣುತ್ತವೆ. ಅದನ್ನು ಕಂಡೇ

"ಮೊಲೆ ಮುಡಿ ಬಂದರೆ ಹೆಣ್ಣೆಂಬರು,
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು
ಹೆಣ್ಣೂ ಅಲ್ಲ ಗಂಡೂ ಅಲ್ಲ ಕಾಣಾ ರಾಮನಾಥ"[೨]

ಎಂದು ಜೇಡರ ದಾಸಿಮಯ್ಯ ಹೇಳಿರುವುದು. ದೈಹಿಕ ಚಹರೆ ಬದಲಾವಣೆಯ ಮೂಲಕವೇ ಗಂಡು-ಹೆಣ್ಣೆಂದು ನಿರ್ಧರಿಸಲು ಸಾಧ್ಯವಿದೆ. ಆದರೂ ಅಪರೂಪವಾಗಿ ಒಮ್ಮೊಮ್ಮೆ ಹೆಣ್ಣೆಂದು ಬಾಲ್ಯದಿಂದ ಗುರುತಿಸಿಕೊಂಡು ಬಂದು ನಿರ್ದಿಷ್ಟ ವಯೋಮಾನ ತಲುಪಿದಾಗ ಗಂಡಾಗಿ ಪರಿವರ್ತನೆ ಹೊಂದಿರುವುದು, ಹಾಗೆಯೇ ಗಂಡೆಂದು ಬಾಲ್ಯದಿಂದ ಗುರುತಿಸಿಕೊಂಡು ಬಂದು ನಿರ್ದಿಷ್ಟ ವಯೋಮಾನ ತಲುಪಿದಾಗ ಹೆಣ್ಣಾಗಿ ಪರಿವರ್ತನೆ ಹೊಂದಿರುವುದನ್ನು ಅಲ್ಲಲ್ಲಿ ಕಾಣಬಹುದಾಗಿದೆ. ಹೆಣ್ಣಾಗಲಿ, ಗಂಡಾಗಲಿ ತಾಯಿಯಿಂದ ನಿರೀಕ್ಷೆ ಮಾಡುವುದು ಹಿತವಾದ ಸ್ಪರ್ಶ, ಆಹಾರ ಜೊತೆಗೆ ವಾತ್ಸಲ್ಯವನ್ನು. ಬೆಳವಣಿಗೆಯ ಹಂತದಲ್ಲಿ

ಹೆಣ್ಣು ಮಗು ತಾಯಿಯ ಜೊತೆ ಹಾಲುಣ್ಣುವಾಗ ಇತರೆ ಸಂದರ್ಭಗಳಲ್ಲಿ ಹೇಗೆ ವ್ಯವಹರಿಸುತ್ತದೆಯೋ ಹಾಗೆಯೇ ಗಂಡು ಮಗುವೂ ವರ್ತಿಸುತ್ತದೆ. ಅದನ್ನು ವಿರುದ್ಧ ಲಿಂಗದ ಆಕರ್ಷಣೆ, ಈಡಿಪಸ್ ಕಾಂಪ್ಲೆಕ್ಸ್ ಮೊದಲಾದ ಹೇಳಿಕೆಗಳಿಂದ ವಿಶ್ಲೇಷಿಸುವುದು ಅಸಹಜವಾಗಿ ಕಾಣಬಹುದೆನಿಸುತ್ತದೆ.

ಮನುಷ್ಯ ಕುಲ ತುಂಬಾ ಹಳೆಯದು. ಆದರೆ ಚರಿತ್ರೆಯ ಕುರಿತ ತಿಳಿವಳಿಕೆ ಮನುಷ್ಯನಿಗೆ ಮಾಡಿದ್ದು ತೀರಾ ತಡವಾಗಿಯೇ ಎಂದು ಹೇಳಬಹುದು. ಮನುಷ್ಯ ಕುಲದ ಉಗಮವನ್ನು ವಿಜ್ಞಾನಿಗಳು ಏಳುಕೋಟಿ ವರ್ಷಗಳಷ್ಟು ಹಳೆಯದೆಂದು ಗುರುತಿಸಿದ್ದಾರೆ.[೩] ಮನುಷ್ಯನು ಶಿಲಾಯುಗ, ಪುರಾಣಯುಗ, ಇತಿಹಾಸಯುಗ ಎಂಬ ವಿವಿಧ ಘಟ್ಟಗಳನ್ನು ದಾಟಿಕೊಂಡು ಬಂದಿದ್ದಾನೆಂದು ಹೇಳುತ್ತಾರೆ. ಮನುಷ್ಯನ ಬುದ್ಧಿ, ಶರೀರ, ನಾಗರಿಕತೆ, ಸಂಸ್ಕೃತಿಗಳ ವಿಕಾಸದ ಚರಿತ್ರೆಯೇ ಮನುಷ್ಯನ ಚರಿತ್ರೆ ಆಗಿರುತ್ತದೆ. ಮನುಷ್ಯ ಚರಿತ್ರೆಯಷ್ಟು ಕುತೂಹಲಕಾರಿಯಾದ ವಿಷಯ ಬಹುಶಃ ಪ್ರಪಂಚದಲ್ಲಿ ಬೇರೊಂದು ಇರಲಿಕ್ಕಿಲ್ಲ. ಆ ಚರಿತ್ರೆಯನ್ನು ಕಟ್ಟಿಕೊಡುವ ಕೆಲಸವನ್ನು ಜೀವ ವಿಜ್ಞಾನಿಗಳು ಹಾಗೂ ಮಾನವಿಕ ವಿಜ್ಞಾನಿಗಳು ಮಾಡುತ್ತಾ ಬಂದಿದ್ದಾರೆ. ಒಂದರ್ಥದಲ್ಲಿ ಮನುಷ್ಯನ ಚರಿತ್ರೆಯೆಂದರೆ ಅವನಿಗೆ ಆಶ್ರಯ ತಾಣವಾಗಿರುವ ಸೃಷ್ಟಿಯ ಚರಿತ್ರೆ ಮತ್ತು ಅವನ ಜೀವನದ ಚಾಲನೆಗೆ ಕಾರಣವಾಗಿರುವ ಕಾಲದ ಚರಿತ್ರೆಯೂ ಆಗಿರುತ್ತದೆ. ಹೀಗಾಗಿ ಲೋಕದ ಮತ್ತು ಕಾಲದ ಚರಿತ್ರೆಯೊಂದಿಗೆ ಮನುಷ್ಯ ಚರಿತ್ರೆಯೂ ತನ್ನ ಪೂರ್ಣತ್ವವನ್ನು ಪಡೆದುಕೊಳ್ಳುತ್ತದೆ ಎಂದು ಹೇಳಬಹುದು.[೪]

ಅಲೆಮಾರಿಗಳ ಕಾಲದಲ್ಲಿ ಗಂಡಸು ತನ್ನ ಗುಂಪಿಗೆ ಒತ್ತಾಸೆಯಾಗಿದ್ದ. ಆದರೆ ಜೈವಿಕ ವರ್ತನೆಗಳ ನೆಲೆಯಲ್ಲಿ ತಮ್ಮ ಶ್ರಮವನ್ನು ವ್ಯಯಿಸುವ ಕೆಲಸಗಾರ ಜೇನುಹುಳುಗಳ ರೀತಿಯಲ್ಲಾಗದೇ ತನ್ನ ಪ್ರಾಣಿ ಸ್ವಭಾವವನ್ನು ಮೀರುವ ಸ್ಥಿತಿಯಿಂದ ಆತ ದುಡಿಯಬಲ್ಲವನಾದ. ಗಂಡಸು ಮೊದಲಿನಿಂದಲೂ ಹೊಸದನ್ನು ಕಟ್ಟುವವನು. ಹಣ್ಣುಗಳನ್ನು ಮರದಿಂದ ಬೀಳಿಸಲು, ಪ್ರಾಣಿಗಳನ್ನು ಓಡಿಸಲು ಕೈಯಲ್ಲಿ ಆತ ಹಿಡಿದ ದೊಣ್ಣೆ ಲೋಕದ ಮೇಲೆ ಅವನ ಹಿಡಿತವನ್ನು ಹೆಚ್ಚಿಸುವ ಉಪಕರಣವಾಯಿತು. ತನ್ನನ್ನು ತಾನು ಸಮುದ್ರಕ್ಕೆ ಹೋಗಿ ಮೀನು ಹಿಡಿಯುವ ಕೆಲಸಕ್ಕಷ್ಟೇ ಸೀಮಿತಗೊಳಿಸಿಕೊಳ್ಳಲಿಲ್ಲ. ನೀರಿನ ಮೇಲೆ ಹಿಡಿತ ಸಾಧಿಸಲು ಮರದ ಕಾಂಡಗಳನ್ನು ಕೊರೆದು ದೋಣಿಗಳನ್ನು ಮಾಡಿಕೊಂಡನು. ಲೋಕದಿಂದ ಬೇಕಾದ್ದನ್ನು ಪಡೆಯಲು ಲೋಕದ ಮೇಲೆ ತನ್ನ ಹಿಡಿತವಿರಿಸಿಕೊಂಡನು. ಅದಕ್ಕಾಗಿ ತನ್ನ ಸಾಮರ್ಥ್ಯವನ್ನು ಪಣಕ್ಕೊಡ್ಡಿದನು. ಸಾಧಿಸಬೇಕಾದ ಗುರಿಗಳಿಗಾಗಿ ಹೊಸ ದಾರಿಗಳನ್ನು ತೆರೆದುಕೊಂಡ; ಒಟ್ಟಾರೆ ವ್ಯಕ್ತಿಯಾಗಿ ತನ್ನ ವ್ಯಕ್ತಿತ್ವ ಸಂಪೂರ್ಣವಾಗುವ ದಾರಿಯಲ್ಲಿ ಸಾಗಿದ. ನಿರ್ವಹಣೆಗಾಗಿ ಆತ ಹೊಸದನ್ನು ಕಟ್ಟಿದ. ವರ್ತಮಾನವನ್ನು ದಾಟಿ ನಾಳೆಗಳಿಗೆ ತೆರೆದುಕೊಂಡ; ಇದಕ್ಕಾಗಿಯೇ ಮೀನುಗಾರಿಕೆ, ಬೇಟೆ ಮುಂತಾದ ಚಟುವಟಿಕೆಗಳು ಪಾವಿತ್ರ್ಯತೆಯನ್ನು ಪಡೆದುಕೊಂಡವು. ಅಲ್ಲಿ ಜಯ ಗಳಿಸಿದಾಗ ಹಬ್ಬ ಉತ್ಸವಗಳನ್ನು ಆಚರಿಸಿದ. ಮಾನವ ಘನತೆಗೆ ಗಂಡಸು ಒಂದು ಚಹರೆಯನ್ನು ನೀಡಿದ.[೫] ಹೀಗೆ ಪ್ರಕೃತಿಯನ್ನು ಮೀರಲು ಸಿದ್ಧನಾದ.

ಅಲೆಮಾರಿ ವೃತ್ತಿಯಿಂದ ಹೊರಬಂದು ಒಂದೆಡೆ ನಿಂತು ಕೃಷಿಗಾಗಿ ಮೊದಲು ಭೂಮಿಯನ್ನು ಬಳಸಲು ಶುರು ಮಾಡಿದ. ಮಹಿಳೆ ಮೊದಮೊದಲು ಕೃಷಿ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರವಹಿಸಿದಳು.

ಆದರೆ ತನ್ನ ಸ್ತ್ರೀ ಸಹಜ ಸ್ವಭಾವಗಳಾದ ಗರ್ಭಧಾರಣೆ, ಹೆರಿಗೆ, ಮಕ್ಕಳ ಪಾಲನೆ–ಪೋಷಣೆಯ ಸಂದರ್ಭಗಳಲ್ಲಿ ಗಂಡಸಿನಂತೆ ದುಡಿಯುವುದು ಕಷ್ಟಸಾಧ್ಯವಾಯಿತು. ಮಕ್ಕಳನ್ನು ಹೆರುವುದರಲ್ಲಿ ನಿಯಂತ್ರಣವಿಲ್ಲದಿರುವುದರಿಂದ ಸಂತಾನೋತ್ಪತ್ತಿ ಮಿತಿಮೀರುತ್ತ ಬಂತು. ತಿನ್ನುವ ಬಾಯಿಗಳು ಜಾಸ್ತಿ ಆದ ಹಾಗೆ ಕೃಷಿ ಚಟುವಟಿಕೆಗಳು ವಿಸ್ತಾರವಾಗತೊಡಗಿದವು. ಆಗ ಗಂಡಸು ಕಾಡು ಕಡಿದು ವ್ಯವಸಾಯಕ್ಕೆ ಹೆಚ್ಚು ಭೂಮಿಯನ್ನು ಬಳಸತೊಡಗಿದ. ತನಗಿಂತ ದುರ್ಬಲರಾದ ಗಂಡಸರನ್ನು ಗುಲಾಮರನ್ನಾಗಿ ಮಾಡಿಕೊಂಡ. ಆ ಮೂಲಕ ಹೆಚ್ಚು ಹೆಚ್ಚು ಉತ್ಪಾದನೆಯಲ್ಲಿ ತೊಡಗಿದ. ಹಾಗೆಯೇ ತನ್ನ ಸಾಮರ್ಥ್ಯವನ್ನು ಕಂಡುಕೊಂಡ ತನ್ನ ಕೈಗಳಿಗೂ ಸಿದ್ಧಗೊಂಡ ವಸ್ತುವಿಗೂ ಕಾರ್ಯಕಾರಣ ಸಂಬಂಧವಿರುವುದನ್ನು ಅರಿತ ನೆಟ್ಟ ಬೀಜ ಮೊಳಕೆಯೊಡೆಯಬಹುದು ಅಥವಾ ಹಾಳಾಗಬಹುದು. ಆದರೆ ಲೋಹದ ವರ್ತನೆಯಲ್ಲಿ ಇಂತಹ ಏರುಪೇರುಗಳಿಲ್ಲ. ಕಾಯಿಸಿ ಬಡಿದಾಗ ತಂತ್ರಜ್ಞಾನದ ಬಳಕೆಗೆ ಬಗ್ಗಿದಾಗ ಅದು ಯಾವಾಗಲೂ ಒಂದೇ ರೀತಿಯಲ್ಲಿ ವರ್ತಿಸುತ್ತಿತ್ತು. ಲೋಹದ ಜಗತ್ತಿನ ತಿಳಿವಿನಲ್ಲಿ ಗೊಂದಲಗಳಿರಲಿಲ್ಲ. ತರ್ಕಬದ್ಧ ಆಲೋಚನೆ, ಚಿಂತನೆ ಮುಂತಾದವು ಮೈತಳೆಯತೊಡಗಿದವು. ವಿಶ್ವದ ಕಲ್ಪನೆಯೇ ಬದಲಾಯಿತು. ಹೆಂಗಸಿನ ಧರ್ಮವು ಕೃಷಿ ಜಗತ್ತಿಗೆ ಬದ್ಧವಾಯಿತು. ಅಲ್ಲಿ ಎಲ್ಲವೂ ಕಾಲಚಕ್ರಬದ್ಧ. ಅಡೆತಡೆಗಳಿಗೆ, ಆಕಸ್ಮಿಕಗಳಿಗೆ, ಕಾಯುವಿಕೆಗೆ, ರಹಸ್ಯಗಳಿಗೆ ಆ ಜಗತ್ತು ಪಕ್ಕಾಗಿತ್ತು. ಕುಶಲಕರ್ಮಿ ಗಂಡಸಿನ ಜಗತ್ತಿನಲ್ಲಿ ಕಾಲ–ದೇಶಗಳನ್ನು, ಅವುಗಳ ಪರಿಣಾಮಗಳನ್ನು, ಗುರಿಗಳನ್ನು, ಕ್ರಿಯೆಗಳನ್ನು, ಚಿಂತನೆಗಳನ್ನು ನಿಯಂತ್ರಿಸಬಹುದಾಗಿತ್ತು. ಮತ್ತೆ ಆತ ನೆಲದೊಡನೆ ಸಂಪರ್ಕ ಪಡೆದಾಗಲೂ ಈ ಕುಶಲಕರ್ಮಿ ಸಾಧ್ಯತೆಗಳನ್ನೇ ಅಲ್ಲಿಯೂ ಬಳಸುತ್ತಾನೆ. ನೆಲದ ಫಲವತ್ತತೆಯನ್ನು ಬದಲಿಸಲು ಸಾಧ್ಯವೆಂದು ತಿಳಿದ. ಬೀಜಗಳನ್ನು ಹೇಗೆ ಉಪಚರಿಸಿದರೆ ಫಲ ಹೆಚ್ಚಾಗುವುದೆಂದು ತಿಳಿದ. ಬೆಳೆ ಹೇಗೆ ಬರಬೇಕೆಂಬುದನ್ನು ತಾನೇ ನಿಯಂತ್ರಿಸಬಲ್ಲವನಾದ. ಕಾಲುವೆಗಳನ್ನಗೆದು ನೆಲಕ್ಕೆ ನೀರು ಹರಿಸಿ ಬೇಡವಾದಾಗ ನೀರು ಬಸಿದ; ರಸ್ತೆಗಳನ್ನು ನಿರ್ಮಿಸಿದ, ದೇವಾಲಯಗಳನ್ನು ಕಟ್ಟಿದ, ಹೊಸ ಜಗತ್ತನ್ನೇ ಕಂಡರಿಸಿದ.[೬] ಹೀಗೆ ಗಂಡಸು ತನ್ನ ಸೃಜನಶೀಲ ಗುಣದಿಂದ ಹೊಸ ಸಾಧ್ಯತೆಗಳನ್ನೆಲ್ಲಾ ಶೋಧಿಸಬೇಕೆಂದುಕೊಂಡ. ದುಡಿಯುವವರ ಪಡೆ ಕಟ್ಟಿಕೊಂಡ, ತನ್ನ ಜೊತೆಯ ಗಂಡಸರನ್ನು ಗುಲಾಮರನ್ನಾಗಿ ಮಾಡಿಕೊಂಡ, ಹೆಂಗಸಿನ ದುಡಿಮೆಯ ಫಲಕ್ಕಿಂತ ಗುಲಾಮರ ದುಡಿಮೆ ಹೆಚ್ಚು ಆದಾಯ ತರುವಂಥದಾದ್ದರಿಂದ ಬುಡಕಟ್ಟಿನಲ್ಲಿ ಹೆಂಗಸಿಗಿದ್ದ ಆರ್ಥಿಕ ಪಾತ್ರವು ಅವಳ ಕೈತಪ್ಪಿಹೋಯಿತು. ಗುಲಾಮರೊಡನೆ ಯಜಮಾನನಾಗಿ ಗಂಡಸು ತನ್ನ ಹೊಸ ಸಾಧ್ಯತೆಯನ್ನು ಕಂಡುಕೊಂಡ. ಅದು ಹೆಂಗಸಿನ ಮೇಲೆ ಅವನಿಗಿದ್ದ ಅಧಿಕಾರಕ್ಕಿಂತ ಮಿಗಿಲಾದುದೆಂದು ಅವನಿಗೆ ಅರಿವಾಯಿತು. ಗಂಡಸಿಗೆ ಹೆಣ್ಣಿನ ಫಲವಂತಿಕೆಯ ಕಾರಣವಾಗಿ ಅವಳ ಬಗ್ಗೆ ಭಯ ಗೌರವಗಳು ಇದ್ದವು. 'ಅನ್ಯ'ಳಾಗಿದ್ದರಿಂದ ಅನ್ಯದ ತಲ್ಲಣಗೊಳಿಸುವ ಚಹರೆಗಳನ್ನು ಅವಳು ಹೊಂದಿದ್ದಳು. ಹೀಗಾಗಿ ಹೆಣ್ಣು ಗಂಡಸನ್ನು ತನ್ನ ಹಿಡಿತದಲ್ಲಿರಿಸಿಕೊಂಡಿದ್ದಳು. ಆದರೆ ಅದೇ ವೇಳೆಯಲ್ಲಿ ತಾನೂ ಆತನನ್ನು ಅವಲಂಬಿಸಿದ್ದಳು. ಒಡೆಯ ಗುಲಾಮರ ನಡುವಣ ಈ ಪರಸ್ಪರಾವಲಂಬನೆಯ ಸಂಬಂಧ ಅವಳಿಗೆ ಒಂದು ಬಗೆಯ ನಿರಾಳತೆಯನ್ನು ತಂದಿತ್ತು. ಇದರಿಂದಾಗಿಯೇ ಬಿಡುಗಡೆಯ ಭಾವವನ್ನು ಅವಳು ಹೊಂದಿದ್ದಳು. ಆದರೆ ಗುಲಾಮರಿಗೆ ಯಾವ ಬಗೆಯ ನಿಷೇಧಗಳೂ ಇರಲಿಲ್ಲ. ಅವರೆಲ್ಲಾ ಆಳುಗಳಾಗಿದ್ದರೂ ಗಂಡಸರೇ. ಕೆಳದರ್ಜೆಯಲ್ಲಿದ್ದರೂ ಒಡೆಯನಿಗಿಂತ ಭಿನ್ನರಲ್ಲ.

ಯಜಮಾನ ಮತ್ತು ಗುಲಾಮ ಇವರ ನಡುವಣ ಸಂಬಂಧ ವಿಸ್ಫೋಟದ ಹಂತಕ್ಕೆ ಬರಲು ಹಲವಾರು ಶತಮಾನಗಳು ಬೇಕಾದವು. ವ್ಯವಸ್ಥಿತ ಪಿತೃಪ್ರಧಾನ ಸಮಾಜದಲ್ಲಿ ಗುಲಾಮ ಎಂದರೆ, ಮನುಷ್ಯ ಮುಖದ ದುಡಿಯುವ ಪ್ರಾಣಿ. ಯಜಮಾನ ಕ್ರೂರ ಅಧಿಕಾರ ಪ್ರದರ್ಶಿಸುವ ಮೂಲಕವೇ ತನ್ನ ಹೆಮ್ಮೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದನು. ಈ ಹೆಮ್ಮೆಯ ಹೆಚ್ಚಳಕ್ಕಾಗಿ ಹೆಂಗಸನ್ನು ಗುರಿ ಮಾಡಿಕೊಂಡ. ಅವಳ ಮೇಲಿನ ಹಿಡಿತ ಹೆಚ್ಚಿದಷ್ಟೂ ಆತ ಬಲಶಾಲಿಯಾಗುತ್ತಿದ್ದ; ಅವಳು ಕುಗ್ಗುತ್ತಿದ್ದಳು.[೭]

ಹೆಣ್ಣು ಮೊದಲು ಮಾನವ ರೂಪಧರಿಸಿ ಮಗಳಾಗಿ ಹುಟ್ಟುವಳು. ಗಂಡನಿಗೆ ಹೆಂಡತಿಯಾಗಿ, ಮಗುವಿಗೆ ತಾಯಿಯಾಗಿ, ಅತ್ತೆಗೆ ಸೊಸೆಯಾಗಿ ವಿವಿಧ ಪಾತ್ರಗಳನ್ನು ನಿರ್ವಹಿಸುವಳು. ಇವು ಗರತಿಯ ಅವತಾರದಲ್ಲಿನ ಮುಖ್ಯವಾದ ಸ್ವರೂಪಗಳು. ಇನ್ನು ಆಕೆಯ ಇತರ ಪಾತ್ರಗಳು ಬೇರೆಯೇ ಇವೆ. ತಂದೆ-ತಾಯಿಗಳಿಗೆ ಮಗಳಾಗಿರುವಂತೆ, ಅಣ್ಣನಿಗೆ ತಂಗಿಯಾಗಿಯೂ, ತಮ್ಮನಿಗೆ ಅಕ್ಕನಾಗಿಯೂ ಪಾತ್ರವಹಿಸುವಳು. ಅಜ್ಜ-ಅಜ್ಜಿಯರಿಗೂ ಮೊಮ್ಮಗಳಾಗುವಳು. ತಂದೆಯ ಸೋದರಿಗೆ ಸೋದರ ಸೊಸೆಯಾಗುವಳು, ಅತ್ತಿಗೆಗೆ ನಾದಿನಿಯಾಗುವಳು. ಹೀಗೆ ತವರುಮನೆಯಲ್ಲಿ ತಳೆಯುವ ಪಾತ್ರಗಳಲ್ಲದೆ, ಗಂಡನ ಮನೆಯಲ್ಲಿ ವಿವಿಧ ಜವಾಬ್ದಾರಿಯನ್ನು ನಿರ್ವಹಿಸಿರುವುದು ಎಲ್ಲರಿಗೂ ಗೊತ್ತಿರುವ ವಿಷಯ, ಅತ್ತೆ ಮಾವಂದಿರಿಗೆ ಸೊಸೆಯಾದರೆ, ಭಾವ-ಮೈದುನರಿಗೆ ಅತ್ತಿಗೆಗೆ ನಾದಿನಿಯಾಗುವಳು. ಹಾಗೆಯೇ ಹೆಣ್ಣುಮಕ್ಕಳಿಗೆ ಗೆಳತಿಯಾಗುವಳು. ಪೂರ್ವ ವಯಸ್ಸಿನಲ್ಲಿ ಅನಿವಾರ್ಯವಾಗಿ ಕುಮಾರಿಯೆನಿಸುವಳು. ಒಮ್ಮೊಮ್ಮೆ ವಿಧವೆಯು ಆಗುವಳು. ಹೆಣ್ಣಿಗೆ ವಿವಿಧ ಸ್ವರೂಪಗಳಿರುವಂತೆ ಗಂಡಿಗೂ ವಿವಿಧ ಸ್ವರೂಪವಿರುವುದರಿಂದ ಹೆಣ್ಣಿನ ಸ್ವರೂಪಕ್ಕೆ ವೈಶಿಷ್ಟ್ಯವೇನೆಂದು ಕೇಳಬಹುದು. 'ಹೆಣ್ಣಿನಿಂದ ಬರಿ ಹೆಣ್ಣೆ ಹುಟ್ಟದೆ ಗಂಡು ಸಹ ಹುಟ್ಟುವುದು.'[೮] ಜನಪದ ಮಹಿಳೆಯ ಬಾಳಿನ ಸಾರ್ಥಕತೆಯ ವೈವಿಧ್ಯತೆಯನ್ನು ಈ ರೂಪದಲ್ಲಿ ಕಾಣಬಹುದು. ಇಂಥ ಅಪೂರ್ವ ಶಕ್ತಿಯನ್ನು ಪಡೆದಿರುವ ಹೆಣ್ಣು ಹೇಗೆ ತನ್ನ ಕೆಲಸವನ್ನು ಅರ್ಥ ಮಾಡಿಕೊಂಡಳು ಎಂಬುದನ್ನು ಪುರಾಣ ಕಾಲದಿಂದ ಆಧುನಿಕ ಸ್ತ್ರೀಯವರೆಗೂ ಕಾಣಬಹುದು. ವಿದ್ಯಾವಂತೆ ನಾಗರೀಕ ಹೆಣ್ಣಿನಲ್ಲಿನ ಗುಣಗಳನ್ನು ಪರಿಶೀಲಿಸಿದಾಗ ಅವಿದ್ಯಾವಂತ ಮುಗ್ಧೆಯಾದ ಜನಪದ ಹೆಣ್ಣಿನಲ್ಲಿಯೂ ಅನೇಕ ಅಂಶಗಳನ್ನು ಕಾಣಬಹುದು.

ಜನಪದ ಮಹಿಳೆ ಜನಾಂಗಕ್ಕೆ ನೀಡಿದ ಅಪ್ರತಿಮವಾದ ದಾನ ಒಂದೇ ಎರಡೇ! ಎಣಿಸಿ ನೋಡಿದರೆ ಸಾವಿರಾರು. ನಮ್ಮ ಸಂಸ್ಕೃತಿಯ ರಚನೆಗೆ ಅನೇಕ ಮಹನೀಯರನ್ನು-ಮಹಿಳೆಯರನ್ನು ಕೊಟ್ಟಿದ್ದಾಳೆ. ಲೋಕ ಕಲ್ಯಾಣಕ್ಕೂ, ಧರ್ಮ ಸಂರಕ್ಷಣೆಗೂ, ರಾಜ್ಯಕ್ರಾಂತಿಗೂ ಕಾರಣರಾದವರು ಪುರುಷರೇ ಬಹುಮಂದಿ ಎಂಬುದನ್ನು ಒಪ್ಪಿಕೊಳ್ಳಲೇಬೇಕಾದರೂ ಅವರನ್ನು ಹೆತ್ತುಕೊಟ್ಟವರು, ಒತ್ತೆಯಾಗಿಟ್ಟುಕೊಟ್ಟವರು, ಮಾರಿ ಕೊಟ್ಟವರು, ಅವರ ತಾಯಿ ಅಕ್ಕ ತಂಗಿ ಹೆಂಡತಿಯರೇ. ಹೀಗಾಗಿ ಅವರು ಮಾಡಿರುವ ಸೇವೆ ಅಪಾರ ವಾದುದು. ಅಂದಿನಿಂದ ಇಂದಿನವರೆಗೂ ಕುಟುಂಬದ ಸಮಾಜದ ಅವಿಭಾಜ್ಯ ಅಂಗವಾಗಿ ಮಹಿಳೆ ಬಂದಿದ್ದಾಳೆ. ಆದ್ದರಿಂದಲೇ ಹೆಣ್ಣನ್ನು ಭೂಮಿಗೆ ಹೋಲಿಸುತ್ತಾರೆ. ಹೆಣ್ಣು ಭೂಮಿಯಂತೆ ಎನ್ನುತ್ತಾರೆ. ಅದು ಹೇಗೆಂದರೆ ಸರ್ವವನ್ನು ಒಳಗೊಳ್ಳುವುದೇ ಭೂಮಿಯ ಲಕ್ಷಣವಾಗಿರುವಂತೆ, ಸರ್ವವನ್ನು ಒಳಗೊಂಡು ಬಾಳುವುದೇ ಜನಪದ ಮಹಿಳೆಯ ಕುರುಹಾಗಿದೆ. ಹೀಗೆ ಮಾನವ ಜೀವನದಲ್ಲಿ 'ಹೆಣ್ಣು' ಕೇಂದ್ರಬಿಂದು

ವಾಗಿದ್ದಾಳೆ. ಅವಳಿಂದಲೇ ಸಂಸಾರ, ಸಂತಾನ, ಸಮೃದ್ಧಿ, ನೋವು, ನಲಿವು, ಒಲವು ಆಗಿದ್ದರೂ ಅವಳು ಒಂದಲ್ಲ ಒಂದು ರೀತಿಯಲ್ಲಿ ತೊಂದರೆಗೆ ಶೋಷಣೆಗೆ ಗುರಿಯಾಗಿದ್ದಾಳೆ.

ಜನಪದ ಕಥೆಗಳಲ್ಲಿ ಬರುವ ಮಹಿಳೆಯ ತ್ಯಾಗ, ಬಲಿದಾನ, ಪಾತಿವ್ರತ್ಯ, ಬಂಜೆತನ, ವೈಧವ್ಯ ಹೀಗೆ ಹಲವು ನೆಲೆಗಳಲ್ಲಿ ಅವಳ ವ್ಯಕ್ತಿತ್ವವನ್ನು ಗುರುತಿಸಬಹುದು. ಅದಲ್ಲದೆ ಮಾನವ ಸಮಾಜದ ಕಾಮ, ಕ್ರೋಧಗಳಿಗೆ ಬಲಿಯಾಗಿದ್ದಾಳೆ. ಅಪಮಾನ, ಅನುಮಾನಕ್ಕೆ ಒಳಗಾಗಿದ್ದಾಳೆ. ಹೀಗೆ ಒಂದೇ ಎರಡೇ! ಹತ್ತಾರು ಮುಖಗಳ ಪರಿಚಯವನ್ನು ಕಥೆಗಳಲ್ಲಿ ಕಾಣಬಹುದು. ಈ ಜನಪದ ಮಹಿಳೆಯು ಅಷ್ಟೆಲ್ಲಾ ನೋವನ್ನು ಅನುಭವಿಸಿದರೂ ಜೀವನವನ್ನು ತಿರಸ್ಕರಿಸದೆ ಕಷ್ಟ-ನಷ್ಟಗಳಿಗೆ ತನ್ನ ಹಣೆಬರಹ, ವಿಧಿ ಎಂದು ಹೇಳಿ ತನ್ನನ್ನು ತಾನು ಸಮಾಧಾನಪಡಿಸಿಕೊಂಡಿರುವುದನ್ನು ಕಾಣಬಹುದು.

ಹೆಣ್ಣು-ಗಂಡಿನ ವಿವಿಧ ಮುಖಗಳ ಪರಿಚಯವನ್ನು ಜನಪದ ಕಥೆಗಳಲ್ಲಿ ಗುರುತಿಸಬಹುದು. ಈ ಕ್ಷೇತ್ರದಲ್ಲಿ ಮಹಿಳೆ ಯಾವ ರೀತಿಯಿಂದಲೂ ಪುರುಷನಿಗೆ ಹಿಂದೆ ಬಿದ್ದಿಲ್ಲ. ಶ್ರಮಜೀವಿಯಾದ ಜನಪದ ಮಹಿಳೆ ಕಾಯಕಕ್ಕೆ ಹೆಚ್ಚು ಮಹತ್ವ ಕೊಟ್ಟವಳು. ಬೆಳಗಿನಿಂದ ಮಲಗುವವರೆಗೂ ತನ್ನದೇಯಾದ ಬದುಕಿನಲ್ಲಿ ದುಡಿದವಳು. ಜನಪದ ಮಹಿಳೆ ನಾಗರಿಕ ಮಹಿಳೆಯ ಹಾಗೆ ವಿದ್ಯಾಭ್ಯಾಸ ಕಲಿತವಳಲ್ಲ. ಜೀವನವೇ ಕಲಿಸಿದ ಬಾಳಿನ ವಿದ್ಯಾಭ್ಯಾಸವನ್ನು ಚೆನ್ನಾಗಿ ಅರಿತವಳು. ಅದರಲ್ಲಿ ತೇರ್ಗಡೆಯಾಗಲಿಕ್ಕೆ ಬೇಕಾದ ಸಮಾಧಾನ, ಸಂಯಮ, ಸ್ಥಿತಿಗತಿಗಳು ಅವಳಿಗೆ ಗೊತ್ತಿತ್ತು. ಬಾಳಿನ ಸಿಹಿ-ಕಹಿಗಳನ್ನು ಸಮವಾಗಿ ಸ್ವೀಕರಿಸಿ ಜೀವನದಲ್ಲಿ ಬರುವ ಎಲ್ಲಾ ಸವಾಲುಗಳಿಗೂ-ಸಮಸ್ಯೆಗಳಿಗೂ ಮುಗ್ಧತೆಯಿಂದ, ಬುದ್ಧಿವಂತಿಕೆಯಿಂದ ತನ್ನನ್ನು ತಾನೇ ಅರ್ಪಿಸಿಕೊಂಡಿದ್ದಾಳೆ.

**ಅರ್ಥ**

ಕನ್ನಡದಲ್ಲಿ ಹೆಣ್ಣು, ಹೆಂಗಸು ಎಂಬ ಎರಡು ಶಬ್ದಗಳಿಗೂ ಒಂದೇ ಮೂಲವಾದರೂ ಅರ್ಥದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಹೆಣ್ಣು ಎಂಬ ಪದ ಸ್ವಲ್ಪ ಚಿಕ್ಕ ವಯಸ್ಸಿನವರಿಗೂ, ಹೆಂಗಸು ಎಂಬ ಪದ ದೊಡ್ಡ ವಯಸ್ಸಿನವರಿಗೂ ಸಾಮಾನ್ಯವಾಗಿ ಅನ್ವಯವಾಗುತ್ತದೆ. ಹಳೆಗನ್ನಡದ 'ಪೆಣ್' ಶಬ್ದದಿಂದ 'ಹೆಣ್ಣು' ಎಂಬ ಪದ ಬಂದಿದೆ. ಹೆಂಗಸು ಎಂಬ ಶಬ್ದವು ಪೆಣ್+ಕೂಸು= ಪೆಣ್ಗೂಸು, ಹೆಣ್+ಕೂಸು=ಹೆಂಗೂಸು> ಹೆಂಗುಸು>ಹೆಂಗಸು ಆಗಿದೆ. ಚಿರಿಯ ಕೂಸು ಶಬ್ದಕ್ಕೂ ಹೆಣ್ಣು ಮಗು ಎಂಬ ಅರ್ಥವೇ ಹೆಚ್ಚಾಗಿದೆ. ಸಂಸ್ಕೃತದಲ್ಲಿ ಹೆಂಗಸು ಎಂಬ ಅರ್ಥದ ಅನೇಕ ಪದಗಳಿವೆ. ಮಹಿಳಾ, ಸ್ತ್ರೀ, ಯೋಷಿತ್, ಅಲಲಾಯೇಷು, ನಾರೀ, ಸೀಮಂತಿನೀ, ವಧು, ವನಿತಾ, ಪ್ರಮದಾ ಇತ್ಯಾದಿ.[೯] ಈ ಶಬ್ದಗಳಿಗೆ ಶಬ್ದದ ವ್ಯುತ್ಪತ್ತಿಯನ್ನು ಅನುಸರಿಸಿ ಬೇರೆ ಬೇರೆ ಅರ್ಥಗಳಿವೆ. ಇವಳಲ್ಲಿ ಮಕ್ಕಳಾಗುತ್ತವೆ ಎಂಬ ಅರ್ಥ 'ಸ್ತ್ರೀ' ಶಬ್ದಕ್ಕೆ ಇದೆ ಎಂದು ವಿದ್ವಾಂಸರು ವಿವರಿಸುತ್ತಾರೆ. 'ಮಹಿಳೆ (ಮಹಿಳಾ)' ಶಬ್ದವು ಮಕ್ಕಳನ್ನು ಹೆತ್ತು ಉತ್ಸಾಹವನ್ನು, ಸಂತೋಷವನ್ನು ತರುತ್ತಾಳೆ ಎಂಬ ಅರ್ಥವನ್ನು ಕೊಡುತ್ತದೆ. ಗಂಡಸಿನ ಬಲದಷ್ಟು ಬಲ ಇವಳಿಗೆ ಇಲ್ಲ ಎಂದು 'ಅಬಲಾ' ಶಬ್ದ ತಿಳಿಸುತ್ತದೆ.[೧೦] ಹೆಣ್ಣಿನ ಬಗ್ಗೆ ಹಲವು ನುಡಿಗಟ್ಟುಗಳು ಈ ರೀತಿ ಇವೆ.

೧. ಹೆಣ್ಣು ಇಟ್ಟ ಬಂಗಾರ, ಗೋಡೆಗೆ ಹಚ್ಚಿದ ಸುಣ್ಣ, ಹೆಣ್ಣಿನ ನೆಲೆ, ಕುದುರೆಯ ನೆಲೆ ಯಾರಿಗೂ ಗೊತ್ತಿಲ್ಲ.

೨. ಹೆಣ್ಣು ದೂರದಿಂದ ತರಬೇಕು, ದನ ಹತ್ತಿರದಿಂದ ತರಬೇಕು.

೩. ಹೆಣ್ಣು ಬೊಮ್ಮಣ್ಣನಿಗೆ ಅಪರಾಧ ತಿಮ್ಮಣ್ಣನಿಗೆ?

೪. ಹೆಣ್ಣು ಹಡೆದವನ ಮನೆ ತಣ್ಣಗೆ, ಗಂಡು ಹಡೆದವನ ಮನೆ ನುಣ್ಣಗೆ.

೫. ಹೆಣ್ಣು ಕೊಟ್ಟೆಯೋ? ಬೆನ್ನ ಕೊಟ್ಟೆಯೋ, ಹೆಣ್ಣು ತಂದಿಯೋ ಮಣ್ಣು ತಂದಿಯೋ.

೬. ಹೆಣ್ಣು ಒಳ್ಳೇದೆ ಸರಿ, ಕಣ್ಣು ಮಾತ್ರ ಕಾಣುವುದಿಲ್ಲ.

೭. ಹೆಣ್ಣು ಹೆಚ್ಚು ತಿಳಿಯಬೇಕು, ಗಂಡು ತೆತ್ತು ತಿಳಿಯಬೇಕು.

೮. ಹೆಣ್ಣಾದರೇನು? ಮಣ್ಣಾದರೇನು? ಪುಣ್ಯ ವಿನಃ ಸಿಕ್ಕದು.

೯. ಹೆಣ್ಣಿದ್ದು ಮಣ್ಣು ಆಯಿತು ಹೆತ್ತದ್ದು ಹೆಣ್ಣು ಆಯಿತು.

೧೦. ಪುಣ್ಯ ಮಾಡದೆ ಕೆಟ್ಟೆ ಹೆಣ್ಣು ಹುಟ್ಟಿ ಕೆಟ್ಟೆ.

೧೧. ಪುಣ್ಯ ಎಲ್ಲಿದೆ ಕಣ್ಣು ಕಿತ್ತುಕೊಂಡರೆ ಹೆಣ್ಣು ಸಿಕ್ಕೀತೆ?

೧೨. ಬಡವಗೆ ಯಾಕೆ ಸಿರಿವಂತನ ಹೆಣ್ಣು.[೧೧]

ಕೊಟ್ಟ ಹೆಣ್ಣು ಕುಲಕ್ಕೆ ಹೊರಗ, ಮೀನು ಹೆಜ್ಜೆಯನ್ನಾದರೂ ಅರಿಯಬಹುದು, ಹೆಣ್ಣಿನ ಮನಸ್ಸನ್ನು ಅರಿಯಲಾಗದು. ಹೆಣ್ಣಿನ ಬುದ್ಧಿ ಮೊಣಕಾಲ ಕೆಳಗೆ, 'ಕಿಂಕ್ರೂರಂ ಸ್ತ್ರೀಹೃದಯಂ' ಮೊದಲಾದ ಹೇಳಿಕೆಗಳು ನುಡಿಗಟ್ಟುಗಳ ರೀತಿಯಲ್ಲಿ ಹೆಚ್ಚು ಪ್ರಚಲಿತದಲ್ಲಿವೆ. ಈ ರೀತಿಯ ನುಡಿಗಟ್ಟುಗಳಲ್ಲಿ ಧನಾತ್ಮಕ ಹಾಗೂ ಋಣಾತ್ಮಕ ಅಂಶಗಳೂ ಸೇರಿವೆ. ಹೆಣ್ಣಿನ ಅಗಾಧತೆಯನ್ನು ಸಹಿಸದ ಗಂಡು ಕಟ್ಟಿದ ಗಾದೆಗಳೇ ಹೆಚ್ಚಾಗಿವೆ. ಮೃದುತ್ವ, ಕೃಶತ್ವ ಮತ್ತು ವ್ಯಾಕುಲತೆಗಳು ಸ್ತ್ರೀಗುಣಗಳೆನ್ನುತ್ತಾರೆ ಶಾಸ್ತ್ರಜ್ಞರು.

ಕೆಲವು ಗುಣಗಳನ್ನು ಹೊಂದಿಲ್ಲದೆ ಇರುವುದರಿಂದ 'ಸ್ತ್ರೀ'ಯಾಗಿದ್ದಾಳೆ. ಸ್ತ್ರೀ ಸ್ವಭಾವವು ಕೆಲವು ಪ್ರಕೃತಿ ಕೊರತೆಗಳಿಂದ ಪೀಡಿತವಾಗಿದೆ ಎಂದೇ ನಾವು ಪರಿಗಣಿಸಬೇಕು ಎಂದು ಅರಿಸ್ಟಾಟಲ್ ಹೇಳಿದ್ದಾನೆ. ಹೆಂಗಸನ್ನು 'ಅಪರಿಪೂರ್ಣ ಗಂಡಸು' ಒಂದು 'ಆಕಸ್ಮಿಕ ಜೀವಿ' ಎಂದು ಸಂತ ಥಾಮಸ್ ವಿವರಿಸುತ್ತಾನೆ. 'ಈವ್, ಆಡಮ್‌ನ ಹೆಚ್ಚುವರಿ ಎಲುಬಿನಿಂದ ಹುಟ್ಟಿ ಬಂದವಳು' ಎಂದು ಬೈಬಲ್‌ನ ಮಿಷೆಲ್ ಹೇಳುತ್ತಾನೆ. ಗಂಡಸಿನ ದೇಹ ತನ್ನಷ್ಟಕ್ಕೆ ತಾನು ಅರ್ಥಪೂರ್ಣವಾದುದು. ಅದಕ್ಕೆ ಹೆಂಗಸಿನೊಡನೆ ಯಾವ ಸಂಬಂಧವೂ ಇಲ್ಲ. ಆದರೆ ಹೆಂಗಸಿನ ದೇಹಕ್ಕೆ ಹೀಗೆ ಈ ಗುಣಗಳಿಲ್ಲದ ಕೊರತೆ ಇದೆ... ಗಂಡಸು ಹೆಂಗಸಿಲ್ಲದೆಯೂ ತಾನೇ ತನ್ನ ಬಗ್ಗೆ ಯೋಚಿಸಲಾರಳು' ಎಂದು ಬೆಂಡ ತನ್ನ ರ್‍ಯಾಪೋರ್ಟ್‌ಡಿ ಯುರೀಲ್'ನಲ್ಲಿ ಹೇಳಿದ್ದಾನೆ. ಈ ಹೇಳಿಕೆಗಳನ್ನು ಗಮನಿಸಿದರೆ ಹೆಚ್ಚು ಕಡಿಮೆ ಎಲ್ಲಾ ದೇಶದ ಹಾಗೂ ಭಾಷೆಗಳಲ್ಲೂ ಹೆಣ್ಣನ್ನು

ನೋಡಿರುವ ದೃಷ್ಟಿಕೋನ ಒಂದೇ ರೀತಿಯಿದೆ. ಅದೆಲ್ಲವೂ ಪುರುಷ ಪ್ರಧಾನ ನೆಲೆಯಿಂದಲೇ ಮೂಡಿಬಂದಂತೆ ಕಾಣಿಸುತ್ತದೆ. ಕ್ರಮಬದ್ಧ ವಿವಾಹದ ಮೂಲಕ ಹೆಣ್ಣು ತನ್ನ ಗಂಡನ ಗುಣಗಳನ್ನು ಪಡೆದುಕೊಳ್ಳುತ್ತಾಳೆ. ಹೇಗೆಂದರೆ ಸಾಗರವನ್ನು ಸೇರಿ ನದಿ ತನ್ನ ಮೂಲ ಲಕ್ಷಣಗಳನ್ನು ಕಳೆದುಕೊಳ್ಳುವಂತೆ, ಸಾವಿನ ನಂತರ ಅವಳಿಗೆ ಆಗ ಸ್ವರ್ಗಪ್ರವೇಶ ಸಿಗುತ್ತದೆ ಎಂದು ಮನುಸ್ಮೃತಿ ಹೇಳುತ್ತದೆ. ಹುಡುಗಿಯಾಗಿದ್ದಾಗ ಅವಳ ಮೇಲೆ ತಂದೆಯದ್ದೇ ಅಧಿಕಾರ. ಮದುವೆಯಲ್ಲಿ ಆತ ಮಗಳನ್ನು ಗಂಡಿಗೆ ಇಡಿಯಾಗಿ ವಹಿಸಿಕೊಡುತ್ತಿದ್ದ. ಹೆಂಡತಿ ದುಡಿಯುವ ಸೇವಕಿ, ಗುಲಾಮಳು; ಅಂತಹ ಎಷ್ಟು ಮಂದಿಯನ್ನಾದರೂ ಆತ ಹೊಂದಬಲ್ಲ. ಈ ಸಂಖ್ಯೆ ಆರ್ಥಿಕ ಕಾರಣಗಳಿಂದಾಗಿ ಮಾತ್ರ ಮಿತಗೊಳಿಸುತ್ತಿತ್ತು. ತನ್ನ ಇಚ್ಛೆ ಬಂದಂತೆ ಅವಳನ್ನು ದೂರ ಮಾಡಬಹುದಿತ್ತು. ಸಮಾಜ ಅವಳಿಗೆ ಯಾವ ರಕ್ಷಣೆಯನ್ನು ಒದಗಿಸಿರಲಿಲ್ಲ. ಆದರೆ ಹೆಣ್ಣು ಮಾತ್ರ ತನ್ನ ಶೀಲವನ್ನು ಕಟ್ಟುನಿಟ್ಟಾಗಿ ಕಾಯ್ದುಕೊಳ್ಳಬೇಕಿತ್ತು. ಹಲವು ನಿಷೇಧಗಳಿದ್ದರೂ, ಮಾತೃವಂಶೀಯ ಕುಟುಂಬಗಳಲ್ಲಿ ಶೀಲವೆಂಬುದು ಅಷ್ಟು ಮುಖ್ಯ ಸಂಗತಿಯಾಗಿರಲಿಲ್ಲ. ಹಾದರದ ಬಗ್ಗೆ ಕಟುವಾದ ನೋಟವಿರಲಿಲ್ಲ. ಯಾವಾಗ ಹೆಣ್ಣು ಗಂಡಿನ ಆಸ್ತಿಯಾದಳೋ ಅಂದಿನಿಂದ ಅವಳ ಕನ್ಯತ್ವದ ಬಗ್ಗೆ, ನಿಷ್ಠೆಯ ಬಗ್ಗೆ ಒತ್ತು ಬಿತ್ತು. ಅದನ್ನು ಉಲ್ಲಂಘಿಸುವವರು ಭಾರೀ ಬೆಲೆ ತೆರಬೇಕಿತ್ತು. ಹೆಣ್ಣು ಅಪರಿಚಿತನಿಂದ ಮಕ್ಕಳನ್ನು ಪಡೆದರೆ ಅಂಥ ಮಕ್ಕಳಿಗೆ ಆಸ್ತಿಯ ಹಕ್ಕನ್ನು ನೀಡುವ ಮಾತೇ ಇರಲಿಲ್ಲ. ಅಂಥ ಸಂದರ್ಭ ದಲ್ಲಿ ತಪ್ಪು ಮಾಡಿದ ಹೆಂಗಸಿಗೆ ತಲೆದಂಡ ವಿಧಿಸುವ ಹಕ್ಕನ್ನು ಇರಿಸಿಕೊಳ್ಳಲಾಗಿತ್ತು. ಎಲ್ಲಿಯವರೆಗೆ ಖಾಸಗಿ ಆಸ್ತಿ ಇರುವುದೋ ಅಲ್ಲಿಯವರೆಗೆ ವೈವಾಹಿಕ ನಿಷ್ಠೆಯ ಉಲ್ಲಂಘನೆ ಘೋರ ಅಪರಾಧವಾಗಿಯೇ ಇರುತ್ತದೆ. ಈ ಹೊತ್ತಿನವರೆಗೂ ಎಲ್ಲ ಕಾನೂನು ವ್ಯವಸ್ಥೆಗಳೂ ಹಾದರದ ಬಗ್ಗೆ ಗಂಡು ಹೆಣ್ಣುಗಳನ್ನು ತರತಮ ಭಾವದಿಂದಲೇ ನೋಡಿವೆ. ಹಾದರ ಮಾಡುವ ಹೆಣ್ಣು ತನ್ನ ಕುಟುಂಬಕ್ಕೆ ಅನೈತಿಕ ಮಗುವನ್ನು ತರುತ್ತಾಳೆ ಎಂಬುದೇ ಈ ತಾರತಮ್ಯಕ್ಕೆ ಕಾನೂನುಗಳು ನೀಡುವ ಕಾರಣವಾಗಿತ್ತು.[೧೨] ಹೆಣ್ಣಿಗಿರುವ ಸೃಷ್ಟಿ ಕ್ರಿಯೆಯ ಈ ಅದ್ಭುತ ಸಾಮರ್ಥ್ಯವನ್ನು ಕಂಡ ಗಂಡು ಅವಳು ಮೇಲುಗೈ ಸಾಧಿಸಬಹುದೆಂಬ ಕಾರಣ ದಿಂದಲೇ ಅವಳನ್ನು ಮಟ್ಟಹಾಕಲು ಕಾರಣಗಳನ್ನು ಹುಡುಕತೊಡಗಿದನು.

ಕಂಚಿನ ಯುಗದಲ್ಲಿ (ಸುಮಾರು ಕ್ರಿ.ಪೂ. ೨೫೦೦–೨೦೦೦) ಈಜಿಪ್ಟ್, ಆಗ್ನೇಯ ಏಷ್ಯಾ ಭಾಗಗಳಲ್ಲಿನ ಮಾತೃಪುರಾಣಗಳಲ್ಲಿ ಮಾತೆಯು ಆಶಾವಾದಿತ್ವ ಸಂರಕ್ಷಕ ಗುಣಗಳ ಸಂಕೇತ, ಅಲ್ಲಿನ ಪುರುಷ ದೇವತೆಗಳು ಮೊದಲಿಗೆ ಆಕೆಯ ಪುತ್ರರು; ನಂತರ ಪತಿಯ ಸ್ಥಾನಕ್ಕೆ ಏರಿಸಲಾದವರು. ಈ ದೇವಿಯರ ಆರಾಧನೆಯಲ್ಲಿ ಕೂಡ ಪೂಜಾರಿಣಿಯರದೇ ಪ್ರಾಬಲ್ಯವಿತ್ತು. ಮುಂದೆ ಸ್ತ್ರೀಯರ ಕೃಷಿಕ್ಷೇತ್ರವನ್ನು ಗಂಡಸರು ಆಕ್ರಮಿಸತೊಡಗಿದಂತೆ ಗಂಡುದೇವತೆಗಳು ಹೆಣ್ಣುದೇವತೆಗಳ ಮೇಲೆ ಅಧಿಕಾರ ಸ್ಥಾಪಿಸಿಕೊಂಡವು. ಗಂಡಸರು ಪೂಜಾರಿ ಮಾಂತ್ರಿಕರಾಗಿ ಬಲಿಷ್ಠರಾದರು.[೧೩] ಪೂಜಾರಿಯಾಗುವ ಅರ್ಹತೆ ಪಡೆಯಲು ಗಂಡಸು ತನ್ನ ಪೌರುಷವನ್ನೇ ಬಲಿ ಕೊಡಬೇಕಾಗಿತ್ತು. ತನ್ನ ಗಂಡಸುತನವನ್ನು ದೇವಿಗೆ ಶರಣಾಗಿಸಿ, ತನ್ನ ಮೇಲೆ ಹೆಣ್ತನವನ್ನು ಆರೋಪಿಸಿ ಕೊಳ್ಳುವುದರ ಮೂಲಕ ಹೆಣ್ಣಿಗಿದ್ದ ಮಾಂತ್ರಿಕ ಶಕ್ತಿ ತನಗೂ ಬಂತೆಂದು ಆತ ಭಾವಿಸುತ್ತಿದ್ದನು. ಸಿರಿಯಾದ ಅಧಿದೇವಿಯ ಅರ್ಚಕರು, ಇಷ್ತಾರ ದೇವತೆಯ ಪೂಜಾರಿಗಳು ಈ ರೀತಿಯಲ್ಲಿ ಪುರುಷತ್ವ ಬಲಿ ಕೊಟ್ಟು

ಷಂಡರಾಗಿ ಮಾತ್ರ ಆರಾಧನೆಯ ವಿಧ್ಯುಕ್ತ ಕ್ರಿಯೆಗೆ ಅರ್ಹರೆನಿಸುತ್ತಿದ್ದರು. ಸಬಲೆ ದೇವಿಯ ಷಂಡ ಅರ್ಚಕರು ಹೆಣ್ಣಿನಂತೆ ವೇಷ ತೊಟ್ಟು, ಉದ್ದ ಕೂದಲು ಬಿಟ್ಟು, ಸುಗಂಧ ಲೇಪಿಸಿಕೊಂಡು ಧಾರ್ಮಿಕ ವಿಧಿಗಳನ್ನು ಆಚರಿಸುತ್ತಿದ್ದರು. ಸ್ತ್ರೀವೇಷವನ್ನು ತೊಟ್ಟರೆ ಭಾವನಾತ್ಮಕವಾಗಿ ತಾವೂ ಸ್ತ್ರೀಯರಾದಂತೆಯೇ ಎಂಬುದು ಅವರ ಶ್ರದ್ಧೆಯಾಗಿತ್ತು. ಎಲ್ಲಮ್ಮನ ಪಂಥದಲ್ಲಿ ಕೂಡ ಗಂಡು ಪುರುಷತ್ವ ಕಳೆದುಕೊಂಡು ಸ್ತ್ರೀವೇಷ ಹಾಕುತ್ತಾನೆ.[೧೪]

ರಾಹುಲ ಸಾಂಕೃತ್ಯಾಯನರ 'ವೋಲ್ಗಾಗಂಗಾ' ಎಂಬ ಕೃತಿಯಲ್ಲಿಯ ಕಥೆಗಳ ಆಧಾರದ ಮೇಲೆ 'ಸ್ತ್ರೀಯರು ಪೂರ್ವ ಕಾಲದಲ್ಲಿ ಬಲಿಷ್ಠರಾಗಿದ್ದರು, ಅವಳೇ ಕುಟುಂಬದ ನಾಯಕಿಯೆನಿಸಿದ್ದಳು. ಕುಟುಂಬದಲ್ಲಿ ಅವಳದ್ದೇ ಹೆಚ್ಚಿನ ಅಧಿಕಾರವಿತ್ತು. ಸೋದರ, ಪತಿ, ಪುತ್ರರನ್ನು ಉಳ್ಳವರಾಗಿದ್ದಳು ಎನ್ನುತ್ತಾರೆ. ಅಂದರೆ ಕಾಮ ಪಾವಿತ್ರ್ಯ ತಿಳಿಯದ ಕಾಲ ಅದಾಗಿತ್ತು. ಬಹುಪತ್ನಿತ್ವವು ಸಾಮಾನ್ಯ ವಿಷಯವಾಗಿತ್ತು. ಸ್ತ್ರೀ ಪುರುಷರು ಒಂದಾಗಿ ಸಂಪತ್ತು ಕೂಡಿಸುವುದು, ಆಹಾರಕ್ಕಾಗಿ ಅಲೆಯುವ ಸಂಚಾರಿ ಜೀವನ ಅವರದಾಗಿತ್ತು. ಸಾಮಾನ್ಯವಾಗಿ ಆದಿಮಾನವ ವನ್ಯಪಶುಗಳಂತೆಯೇ ಇದ್ದು, ಆ ಕಾಲದ ಸ್ತ್ರೀ ದೈಹಿಕವಾಗಿ ಪುರುಷನಷ್ಟೆ ಬಲಶಾಲಿಯಾಗಿದ್ದಳು. ಅಲ್ಲದೆ ಆಕೆ ಚತುರೆಯು, ಬುದ್ಧಿವಂತೆಯೂ ಆಗಿದ್ದಳೆಂದು ರಾಬರ್ಟ್ ಬ್ರಿ ಪಾಲ್ಸ್ ಎಂಬ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧೫] 'ಕಾಮ ಪಾವಿತ್ರ್ಯ' ಎಂಬ ಪದವೂ ಸಹ ಪುರುಷನ ಸ್ವಾರ್ಥ ಮೂಲದಿಂದ ಬಹುಕಾಲದ ನಂತರ ಬಂದುದಾಗಿದೆ. ಕೇವಲ ಸ್ತ್ರೀ ಮಾತ್ರವೇ ಇದಕ್ಕೆ ಬದ್ಧಳಾಗಿರಬೇಕೆಂಬ ಒತ್ತಾಸೆಯನ್ನು ಮಾತ್ರ ಏಕಮುಖವಾಗಿ ವಿಧಿಸಿರುವಂತಹುದಾಗಿದೆ.

## ೩.೧. ವೇದಗಳ ಕಾಲದಲ್ಲಿ ಹೆಣ್ಣು

ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನಗಳನ್ನು ತಿಳಿಯಬೇಕಾದರೆ, ಅವಳು ಹುಟ್ಟುವುದನ್ನು ಸಮಾಜ ಹೇಗೆ ಸ್ವೀಕರಿಸುತ್ತದೆ ಎಂಬುದರ ಮೇಲೆ ನಿರ್ಧರಿಸಬಹುದು. ಋಗ್ವೇದದಲ್ಲಿ ಮಗು ಹುಟ್ಟುವಾಗ ಗಂಡನ್ನು ಹೆಣ್ಣು ಮಾಡದಿರಲಿ ಎಂಬರ್ಥದ ಪ್ರಾರ್ಥನೆಯಿದೆ. ಅಥರ್ವಣ ವೇದದಲ್ಲಿ ಮಗ ಹುಟ್ಟಲೆಂದು ಪ್ರಾರ್ಥನೆ ಮಾಡುವ ಋಕ್ಕಿದೆ. ನೇರವಾಗಿ ಹೆಣ್ಣಿನ ಬಗ್ಗೆ ಕೀಳುಭಾವ ತೋರದಿದ್ದರೂ, ಪ್ರಜಾಪತಿಯೂ ಹೆಣ್ಣನ್ನು ಬೇರೆಯಲ್ಲಿಯಾದರೂ ಇಟ್ಟು, ಇಲ್ಲಿ ಗಂಡನ್ನು ಇಡಲಿ ಎಂಬ ಬೇಡಿಕೆ ಅಥರ್ವಣ ವೇದದಲ್ಲಿದೆ. ಈ ಋಕ್‌ಗಳಲ್ಲಿ ಹೆಣ್ಣು ಬೇಡವೆಂಬ ಬೇಡಿಕೆ ಬಂದಿರುವುದು ಗಮನಾರ್ಹ. ಹೋರಾಟದಲ್ಲಿ ಜೀವನ ಕಳೆಯಬೇಕಾಗಿದ್ದ ಅಲೆಮಾರಿ ಜನಾಂಗಕ್ಕೆ ಗಂಡು ಸ್ವಾಗತಾರ್ಹ ಅಸ್ತ್ರವಾಗಿದ್ದರೆ, ಅಪಾಯಕ್ಕೊಳಗಾಗುವ ಅಬಲೆ ಹೆಣ್ಣು ಬೇಡದವಳಾಗಿದ್ದಳು. 'ಹೆಣ್ಣು ಜಯ ಜಾನಿ ಮತ್ತು ಪತ್ನಿ ಎಂದು ಮೂರು ರೀತಿಯಲ್ಲಿ ಹೆಂಡತಿಯಾಗಿರುತ್ತಾಳೆಂದು ಋಗ್ವೇದದಲ್ಲಿ ಸೂಚಿಸಲಾಗಿದೆ. 'ಜಯ' ಎಂದರೆ ಗಂಡನ ಪ್ರೀತಿ ಗಳಿಸುವವಳು. 'ಜಾನಿ' ಎಂದರೆ ಮಕ್ಕಳ ತಾಯಿ, ಪತ್ನಿ ಎಂದರೆ ಬಲಿ ಆಚರಣೆಗಳಲ್ಲಿ ಭಾಗಿಯಾದವಳು. ಈ ಮೂರು ಶಬ್ದಗಳೂ ಋಗ್ವೇದದಲ್ಲಿ ಜೊತೆಜೊತೆಯಾಗಿ ಉಲ್ಲೇಖಗೊಂಡಿದೆ.

'ಹೆಣ್ಣು ಹಂಚಿಕೊಳ್ಳುವ ವಸ್ತು' ಎಂಬ ಭಾಗವೂ ವೇದಗಳಲ್ಲಿ ವ್ಯಕ್ತವಾಗಿದೆ. ಯುದ್ಧದಲ್ಲಿ ಗೆಲುವು ಪಡೆದವರು ಲೂಟಿಯ ವಸ್ತುಗಳಂತೆ ಹಾರಿಸಿ ತಂದ ಹೆಣ್ಣುಗಳನ್ನು ಹಂಚಿಕೊಳ್ಳುತ್ತಿದ್ದರು. ಹೆಣ್ಣೊಬ್ಬಳನ್ನು

ಆಭರಣಗಳಿಂದ ಶೃಂಗರಿಸಿ ಗೆದ್ದವರ ಪಾಳಯಕ್ಕೆ ಒಪ್ಪಿಸುವ ಪ್ರಸ್ತಾಪ ಋಗ್ವೇದದಲ್ಲಿದೆ. ಕಾಣಿಕೆಯಾಗಿ ಹೆಣ್ಣನ್ನು ಒಪ್ಪಿಸುವುದು ಆ ಕಾಲದಲ್ಲೇ ಇತ್ತು. ಜೂಜಿನ ಕಡು ವ್ಯಾಮೋಹಿಗಳಾಗಿದ್ದ ಋಗ್ವೇದದ ಆರ್ಯರು ಆಟಕ್ಕೆ ಪಣವಾಗಿ ಹೆಣ್ಣನ್ನು ಒಡ್ಡುತ್ತಿದ್ದಾರೆಂಬುದಕ್ಕೆ ಸಣ್ಣದೊಂದು ಆಧಾರ ದೊರೆಯುತ್ತದೆ. ಋಗ್ವೇದದಲ್ಲಿ ಜೂಜುಕೋರನೊಬ್ಬ ಸುಂದರಿಯೂ ಪ್ರೀತಿಸುವವಳು ಆಗಿದ್ದ ತನಗೆ ಮತ್ತು ತನ್ನ ಗೆಳೆಯರಿಗೆ ಸೇವೆ ಸಲ್ಲಿಸುತ್ತಿದ್ದ ಹೆಂಡತಿಯನ್ನು ಕಳೆದುಕೊಂಡದ್ದಕ್ಕೆ ಪ್ರಶಂಸಿಸುತ್ತಾನೆ. ಅಲ್ಲದೆ ಜೂಜಿನ ಹುಚ್ಚಿನಲ್ಲಿ ಕಳೆದುಕೊಂಡಾಗ ತನ್ನ ಹೆಂಡತಿಯ ಮೇಲೆ ಬೇರೆಯವರು ಕೈಹಾಕಿದರು ಎಂದು ವಿಷಾದಿಸುತ್ತಾನೆ.[೧೬] ಈ ಮಾತುಗಳು ಜೂಜಿನಲ್ಲಿ ಹೆಣ್ಣನ್ನು ಪಣವಾಗಿ ಒಡ್ಡುವ ರೂಢಿ ಬೆಳೆದಿತ್ತೆಂದು ಭಾಸವಾಗುತ್ತದೆ.

'ಸ್ತ್ರೀಯೇ ಬ್ರಹ್ಮ' ಎಂಬ ಕಲ್ಪನೆ ಪ್ರಚಲಿತವಿದ್ದ ವೇದಕಾಲದಲ್ಲಿ ಅಂದಿನ ಶಿಕ್ಷಣ ಕ್ರಮವಾದ ವೇದೋಪನಿಷತ್ತುಗಳ ಕುರಿತು ಆಧ್ಯಾತ್ಮ ವಿದ್ಯೆಯಲ್ಲಿ ಸ್ತ್ರೀ–ಪುರುಷರಲ್ಲಿ ಸಮಾನತೆಯಿತ್ತು ಎಂಬುದು ತಿಳಿದುಬರುತ್ತದೆ. ಬ್ರಹ್ಮಯಜ್ಞವನ್ನು ಕೈಗೊಳ್ಳುವ ಕಾಲಕ್ಕೆ ಪ್ರಸಿದ್ಧ ವೇದಜ್ಞ ಋಷಿಗಳನ್ನು ಸ್ಮರಿಸಿಕೊಳ್ಳಲಾಗುತ್ತದೆ. ಇವರೆಲ್ಲ ಗುರ್ಗಿವಾಚಕ್ನವಿ, ವಡವಾ ಪ್ರಾಥಿತೇಯ ಹಾಗೂ ಸುಲಭ ಮೈತ್ರೇಯ ಮೊದಲಾದವರ ಹೆಸರುಗಳು ಇತರ ಋಷಿಗಳೊಡನೆ ಸೇರ್ಪಡೆಯಾಗಿವೆ. 'ಋಗ್ವೇದವು ಇಪ್ಪತ್ತೇಳು ಬ್ರಹ್ಮವಾದಿನಿಯರನ್ನು ಹೆಸರಿಸುತ್ತದೆ. ಘೋಷ, ಗೋದಾ, ವಿಶ್ವಾವರ, ಅಪಾಲ ಮೊದಲಾದವರು ಇವರಲ್ಲಿ ಪ್ರಮುಖರು. ವಿದ್ವತ್, ತಪಸ್ಸುಗಳಿಂದ ಬ್ರಹ್ಮಸ್ವರೂಪವನ್ನು ಅರಿತುಕೊಂಡು ವ್ಯಾಖ್ಯಾನ ಮಾಡುವವರನ್ನು, ವಿದ್ವತ್ ಸಭೆಗಳಲ್ಲಿ ಆ ಕುರಿತು ವಾದಿಸುವವರನ್ನು 'ಬ್ರಹ್ಮವಾದಿನಿ'ಯರೆಂದು ಕರೆಯುತ್ತಿದ್ದರು.[೧೭] ಋಗ್ವೇದದ ಸಮಾಜ ಹೆಣ್ಣಿನ ವಿದ್ಯೆಯ ವಿಚಾರದಲ್ಲಿ ಧಾರಾಳವಾಗಿ ನಡೆದುಕೊಂಡಿದೆಯೆಂದು ಹೇಳಬಹುದು. ರಾಜಕುಮಾರಿ ಘೋಷ ಋಗ್ವೇದದ ಅನೇಕ ರಚನೆಗೆ ಕಾರಣಗಳೆಂದು ಖ್ಯಾತಳಾಗಿದ್ದಾಳೆ. ಹಾಗೆಯೇ ಲೋಪಮುದ್ರೆ, ಮಮತಾ, ಉಪಾಲಾ, ಸೂರ್ಯ, ಇಂದ್ರಾಣಿ, ಶಚೀ, ಸರ್ಪರಾಜ್ಞಿ ಮತ್ತು ವಿಶ್ವಾವರ ಇವರೆಲ್ಲರೂ ಋಕ್ ಕರ್ತೃಗಳೆಂದು ಹೇಳಲಾಗಿದೆ. ವಿಶ್ವಾವರಳು ಅಗ್ನಿಯನ್ನು ಕುರಿತು ಋಕ್‌ಗಳನ್ನು ರಚಿಸಿದ್ದಲ್ಲದೆ ಯಜ್ಞಾದಲ್ಲಿ ಋತ್ವಿಕನ ಕಾರ್ಯವನ್ನು ನೆರವೇರಿಸಿದಳೆಂದು ಹೇಳಲಾಗಿದೆ. ಋಕ್ ಕರ್ತೃಗಳಲ್ಲಿ ಲೋಪಮುದ್ರಾ ಮತ್ತು ತಂರತ ಎಂಬುವನ ಹೆಂಡತಿ ಶಶಿಯುಸಿ ಇಬ್ಬರು ಋಷಿಗಳೆಂದು ಖ್ಯಾತರಾಗಿದ್ದಾರೆ.[೧೮] ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಋಗ್ವೇದದ ಕಾಲದಲ್ಲಿ ಸ್ತ್ರೀಯರು ಬೌದ್ಧಿಕ ಕ್ಷೇತ್ರದಲ್ಲಿ ಅವಕಾಶ ಪಡೆದಿದ್ದಾರೆಂದು ಹೇಳಬಹುದು.

### ೩.೨. ಸ್ಮೃತಿಗಳ ಯುಗದಲ್ಲಿ

ಸ್ಮೃತಿಗಳ ಯುಗದಲ್ಲಿ ಆಧ್ಯಾತ್ಮಿಕ ವಿದ್ಯೆ ಕ್ರಮೇಣ ಸ್ತ್ರೀಯರಿಗೆ ಹೊರತಾದ ಉಲ್ಲೇಖ ದೊರೆಯುತ್ತದೆ. ಯಮ, ಹಾರೀತ ಸ್ಮೃತಿಗಳಲ್ಲಿ ವೇದಾಧ್ಯಯನವು ತೀರ ಹಿಂದೆ ಸ್ತ್ರೀಯರಿಗೆ ಲಭ್ಯವಿದ್ದರೂ ಈಗ ಇಲ್ಲ. ತಂದೆ, ಚಿಕ್ಕಂದಿರು, ಸೋದರರು ಅವರಿಗೆ ಮನೆಯಲ್ಲೇ ವಿದ್ಯೆ ಕೊಡಬಹುದೆಂದು ತಿಳಿಸಿದ್ದಾರೆ. ಈ ಕಾಲದಲ್ಲಿ ಸ್ತ್ರೀ ಬ್ರಹ್ಮಚಾರಿಣಿಯಾಗಿಯೂ ಇರುವಂತಿರಲಿಲ್ಲ. ಮದುವೆಯೊಂದೇ ಸ್ತ್ರೀಯರಿಗೆ ಮಂತ್ರ ಸಹಿತವಾದ ಸಂಸ್ಕಾರವಾಯಿತು. ಪತಿ ಸೇವೆ ಪಾತಿವ್ರತ್ಯಗಳೇ ಇವಳ ಜೀವನದ ಧ್ಯೇಯವಾಯಿತು. ಸಂಸಾರವೇ ಅವಳ ಸೃಷ್ಟಿಯಾಯಿತು. ಸ್ವತಂತ್ರ ಜೀವನ, ಸ್ವತಂತ್ರವಾದ ಅವಳ ವ್ಯಕ್ತಿತ್ವವನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ.

ಸೇವಕನಿಗೆ ಸ್ವಾಮಿ ಸೇವೆ, ಹೆಂಡತಿಗೆ ಪತಿ ಸೇವೆಯಲ್ಲದೆ ಪೂಜೆ, ಹೋಮ, ಯಾಗ, ಉಪವಾಸ, ಜಪತಪ ಒಂದೂ ಬೇಡ! ಅವು ಏನನ್ನು ಕೊಡುವವೋ ಅದು ಪತಿ ಸೇವೆಯಿಂದ ಸಾಧ್ಯ; ಆದ್ದರಿಂದಲೇ ಸ್ವರ್ಗಪ್ರಾಪ್ತಿ[೧೯] ಎಂದು ಮನು ಹೇಳುತ್ತಾನೆ. ಸ್ವಾತಂತ್ರ್ಯಕ್ಕೆ ಸ್ತ್ರೀ ಅರ್ಹಳಲ್ಲವೆಂದು ಹೇಳಿದರೂ ಮಾತೆಯರನ್ನು ಕುಟುಂಬ ಜೀವನದ ಕೇಂದ್ರ ವ್ಯಕ್ತಿಯಾಗಿ ಗೌರವಿಸಲಾಗುತ್ತಿತ್ತು. 'ಗುರುವಿಗಿಂತಲೂ', ತಂದೆಗಿಂತಲೂ ತಾಯಿ ಗೌರವಕ್ಕೆ ಹೆಚ್ಚು ಪಾತ್ರಳು ಎಂದು ವಶಿಷ್ಟನು ಹೇಳಿದ್ದಾನೆ. 'ತಾಯಿಯು ಗುರುವಿಗಿಂತಲೂ ಶ್ರೇಷ್ಠಳು, ಯಜ್ಞದಲ್ಲಿ ಭಾಗವಹಿಸುವ ಪುರೋಹಿತನಿಗಿಂತಲೂ ಶ್ರೇಷ್ಠಳೆಂದು' ಯಾಜ್ಞವಲ್ಕ್ಯ ಹೇಳುತ್ತಾನೆ.

ಒಬ್ಬ ಆಚಾರ್ಯ ಅಥವಾ ವೇದ ಪಂಡಿತ ಘನತೆಯಲ್ಲಿ ಸಂಬಳ ಪಡೆಯುವ ಹತ್ತು ಉಪಾಧ್ಯಾಯರನ್ನು ಮೀರಿಸುತ್ತಾನೆ. ತಂದೆಯು ನೂರು ಆಚಾರ್ಯರನ್ನು ಮೀರಿಸುತ್ತಾನೆ, ಆದರೆ ಒಬ್ಬ ಮಾತೆ ಸಾವಿರ ತಂದೆಯರನ್ನು ಮೀರಿಸುತ್ತಾಳೆಂದು[೨೦] ಮನು ಹೇಳುತ್ತಾನೆ. ಈ ಕಾಲದಲ್ಲಿ ಮಹಿಳೆಗೆ ಮನೆಯ ಜವಾಬ್ದಾರಿಯನ್ನು ವಹಿಸಲಾಗಿದೆ. 'ಗೃಹಿಣಿ ಮತ್ತು ಭಾಗ್ಯದೇವತೆಯಾದ ಲಕ್ಷ್ಮಿ ಇವರಲ್ಲಿ ವ್ಯತ್ಯಾಸವಿಲ್ಲ. ಏಕೆಂದರೆ ಅವರಿಬ್ಬರೂ ಮನೆಯನ್ನು ಬೆಳಗುತ್ತಾರೆ. ಆದ್ದರಿಂದ ಅವರಿಬ್ಬರನ್ನೂ ಆರಾಧಿಸಬೇಕು. ಅತ್ತೆ, ಮಾವ, ಮೈದುನ, ಗಂಡ ಇವರೆಲ್ಲರೂ ಸ್ತ್ರೀಯನ್ನು ಗೌರವಿಸಿ ಅಲಂಕರಿಸಿ ಸುಖದಲ್ಲಿಡುವುದರಿಂದ ಪುರೋಭಿವೃದ್ಧಿಯಾಗುತ್ತದೆ. ಸ್ತ್ರೀಗೆ ಗೌರವವಿರುವಲ್ಲಿ ದೇವತೆಗಳು ನಲಿದಾಡುತ್ತಾರೆ. ಸ್ತ್ರೀಯನ್ನು ಗೌರವಿಸದ ಯಾವ ಧರ್ಮ ಕಾರ್ಯವೂ ಸಫಲವಾಗುವುದಿಲ್ಲ. ಸೊಸೆಯಂದಿರು ಶಪಿಸಿದ ಮನೆಗಳು ದುಃಖಕ್ಕೀಡಾಗುತ್ತದೆ. ಹೆಂಡತಿ ಇರದ ಹೊರತು ಗಂಡನಿಗೆ ಯಾವ ಧರ್ಮ ಕಾರ್ಯಕ್ಕೂ ಅಧಿಕಾರವಿಲ್ಲ. ಸತಿಪತಿಯರು ಅನ್ಯೋನ್ಯವಾಗಿ ನಲಿದಾಡುವ ಮನೆಯ ಮಂಗಲವು ಸುನಿಶ್ಚಿತವಾಗಿದೆ[೨೧] ಎನ್ನುತ್ತಾನೆ ಮನು.

'ಯತ್ರ ನಾರ್ಯಸ್ತುಪೂಜ್ಯಂತೆ, ರಮಂತೆ ತತ್ರ ದೇವತಾಃ/ಯತ್ರೈ ತಂಸ್ತುನ ಪೂಜ್ಯಂತೆ ಸರ್ವ ತತ್ರಾ ಫಲಾಕ್ರಿಯಾಃ ಎಂಬುದನ್ನು ಮನು ಹೇಳಿರಬಹುದಾದ ಅರ್ಥ ಈ ರೀತಿ ಇದೆ. ಮನೆತನದ ಯಾವತ್ತೂ ಶುಭಾರಂಭ ಗೃಹಿಣಿಯನ್ನು ಅವಲಂಬಿಸಿರುತ್ತದೆ. ಗೃಹ ಜೀವನದ ಶಾಂತಿ ಸಮಾಧಾನಗಳು ಸ್ತ್ರೀಯರ ಮೇಲೆಯೇ ನಿಂತಿವೆ. ಈ ಸಂದರ್ಭದಲ್ಲಿ ಹೆಣ್ಣುಮಕ್ಕಳು ಕಣ್ಣೀರು ಹಾಕುತ್ತಾ ಕಾಲಕಳೆಯುವ ಮನೆಯು ಉದ್ಧಾರವಾಗುವುದಿಲ್ಲ ಅಷ್ಟೇ ಅಲ್ಲ ಅದು ನಾಶವಾಗುತ್ತದೆ ಎಂಬುದಿರಬಹುದು. 'ಜಾಮಿ' ಎಂದು ಕರೆದ ಮನೆಯ ಹೆಣ್ಣು ಸೋದರರ ಮಕ್ಕಳೆಲ್ಲಾ ಬರುತ್ತಿದ್ದರು. ಅವರೆಲ್ಲಾ ಸಂತೋಷದಿಂದ ಇದ್ದರೆ ಯಜಮಾನ ತನ್ನ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸಲು ಸಾಧ್ಯವಿತ್ತು.[೨೨] ಧರ್ಮಶಾಸ್ತ್ರಗಳೆಂದು ಕರೆಸಿಕೊಂಡ ಸ್ಮೃತಿಗಳು ವೇದ ಮತ್ತು ಉಪನಿಷತ್ತುಗಳ ನಂತರ ಬಂದವುಗಳು. ಸ್ಮೃತಿಕಾರದಲ್ಲಿ ಗೌತಮ ಪ್ರಾಚೀನರಂತೆ ಕಂಡರೆ, ಮನು ಕ್ರಿಸ್ತಶಕಾರಂಭದ ಕಾಲದವನೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಬ್ರಹ್ಮಸ್ಮೃತಿಯ ಸ್ಮೃತಿಯಲ್ಲಿ "ಹೆಂಡತಿ ಗಂಡನ ಅರ್ಧಾಂಗಿ. ಅವನ ಒಳಿತು ಕೆಡುಕುಗಳಲ್ಲಿ ಅವಳಿಗೆ ಸಮಪಾಲಿದೆ. ಅವನೊಂದಿಗೆ ಅವಳು ಸಾಯಲಿ ಇಲ್ಲವೇ ಮುತ್ತೈದೆಯಾಗಿ ಬದುಕಲಿ ಅವಳು ಗಂಡನ ಹಿತರಕ್ಷಕಳು" ಎನ್ನುವ ಹೇಳಿಕೆಯಿದೆ. ಎಲ್ಲಾ ಸ್ಮೃತಿಗಳು ಹೆಚ್ಚು ಕಡಿಮೆ ಇದೇ ಅಭಿಪ್ರಾಯಕ್ಕೆ ಬದ್ಧವಾಗಿದೆ. ಮನುವಿನ ಸ್ಮೃತಿಯಲ್ಲಿ 'ತೆರ' ತೆಗೆದುಕೊಂಡರೆ ಮಗಳನ್ನು ಮಾರಿದಂತೆ ಎಂಬುದು ಅವನ ಅಭಿಪ್ರಾಯ.

'ತೆರ' ತೆಗೆದುಕೊಳ್ಳುವ ಪದ್ಧತಿ ಹುಟ್ಟುವುದಕ್ಕೆ ಹೊರಗಿನ ಆಕ್ರಮಣಗಳಿಂದ ಸಮಾಜದಲ್ಲಿ ಹೆಣ್ಣುಗಳ ಸಂಖ್ಯೆ ಕಡಿಮೆಯಾದದ್ದೇ ಕಾರಣವಿರಬಹುದೆಂದು ಊಹಿಸಬಹುದು. ಗಂಡ ಪವಿತ್ರ ಕೆಲಸಕ್ಕೆ ದೇಶಾಂತರ ಹೋದರೆ ಹೆಂಡತಿ ಎಂಟು ವರ್ಷ ಕಾಯಬೇಕು. ವಿದ್ಯೆಗೆ ಕೀರ್ತಿಗೆ ಹೋದರೆ ಆರು ವರ್ಷ ಕಾಯಬೇಕು. ಸಂತೋಷಕ್ಕಾದರೆ ಮೂರು ವರ್ಷ ಕಾಯಬೇಕು. ಗಂಡ ಸತ್ತರೆ ವಿಧವೆ ಆರು ತಿಂಗಳ ಕಾಲ ಸನ್ಯಾಸ ಜೀವನ ನಡೆಸಿ ನಂತರ ಮರುವಿವಾಹವಾಗಬಹುದು ಎನ್ನುತ್ತಾನೆ. ಷಷ್ಠಿ, ಹೆಂಡತಿ ಧಾರ್ಮಿಕ ವಿಧಿಗಳಲ್ಲಿ ಪಾಲ್ಗೊಳ್ಳುತ್ತಿದ್ದು, ಗಂಡು ಮಕ್ಕಳನ್ನು ಹೆತ್ತರೆ, ಗಂಡ ಮತ್ತೊಬ್ಬ ಮದುವೆಯಾಗುವಂತಿಲ್ಲ. ಇವೆರಡರಲ್ಲಿ ಒಂದು ಕೊರತೆಯಾದರೆ ಮದುವೆಯಾಗಬಹುದೆಂದು ಅಪಸ್ತಂಭ ಹೇಳಿದರೆ, 'ಹೆಂಡತಿ ಬಂಜೆಯಾದರೆ ಎಂಟು ವರ್ಷ ಕಾದು ನಂತರ ಗಂಡನು ಅವಳನ್ನು ಬಿಟ್ಟು ಬೇರೆ ಮದುವೆಯಾಗಬಹುದು ಎಂದು ಮನು ಹೇಳುತ್ತಾನೆ. ಬ್ರಾಹ್ಮಣರ ಹೆಂಗಸು ಸತ್ತ ಗಂಡನನ್ನು ಹಿಂಬಾಲಿಸಬಾರದು; ಆದರೆ ಬೇರೆ ವರ್ಗಗಳಲ್ಲಿ ಹೆಣ್ಣು ಗಂಡ ಸತ್ತರೆ ಸತ್ತವನನ್ನು ಹಿಂಬಾಲಿಸಬೇಕು; ಹೆಂಗಸಿಗೆ ಇದೇ ನಿಜವಾದ ಕರ್ತವ್ಯವೆಂದು ಸಹಗಮನ ಪದ್ಧತಿಯ ಬಗ್ಗೆ ತೈಪಿವಾಸಿ ಹೇಳುತ್ತಾನೆ.

### ೩.೩. ಬೌದ್ಧ ಧರ್ಮದಲ್ಲಿ

ಬುದ್ಧನ ಕಾಲಕ್ಕಿಂತ ಹಿಂದೆ ಭಾರತದಲ್ಲಿ ಸ್ತ್ರೀಯರ ಸ್ಥಾನ ಗೌರವಾರ್ಹವಾದುದೇನೂ ಆಗಿರಲಿಲ್ಲ. ಕುಟುಂಬದಲ್ಲಿ ಹೆಣ್ಣು ಹುಟ್ಟುವುದು ಅನಿಷ್ಟದ ವಿಚಾರವೇ ಆಗಿತ್ತು. ಸ್ತ್ರೀಯರ ಸ್ಥಿತಿಗತಿಯ ವಿಚಾರದಲ್ಲಾಗಲೀ, ಕುಟುಂಬ ಸರ್ಕಾರ ಇವುಗಳ ವ್ಯವಸ್ಥೆಯ ವಿಚಾರದಲ್ಲಿಯಾಗಲೀ ಬುದ್ಧನಿಗೆ ಹೆಚ್ಚು ಆಸ್ತೆ ಇರಲಿಲ್ಲ. ಈ ಬಗೆಯ ಔದಾಸೀನ್ಯದಿಂದ ಸ್ತ್ರೀಯರ ಸಂಕಷ್ಟಗಳಿಗೆ ಅವರೇ ಕಾರಣರು ಎಂಬ ನೆಲೆಯಲ್ಲಿ ಚಿಂತನೆ ಮಾಡುತ್ತಿತ್ತು.[೨೩] ಬುದ್ಧ ತನ್ನ ಶಿಷ್ಯನಾದ ಆನಂದನನ್ನು ಕುರಿತು ಈ ಮಾತುಗಳನ್ನು ಹೇಳುತ್ತಾನೆ. 'ಹೆಂಗಸರು ಬೇಗ ಕೋಪಗೊಳ್ಳುತ್ತಾರೆ. ಅವರು ಹೆಚ್ಚು ಅನುರುಕ್ತರು, ಹೆಂಗಸರು ಈರ್ಷ್ಯಾಪರರು ಮೂರ್ಖರು' ಈ ಕಾರಣಕ್ಕೆ ಸಾರ್ವಜನಿಕ ಸಭೆಗಳಲ್ಲಿ ಅವರಿಗೆ ಸ್ಥಾನವಿಲ್ಲ. ಅವರು ಕೆಲಸ ಮಾಡಲು ಅರ್ಹರಲ್ಲ. ಅಲ್ಲದೇ ಯಾವ ವೃತ್ತಿಯಿಂದಲೂ ಅವರು ಬದುಕಲಾರರು. (ಕೊಂಡಿನ ಜಾತಕ–೧ ರಿಂದ ೧೩) ಈ ಮಾತುಗಳನ್ನು ಗಮನಿಸಿದರೆ ಬುದ್ಧನ ಹೆಣ್ಣಿನ ಬಗೆಗಿನ ನಿಲುವು ವೈದಿಕ ಸಂಪ್ರದಾಯದ ನಿಲುವಿನಂತೆಯೇ ಕಾಣುತ್ತದೆ. ಬೋಧಿಸತ್ವನ ಕತೆಯೊಂದರಲ್ಲಿ 'ಹೆಣ್ಣಿನ ಆಜ್ಞೆ ಮತ್ತು ಆಡಳಿತಕ್ಕೆ ಒಳಪಡುವ ನಾಡು ಅಪಕೀರ್ತಿಗೆ ಪಕ್ಕಾಗುತ್ತದೆ. ಅವಳ ಅಧಿಕಾರ ಆಜ್ಞೆಗಳನ್ನು ಪಾಲಿಸುವ ಜನ ಕೂಡ ಅಪಖ್ಯಾತಿಯನ್ನು ಹೊಂದುತ್ತಾರೆ. ಎಲ್ಲಿ ಹೆಣ್ಣು ಅಳುತ್ತಾಳೋ ಆ ನಾಡು ಶಾಪಕ್ಕೆ ತುತ್ತಾಗುತ್ತದೆ. ಹೆಣ್ಣಿಗೆ ವಂದಿಸುವವನೂ ಶಾಪಕ್ಕೆ ಗುರಿಯಾಗುತ್ತಾನೆ ಎಂದಿದೆ. ಹೆಂಗಸು ರಾಜ್ಯಭಾರ ಮಾಡಬಾರದು, ಆಡಳಿತಾಧಿಕಾರಿ ಆಗಬಾರದು ಎಂದು 'ಅಂಗುತ್ತರ' ಹೇಳುತ್ತದೆ. ಆದರೆ ಹೆಣ್ಣು ನ್ಯಾಯಾಧೀಶಳಾಗಿ ಪಾಲ್ಗೊಳ್ಳಬಹುದಿತ್ತು[೨೪] ಎಂಬುದಕ್ಕೂ ಆಧಾರಗಳಿವೆ.

ಒಂಬತ್ತು ಬಗೆಯ ಮನುಷ್ಯರಲ್ಲಿ ರಹಸ್ಯ ಉಳಿಯುವುದಿಲ್ಲವೆಂದು ನಾಗಸೇನನೆಂಬುವನಿಗೆ ಬುದ್ಧ ಹೇಳುವಾಗ ಕಾಮುಕ, ಕೋಪಿಷ್ಟ, ಕುಡುಕರ ಜೊತೆ ಹೆಣ್ಣನ್ನು ಸೇರಿಸುತ್ತಾನೆ. ಜಾತಕದಲ್ಲಿ ಹೆಣ್ಣಿನ

ಸ್ವಭಾವವನ್ನು ವರ್ಣಿಸುತ್ತಾ ಬುದ್ಧ 'ಅವರ(ಹೆಂಗಸರ) ನಡೆ ನೀರಿನಲ್ಲಿ ಮೀನು ಓಡಾಡಿದಂತೆ. ಕಳ್ಳರಂತೆ. ಸ್ತ್ರೀಯರೂ ಅನೇಕ ಬಣ್ಣದವರು, ಅವರಿಂದ ಸತ್ಯ ಹೊರಡದು. ಅವರಿಗೆ ಸುಳ್ಳೇ ಸತ್ಯ–ಸತ್ಯವೇ ಸುಳ್ಳು. ಅವರ ಬೇಕು ಬೇಡಗಳ ಬಗ್ಗೆ ಕಿಂಚಿತ್ತು ಯೋಚಿಸಕೂಡದು' ಎಂದು ಹೇಳುತ್ತಾನೆ. ಇಲ್ಲಿಯೂ ಹೆಣ್ಣಿನ ಬಗ್ಗೆ ಸಂಶಯ, ಅನುಮಾನ, ಅವಮಾನದ ಪ್ರವೃತ್ತಿಯೇ ಮುಂದುವರೆದಂತಿದೆ. ಹೆಣ್ಣಿನ ಜೀವನದ ಅನೇಕ ಚಿತ್ರಗಳು ಬೌದ್ಧ ಧಾರ್ಮಿಕ ಸಾಹಿತ್ಯದಲ್ಲಿ ದೊರಕುತ್ತವೆ. ಉತ್ತಮ ವರ್ಗದವರಲ್ಲಿ ಹೆಂಗಸರನ್ನು ಅವರ ತಂದೆ, ಗಂಡ ಇಲ್ಲವೇ ಮಕ್ಕಳು ಸಾಕುತ್ತಿದ್ದರು. ಆ ಹೆಂಗಸರು ಮನೆ ಕೆಲಸಗಳನ್ನಲ್ಲದೆ ಬೇರೇನನ್ನೂ ಮಾಡುತ್ತಿರಲಿಲ್ಲ. ಬಡವರ್ಗದ ಹೆಂಗಸರು ಬದುಕಲು ಯಾವುದಾದರೂ ವೃತ್ತಿಗಳನ್ನು ಕೈಗೊಳ್ಳುತ್ತಿದ್ದರು. ಬತ್ತದ ಗದ್ದೆಗಳನ್ನು ಕಾಯುತ್ತಿದ್ದರು. ಕಣ ಮಾಡಿ ಬತ್ತವನ್ನು ಪಡೆಯುತ್ತಿದ್ದರು. ಹತ್ತಿರ ಹೊಲಗಳನ್ನು ಕಾಯುತ್ತಾ ದಾರವನ್ನು ತೆಗೆಯುತ್ತಿದ್ದರು. ಹೆಂಗಸರು ರುದ್ರಭೂಮಿಯನ್ನು ನೋಡಿಕೊಳ್ಳುತ್ತಿದ್ದರು. ಆ ಕೆಲಸ ಮಾಡುತ್ತಿದ್ದ ಕಾಳಿ ಎಂಬುವಳ ಪ್ರಸ್ತಾಪವಿದೆ. ಹೆಂಗಸರು ಉತ್ತು ಬಿತ್ತುವುದರಲ್ಲಿ, ಕುಯಿಲು ಕಣ ಮಾಡುವುದರಲ್ಲಿ ಪಾಲ್ಗೊಳ್ಳುತ್ತಿದ್ದರು. ಬಡವರ್ಗದ ಹೆಂಗಸರು ದುಡಿಯದೇ ಬೇರೆ ಮಾರ್ಗವೇ ಇರಲಿಲ್ಲ.

ಬುದ್ಧನ ಏಳು ರೀತಿಯ ಹೆಂಡತಿಯರ ಗುಣಸ್ವಭಾವಗಳನ್ನು ತಿಳಿಸಿದ್ದಾನೆ. ಅವುಗಳೆಂದರೆ,

೧. ಕ್ರೋಧಿ, ಅಹಿತಕಾರಿ, ಅನುಕಂಪಯಿಲ್ಲದವಳು ಪರಪುರುಷನನ್ನು ಬಯಸುವವಳು, ತನ್ನ ಅವಹೇಳನ ಮಾಡುವವಳು. ದಾಸ–ದಾಸಿಯರನ್ನು ಹೊಡೆಯಲು ಉತ್ಸುಕಳಾಗಿರುವವಳು; ಇಂತಹವಳನ್ನು 'ವಧಕ ಭಾಯಕ' ಎಂದು ಕರೆಯುತ್ತಿದ್ದರು.

೨. ತನ್ನ ಗಂಡ ವಿದ್ಯೆಯಿಂದಾಗಲಿ ಅಥವಾ ಕೃಷಿಯಿಂದಾಗಲಿ ಸಂಪಾದಿಸಿದ ಹಣದಲ್ಲಿ ಹೆಂಡತಿಯಾದವಳು ಸ್ವಲ್ಪವಾದರು ಹಣವನ್ನು ಕದಿಯುವ ಇಚ್ಚೆಯುಳ್ಳವಳಾಗಿದ್ದರೆ ಅಂತಹವಳನ್ನು 'ಚೋರಚಾರ್ಯ' ಎಂದು ಕರೆಯುತ್ತಿದ್ದರು.

೩. ಕೆಲಸ ಮಾಡದವಳು ಹೆಚ್ಚು ತಿನ್ನುವವಳು ಕಠಿಣಳು, ಕ್ರೂರ ಪ್ರವೃತ್ತಿಯವಳು, ಕೆಟ್ಟ ಮಾತನಾಡುವವಳು, ಸೇವಕರನ್ನು ದಮನ ಮಾಡುವವಳು; ಇವಳನ್ನು 'ಆಯರ ಬಾಯರ' ಎನ್ನುವರು.

೪. ಸದಾ ಹಿತವನ್ನು ಬಯಸುವವಳು, ಅನುಕಂಪೆಯನ್ನು ತೋರುವವಳು, ತಾಯಿ ಮಗನನ್ನು ರಕ್ಷಿಸುವಂತೆ ಪತಿಯನ್ನು ರಕ್ಷಿಸುವವಳು, ಪತಿ ಸಂಪಾದಿಸಿದ ಹಣವನ್ನು ಜೋಪಾನ ಮಾಡುವವಳು 'ಮಾತೃಬಾರ್ಯೆ'.

೫. ಅಕ್ಕ–ತಂಗಿಯರ ವಿಷಯದಲ್ಲಿ ಗೌರವ ಭಾವದಿಂದಿರುವಂತೆ ಪತಿಯ ವಿಷಯದಲ್ಲಿ ಗೌರವ ಭಾವದಿಂದ ಲಜ್ಜಾಭಾವದಿಂದ, ಪತಿಯ ಅಧೀನಳಾಗಿರುವವಳು 'ಭಗಿಣೀ ಬಾರ್ಯ' ಎನಿಸಿಕೊಳ್ಳುವಳು.

೬. ದೀರ್ಘಕಾಲದ ನಂತರ ಬಂದ ಸುಖವನ್ನು ಕಾಣುವ ಸಖಿಯಂತೆ ಗಂಡನನ್ನು ಕಂಡು ಪ್ರಸನ್ನಳಾಗುವವಳನ್ನು ಕುಲೀನ, ಶೀಲವತಿ ಹಾಗೂ ಪತಿವ್ರತೆಯಾದವಳನ್ನು 'ಸಖೀಬಾರ್ಯೆ' ಎನ್ನುವರು.

೭. ಕೋಪಿಸಿಕೊಂಡಾಗ ಶಾಂತಳಾಗಿರುವವಳು, ಹೊಡೆತ ಹಾಗೂ ಶಿಕ್ಷೆಯಿಂದ ಹೆದರಿ ಮುದುರಿ ಕೊಂಡಿರುವವಳು, ಒಳ್ಳೆಯ ಮನಸ್ಸುಳ್ಳವಳು, ಪತಿಯನ್ನು ಸಹಿಸಿಕೊಳ್ಳುವವಳು, ಕೋಪಿಸಿಕೊಳ್ಳದವಳು, ಪತಿಯ ವಶದಲ್ಲಿರುತ್ತಾಳೆ. ಇಂಥವಳನ್ನು 'ದಾಸಿಬಾರ್ಯೆ'[೨೫] ಎನ್ನುವರು. ಬಂಡೆಯರಿಗೆ ಆ ಸಮಾಜದಲ್ಲಿ ಗೌರವ ಭಾವನೆಯಿರುತ್ತಿರಲಿಲ್ಲವಾದ್ದರಿಂದ ಅಪಮಾನ ಪಡೆದುಕೊಳ್ಳಲು ಸಾಧ್ಯವಾಗಿದೆ. ಗರ್ಭಿಣಿಯರಂತೆ ವೇಷಧಾರಿಯಾಗಿ ತೋರ್ಪಡಿಸಿಕೊಳ್ಳುತ್ತಿದ್ದರು. ದಾಸಿಯರಿಗೆ ತನ್ನ ವೇಷದ ಗುಟ್ಟನ್ನು ಕಾಪಾಡುವಂತೆ ತಿಳಿಸಿ ಬೇರೆಯವರು ಹೆತ್ತು ಬಿಟ್ಟು ಹೋದ ಮಗುವನ್ನು ತಂದು ತನ್ನ ಮಗುವೆಂದು ಸಾಕುತ್ತಾ ರಾಣಿಯರಂತೆ ಮೆರೆಯುತ್ತಿದ್ದರು. ಸಾಮಾನ್ಯರಲ್ಲಿ ಬಂಜೆಯರನ್ನು ತವರುಮನೆಗೆ ಕಳುಹಿಸುತ್ತಿದ್ದ ಸಂಗತಿಗಳು ಜಾತಕ ಕಥೆಗಳಲ್ಲಿ ದೊರೆಯುತ್ತವೆ.

ಸವಿನಯ ಪೀಠಿಕದಲ್ಲಿ ಹತ್ತು ಬಗೆಯ ಹೆಂಡತಿಯನ್ನು ಕುರಿತು ಹೇಳಲಾಗಿದೆ. ಅವರು ಯಾರೆಂದರೆ ಹಣಕ್ಕೆ ಕೊಂಡುತಂದವರು, ತಾವಾಗಿಯೇ ಜೊತೆಯಲ್ಲಿ ಬದುಕುತ್ತಿರುವವರು, ಆಗಾಗ್ಗೆ ಸುಖ ಕೊಟ್ಟವರು, ಬಟ್ಟೆ ಪಡೆದುಕೊಂಡವರು, ಮನೆಗೆ ನೀರು ತಂದವರು, ಸಿಂಬಿ ಸುತ್ತಿಕೊಂಡವರು, ಗುಲಾಮರಾಗಿ ಹೆಂಡತಿಯಾದವರು, ಕಲಾಕಾರರಾಗಿ ಹೆಂಡತಿಯಾದವರು, ಧ್ವಜ ಹೊತ್ತವರು, ತತ್ಕಾಲಕ್ಕೆ ಹೆಂಡತಿಯಾದವರು. ಈ ಪಟ್ಟಿಯನ್ನು ನೋಡಿದರೆ ಪುರುಷರಿಗಿದ್ದ ಸ್ವಾತಂತ್ರ್ಯದ ವ್ಯಾಪ್ತಿ ಮನವರಿಕೆಯಾಗುತ್ತದೆ. ಮಗಳು ಹುಟ್ಟುವುದು ತಂದೆಗೆ ಹೊರೆಯೆನಿಸದಿದ್ದರೂ ಅವಳಿಗೆ ಗಂಡು ಹುಡುಕಿ ಮದುವೆ ಮಾಡುವುದು ತಂದೆಯ ಪವಿತ್ರ ಕರ್ತವ್ಯವಾಗಿತ್ತು.[೨೬] ಬಹಳ ಹೆಣ್ಣುಮಕ್ಕಳು ಹುಟ್ಟುವುದು ಅಪಶಕುನವೆಂದು ಒಂದೆಡೆ ಹೇಳಲಾಗಿದೆ. ಹೆಣ್ಣು ಮಕ್ಕಳನ್ನು ದತ್ತು ತೆಗೆದುಕೊಳ್ಳುವ ವಿಚಾರ ವಿಶೇಷವಾಗಿಲ್ಲವಾದರೂ ಸೀತೆ, ಕುಂತಿ, ಶಕುಂತಲೆ ಮತ್ತು ಪ್ರಮದರ ಎಲ್ಲರೂ ದತ್ತು ಪುತ್ರಿಯರೆ.[೨೭] ಅರಸು ಮನೆತನಗಳ, ಮಹರ್ಷಿಗಳ ಆಶ್ರಮದಲ್ಲಾದರೂ ಹೆಣ್ಣಿನ ಪಾಲಿಗೆ ಇಷ್ಟು ಔದಾರ್ಯ ಲಭ್ಯವಾಗಿತ್ತು.

ಬೌಧಾಯನ ಹೆಣ್ಣಿನ ಪುನರ್‌ವಿವಾಹವನ್ನು ಒಪ್ಪಿ ಅವಳೂ ಆಸ್ತಿಗೆ ಹಕ್ಕುದಾರಳೆಂದು ಹೇಳುತ್ತಾನೆ. ಆದರೆ ಮಗ ಬೇಕೆನ್ನುವ ಕಾರಣಕ್ಕಾಗಿ ಪುನರ್‌ವಿವಾಹ ಆಗುವುದನ್ನು ವಿರೋಧಿಸುವ ಅಪಸ್ತಂಭ ಕೆಲವು ಮಿತಿಗಳನ್ನು ವಿಧಿಸುತ್ತಾನೆ. ವಿಧವೆಯರಿಗೆ ಬೌಧಾಯನ ನಿಯೋಗವನ್ನು ಒಪ್ಪುತ್ತಾನೆ. ಈತನಿಗೆ ಮುಂಚಿನ ಗೌತಮನ ಕಾಲದಲ್ಲಿ ಕೂಡ ನಿಯೋಗ ಸಹಜವಾಗಿ ಚಾಲ್ತಿಯಲ್ಲಿದ್ದ ವ್ಯವಹಾರವಾಗಿತ್ತು. ಸತ್ತವನ ಹೆಂಡತಿಗೆ ಮಗ ಬೇಕಾದರೆ ಅವಳು ತನ್ನ ಗುರುಗಳ ಅಪ್ಪಣೆ ಪಡೆದು ಗಂಡನ ಸಹೋದರನಿಂದ ಇಲ್ಲವೇ ಅವನ ಸಾಪಿಂಡ, ಸಗೋತ್ರ ಸಮಾನ ಪ್ರವರನಿಂದ ಮಗುವನ್ನು ಪಡೆಯಬಹುದೆಂದು ಗೌತಮ ಹೇಳುತ್ತಾನೆ. ಬುದ್ಧನು ಸಾಧಕನಿಗೆ ಹೆಣ್ಣು ಮಾಯೆಯಾಗಿ ಸಾಧನೆಯ ದಾರಿಗೆ ಅಡ್ಡಿಯಾಗುತ್ತಾಳೆಂದು ಭಾವಿಸಿದವನಾಗಿದ್ದು ಅರೆಮನಸ್ಸಿನಿಂದಲೇ ಬೌದ್ಧ ಸಂಘಕ್ಕೆ ಮಹಿಳೆಯರನ್ನು ಬರಮಾಡಿಕೊಳ್ಳುತ್ತಾನೆ. ಬುದ್ಧನ ನಂತರ ಬಂದ ಜಾತಕ ಕಥೆಗಳಂತೂ ಸ್ತ್ರೀಯರ ಚಾಂಚಲ್ಯ, ದ್ರೋಹ, ವಂಚನೆಗಳನ್ನು ಪುನಃ ಪುನಃ ಎತ್ತಿ ತೋರಿಸುತ್ತವೆ.[೨೮] ಬುದ್ಧನ ಕಾಲದಲ್ಲೇ ಸನ್ಯಾಸಿನಿಯರು ಸಂಘಕ್ಕೆ ಸೇರ್ಪಡೆಯಾಗಿ ಧರ್ಮಪ್ರಸಾರ ಕೈಗೊಂಡರು. 'ಧಮ್ಮದಿನ್ನು' ಎಂಬಾಕೆ ಬುದ್ಧನ ಜೀವಿತ ಕಾಲದಲ್ಲಿ ಪ್ರಮುಖ ಬೋಧಕಿಯಾಗಿದ್ದಾರೆ. ಸುಮನು ಮತ್ತು ಚಂಡಿ

ಎನ್ನುವವರು ಪಂಚಶೀಲಗಳ ಕುರಿತು ಬುದ್ಧನೊಡನೆ ಚರ್ಚಿಸುತ್ತಿದ್ದರು. ಸ್ವತಃ ಬುದ್ಧನು ಶ್ರೇಷ್ಠ ಬೋಧಕನಾಗಿದ್ದು, ಭಿಕ್ಷುಣಿಯರಿಗೆ ಒಳ್ಳೆಯ ಮಾರ್ಗದರ್ಶನ ಲಭಿಸಿತು.[೨೯] ಈ ಕಾಲದಲ್ಲಿ ಶೈಕ್ಷಣಿಕವಾಗಿ ಮಹಿಳೆಯರು ಪ್ರಗತಿ ಸಾಧಿಸಿದಂತೆ ಮನವರಿಕೆಯಾಗುತ್ತದೆ.

ವೈದಿಕ ಸಂಪ್ರದಾಯಗಳು, ವಿದೇಶಿ ಆಕ್ರಮಣಗಳು, ಆರ್ಯರ ಕುಟುಂಬಗಳು ಇತರರನ್ನು ಮದುವೆಯಾದದ್ದು ಜಾತಿಪದ್ಧತಿ, ಅವಿಭಕ್ತ ಕುಟುಂಬ ಈ ಎಲ್ಲಾ ಸಂಗತಿಗಳು ಮಹಿಳೆಯರ ಶೋಚನೆಯ ಸ್ಥಿತಿಗೆ ಕಾರಣವಾದವು. ಶಿಕ್ಷಣದ ಅಭಾವ, ಬಾಲ್ಯವಿವಾಹ, ಪರಾಧೀನತೆ, ಬಹುಪತ್ನಿತ್ವದ ಒತ್ತಡಗಳಿಂದಾಗಿ ಸ್ತ್ರೀಯರ ಬದುಕು ಹಿಂದೂ ಧರ್ಮದಡಿ ಅಸಹನೀಯ ಯಾತನೆಯಿಂದ ಕೂಡಿತ್ತು. ಇದಕ್ಕೆ ಸ್ಮೃತಿಕಾರರು ವಿಧಿಸಿದ ನೂರಾರು ದಿಗ್ಬಂದನಗಳು ಮುಖ್ಯ ಕಾರಣ. ಒಟ್ಟು ಕುಟುಂಬಗಳಲ್ಲಿ ದಬ್ಬಾಳಿಕೆಗೆ ನಿರಂತರವಾಗಿ ಒಳಗಾಗುತ್ತಿದ್ದ ಸ್ತ್ರೀಯರಲ್ಲಿ ಅಸೂಯೆ ಹೆಚ್ಚಿ ಒಬ್ಬರನ್ನೊಬ್ಬರು ಶೋಷಿಸುತ್ತ, ಗಂಡಿನ ಪ್ರೇಮಕ್ಕಾಗಿ ಸ್ಪರ್ಧಿಸುತ್ತಾ ಬಡಿದಾಡುವ ಹಪಾಹಪಿಗಳು ಬೆಳೆದು ಕ್ರಿ.ಶ.ಸು. ೩೦೦ರ ವೇಳೆಗೆ ಅವರ ಬದುಕು ತೀರಾ ಸಂಕುಚಿತವಾಯಿತು. ಉಪನಯನ ಇಲ್ಲದ್ದರಿಂದ ವೇದಾಧ್ಯಯನ ತಪ್ಪಿ, ಶಿಕ್ಷಣವಲ್ಲದೆ ಶೂದ್ರ ಸಮಾನಳೆನಿಸಿದ ಹೆಣ್ಣು ಧಾರ್ಮಿಕವಾಗಿ ಹೇಗೋ ಹಾಗೆಯೇ ಸಾಮಾಜಿಕವಾಗಿಯೂ ಕೆಳಗಿಳಿದಳು.[೩೦]

## ೩.೪. ಜೈನ ಧರ್ಮದಲ್ಲಿ ಹೆಣ್ಣಿನ ಸ್ಥಾನಮಾನ

'ಗುಣದೊಳು, ರೂಪಿನೊಳು, ಸೊಬಗಿನೊಳು, ಶೃಂಗಾರದೊಳು, ಸೌಮ್ಯಲ
ಕ್ಷಣದೊಳ್, ಮೈಮೆಯೊಳ್ ಓಜೆಯೊಳ್, ವಿಭವದೊಳ್ ಶೀಲಂಗಳೊಳ್ ಭೃತ್ಯ ಪೋ
ಕ್ಷಣದೊಳ್ ಭೋಗದೊಳಾರ್ಪಿನೊಳ್ ವಿಭೂತಿಯೊಳ್ ಕಾರುಣ್ಯದೊಳ್ ಪೋಲಿ
ಸ್ಕೆಣೆಯಾರ್ ಗೆಲ್ವ ಬೆಡುಗಿಗೆಂದನುದಿನಂ ವಿದ್ವಜ್ಜನಂ ಬಣ್ಣಿಕ್ಕುಂ[೩೧]

ಕನ್ನಡ ನಾಡಿನ ಮಹಿಳೆಯರ ಬಗೆಗೆ ಅಭಿಮಾನವನ್ನು ವ್ಯಕ್ತಪಡಿಸಿರುವ ಕವಿಯೊಬ್ಬರ ನುಡಿಯನ್ನು ಡಾ. ಶಾಂತಿನಾಥ ದಿಬ್ಬದ ಅವರು ಈ ರೀತಿ ಉಲ್ಲೇಖಿಸಿದ್ದಾರೆ. ಸಾಮಾನ್ಯವಾಗಿ ಎಲ್ಲಾ ಮಹಿಳೆಯರಲ್ಲೂ ಈ ಗುಣಗಳು ಇರುತ್ತವೆಂಬುದು ದಿಬ್ಬದ ಅವರ ಅಭಿಪ್ರಾಯವಾಗಿದೆ. ತೀರ್ಥಂಕರರ ಧರ್ಮೋಪದೇಶಕ್ಕೆ ನಿರ್ಮಿತವಾದ ಸಮವಸರಣವೆಂಬ ಸಭಾಮಂಟಪದಲ್ಲಿ ಜರುಗುವ ಧರ್ಮಗೋಷ್ಠಿಯ ಮೇಲ್ವಿಚಾರಕರನ್ನಾಗಿ ಯಕ್ಷ ಯಕ್ಷಿಯರನ್ನು ದೇವೇಂದ್ರನು ನಿಯುಕ್ತಿಗೊಳಿಸುತ್ತಾನೆ ಎಂಬ ನಂಬಿಕೆ ಜೈನ ಶಾಸ್ತ್ರಗ್ರಂಥಗಳಲ್ಲಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ತೀರ್ಥಂಕರ ಸಾನಿಧ್ಯದಿಂದಾಗಿ ಯಕ್ಷಿಯರು ದೇವತೆಗಳೆನಿಸಿಕೊಳ್ಳುತ್ತಾರೆ. ಹೀಗಾಗಿ ತೀರ್ಥಂಕರರ ಆರಾಧನೆಯ ಜೊತೆಗೆ ಯಕ್ಷಿಯರ ಆರಾಧನೆಯೂ ರೂಢಿಗೆ ಬಂದಿದೆ. ಈ ಪ್ರಕ್ರಿಯೆಯ ಹಿಂದೆ ಹೆಣ್ಣಿಗೆ ಜೈನರು ಕೊಟ್ಟಿರುವ ದೇವತೆಯ ಸ್ಥಾನಮಾನಗಳಿರುವುದನ್ನು ಕಾಣಬಹುದಾಗಿದೆ.[೩೨]

ಸಮವಸರಣದ ಮಂಟಪದ ದ್ವಾದಶಗಣ ಭೂಮಿಯ ಹನ್ನೆರಡು ಕೋಷ್ಟಕಗಳಲ್ಲಿ ಮನುಷ್ಯರು, ಕಲ್ಪವಾಸಿಗಳು, ಅಸುರರು ಯಾವುದೇ ಭೇದ ಭಾವವಿಲ್ಲದೆ ವಾಸಿಸುತ್ತಿದ್ದಾರೆಂದೂ, ಯಾರು ಯಾರು ಯಾವ ಯಾವ ಕೋಷ್ಟಕಗಳಲ್ಲಿ ಇರುತ್ತಿದ್ದರೆಂದು ಜೈನ ಪುರಾಣಗಳು ತಿಳಿಸುತ್ತವೆ. ಪೂರ್ವ ದಿಗ್ವೇದಿ

ಪ್ರದೇಶದಿಂದ ದಕ್ಷಿಣ ದಿಗ್ವೇದಿ ಪ್ರದೇಶದ ಮೂರು ಕೋಷ್ಟಕಗಳಲ್ಲಿ ಮುನಿಜನರು, ಕಲ್ಪಮರ ಸ್ತ್ರೀಯರು, ಮನುಷ್ಯ ಸ್ತ್ರೀಯರು ವಾಸಿಸುತ್ತಾರೆ. ದಕ್ಷಿಣ ಬೀದಿಯಿಂದ ಪಶ್ಚಿಮ ದಿಕ್ಕಿನ ಬೀದಿಯವರೆಗಿನ ಮೂರು ಕೋಷ್ಟಕಗಳಲ್ಲಿ ಜ್ಯೋತಿಷಿ ದೇವಿಯರು, ವ್ಯಂತರ ಸ್ತ್ರೀಯರು, ಭವನಾಮರ ಸ್ತ್ರೀಯರು ವಾಸಿಸುತ್ತಾರೆ ಎಂಬ ಪುರಾಣ ವಿವರಗಳನ್ನು ನೋಡಿದರೆ ಸಮವರಣ ಮಂಟಪದಂತಹ ಪವಿತ್ರ ಸ್ಥಾನದಲ್ಲೂ ಸ್ತ್ರೀಯರಿಗೆ ಅಗ್ರಸ್ಥಾನ ದೊರೆತಿರುವುದು ತಿಳಿಯುತ್ತದೆ.[೩೩] ಜೈನ ಧರ್ಮದಲ್ಲಿ ಸಂಘ ವ್ಯವಸ್ಥೆಗೆ ಬಹಳ ಮಹತ್ವದ ಸ್ಥಾನವಿದ್ದಿತು. ಮುನಿ, ಆರ್ಯಿಕೆ, ಶ್ರಾವಕ, ಶ್ರಾವಿಕೆ ಎಂಬ ನಾಲ್ಕು ಘಟಕಗಳು ಜೈನ ಸಂಘದಲ್ಲಿರುತ್ತಿದ್ದವು. ಈ ಸಂಘಕ್ಕೆ ಚತಃಸಂಘವೆಂಬ ಹೆಸರಿದ್ದಿತು. ಈ ಸಂಘ ವ್ಯವಸ್ಥೆಯಲ್ಲಿ ಮುನಿಸ್ಥರದಲ್ಲಾಗಲಿ ಶ್ರಾವಕ ಸ್ಥರದಲ್ಲಾಗಲಿ ಮಹಿಳೆಯರನ್ನು ತುಂಬ ಗೌರವದಿಂದ ಕಾಣಲಾಗುತ್ತಿತ್ತು. ಶ್ರಾವಿಕೆಯರಿಗೆ ಧರ್ಮಬೋಧೆ ಮಾಡುವುದು ಆರ್ಯಿಕೆಯರ ಜವಾಬ್ದಾರಿಯಾಗಿದ್ದಿತು. ಶ್ರಾವಕರಂತೆ ಶ್ರಾವಿಕೆಯರು ಅಷ್ಟಮೂಲ ಗುಣಗಳನ್ನು ಹೊಂದಿರಬೇಕೆಂಬ ನಿಯಮವಿದ್ದಿತು. ಆ ಅಷ್ಟಮೂಲ ಗುಣಗಳೆಂದರೆ ಅಹಿಂಸೆ, ಸತ್ಯ, ಅಸ್ತೇಯ, ಅಪರಿಗ್ರಹ ಮತ್ತು ಬ್ರಹ್ಮಚರ್ಯ ಎಂಬ ಪಂಚಾಣುವ್ರತಗಳ ಪಾಲನೆ 'ಮ'ಕಾರತ್ರಯಗಳಾದ ಮಧು, ಮಾಂಸ, ಮದ್ಯಗಳ ವರ್ಜನೆ ಅಲ್ಲದೆ ದೇವಪೂಜೆ, ಗುರುಪೂಜೆ, ಅಸ್ವಾಧ್ಯಾಯ, ಸಂಯಮ, ತಪ ಹಾಗೂ ದಾನಗಳೆಂಬ ಷಟ್ಕರ್ಮಗಳನ್ನು ಆಚರಿಸಬೇಕಾಗಿತ್ತು. ಈ ಜೈನ ಸಂಘಗಳಲ್ಲಿ ವಿಧವೆಯರಿಗೂ ಅವಕಾಶಗಳಿರುತ್ತಿದ್ದವು.

ಮುನಿದೀಕ್ಷೆಗೆ ಮತ್ತು ಮೋಕ್ಷಪ್ರಾಪ್ತಿಗೆ ಹೆಣ್ಣು ಅನರ್ಹಳಾಗಿದ್ದಳು. ಬಹುಶಃ ಹೆಣ್ಣಿನ ಶರೀರ ಅಶುದ್ಧವೆಂಬ ನಂಬಿಕೆಯ ಕಾರಣದಿಂದ ಅವಳನ್ನು ಮುನಿದೀಕ್ಷೆಗೆ ಅರ್ಹಳಲ್ಲವೆಂದು ಭಾವಿಸಿರಬೇಕೆಂದು ಹಾಗೆಯೇ ಮೋಕ್ಷಪ್ರಾಪ್ತಿಗಾಗಿ ಪುರುಷ ಜನ್ಮ ಪಡೆಯಬೇಕೆಂದು ಜೈನರು ನಂಬಿದ್ದಾರೆಂಬ ಪ್ರೊ. ಶಾಂತಿನಾಥ ದಿಬ್ಬದ ಅವರ ಅಭಿಪ್ರಾಯ ಒಪ್ಪಬಹುದಾಗಿದೆ. ಸನ್ಯಾಸಕ್ಕೆ ದಿಗಂಬರತ್ವ ಅನಿವಾರ್ಯ ಎಂಬ ನಂಬಿಕೆಗಳು ಜೈನರಲ್ಲಿದ್ದುದರಿಂದ ಹಾಗೂ ಹೆಣ್ಣು ಈ ಎಲ್ಲಾ ಕರಾರುಗಳನ್ನು ಪೂರೈಸಲಾರಳಾದ್ದರಿಂದ ದಿಗಂಬರತ್ವ ಮತ್ತು ಮೋಕ್ಷಪ್ರಾಪ್ತಿಯ ಸಂದರ್ಭಗಳಲ್ಲಿ ಅವಳನ್ನು ಬದಿಗಿರಿಸಲಾಗಿದೆ. ಆದರೆ ಶ್ವೇತಾಂಬರರು ಹೆಣ್ಣಿಗೆ ಮುಕ್ತಿ ಸಾಧ್ಯವೆನ್ನುತ್ತಾರೆ. ಹಾಗೂ ಮುನಿಗೆ ನಗ್ನತೆ ಅನವಶ್ಯವೆಂದೂ ವಾದಿಸುತ್ತಾರೆ. 'ನಗ್ನತೆ ಮತ್ತು ಮೋಕ್ಷಪ್ರಾಪ್ತಿಗಳ ವಿಷಯದಲ್ಲಿ ಸ್ತ್ರೀಯನ್ನು ಬದಿಗಿರಿಸಿದ ಜೈನ ಧರ್ಮವು ಉಳಿದೆಲ್ಲ ಸಂದರ್ಭಗಳಲ್ಲಿ ಪುರುಷ ಸಮಾನವಾಗಿಯೇ ಪರಿಗಣಿಸಿದೆ. ಹೀಗೆ ಹೆಣ್ಣಿನ ಸ್ಥಾನಮಾನಗಳನ್ನು ಒಪ್ಪಿಕೊಳ್ಳುವಲ್ಲಿ ಜೈನರದು ಒಂದು ಬಗೆಯ ಸಮನ್ವಯದ ದೃಷ್ಟಿಕೋನವಾಗಿದ್ದಂತೆ ತೋರುತ್ತದೆ.[೩೪]' ಎಂದು ಹೇಳುವುದು ಸರಿಯೆನಿಸುತ್ತದೆ.

ಮೂಲಾಚಾರವು ಮಹಾವೀರನ ಉಪದೇಶದಿಂದ ಪ್ರೇರಿತರಾಗಿ ಆತ್ಮೋದ್ಧಾರ ಮಾಡಿಕೊಂಡ ಸ್ತ್ರೀಯರ ಹೆಸರುಗಳನ್ನು ತಿಳಿಸುತ್ತದೆ. ಮಹಾವೀರನ ಮೊದಲ ಶಿಷ್ಯೆ ಚಂದನ ಬಾಲೆಗೆ ಜೈನ ಪರಿಸರದಲ್ಲಿ ವಿಶಿಷ್ಟ ಗೌರವವಿದೆ. ಸ್ತ್ರೀಯರು ನೋಂಪಿ ವ್ರತವನ್ನು ಆಚರಿಸುತ್ತಾ ಬಂದಿರುವುದರ ಚರಿತ್ರೆ ಮಹಾವೀರನಿಗಿಂತ ಒಂದಕ್ಕೆ ಹೋಗುತ್ತದೆ. ನೋಂಪಿಯಲ್ಲಿ ಸ್ತ್ರೀಯರದೇ ಮೇಲುಗೈ. ಮಹಾವೀರರ ಸಮವಸರಣ ಮಂಟಪದಲ್ಲಿ ಗೌತಮ ಗಣಧರರು ಚೇಳಿನಿದೇವಿ ಮತ್ತು ಶ್ರೇಣಿಕ ಮಹಾರಾಜನಿಗೆ ನೋಂಪಿಯ ಕಥೆಗಳನ್ನು ಕೇಳಿ ಅದರ ಆಚರಣೆಯ ಮಹತ್ವವನ್ನು ತಿಳಿಸಿದ್ದಾರೆಂಬ ಅಂಶವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಸ್ತ್ರೀಯರು

ಮೊದಲಿನಿಂದಲೂ ನಂದೀಶ್ವರ ನೋಂಪಿ, ಕರ್ಮಧಿರ್ಜರ ನೋಂಪಿ, ಕರ್ಮಕ್ಷಯ ನೋಂಪಿ, ಜೀವ ದಯಾಷ್ಟಮಿ ನೋಂಪಿ, ರತ್ನತ್ರಯ ನೋಂಪಿ ಹೀಗೆ ಮೊದಲಾದವುಗಳನ್ನು ಪಾಲಿಸುತ್ತಾ ಜೈನ ಸಮಾಜದಲ್ಲಿ ಜಾಗೃತಿಯನ್ನು ಕಾಪಾಡಿಕೊಂಡು ಬಂದಿದ್ದಾರೆ.[೩೫] ಸ್ತ್ರೀರತ್ನವನ್ನು ಚಕ್ರವರ್ತಿ ಹೊಂದಿರುವ ಹನ್ನೆರಡು ರತ್ನಗಳಲ್ಲಿ ಒಂದೆಂದು ಜೈನ ಧರ್ಮ ಭಾವಿಸುತ್ತದೆ. ಜಲ, ಅಗ್ನಿ, ದುರಂತಗಳಿಂದ ಸ್ತ್ರೀಯರನ್ನು ಮೊದಲು ರಕ್ಷಿಸಬೇಕೆಂಬುದು ಜೈನ ಧರ್ಮದ ನಿಯಮವಾಗಿತ್ತು.[೩೬] ಧಾರ್ಮಿಕ ರಂಗದಲ್ಲಿ ವಿಶೇಷ ಸಾಧನೆಗೈದ ಹತ್ತಾರು ಜನ ಮಹಿಳೆಯರನ್ನು ಜೈನ ಸಮಾಜವು ಗೌರವದಿಂದ ಕಾಣುತ್ತಾ ಬಂದಿರುವುದಕ್ಕೆ ಅನೇಕ ಆಧಾರಗಳಿವೆ. ಅತ್ತಿಮಬ್ಬೆ ಶಾಂತಲೆಯರು ಇದಕ್ಕೆ ಉತ್ತಮ ಉದಾಹರಣೆಯಾಗುತ್ತಾರೆ. ಇವರ ಜೊತೆ ರೇವತಿ ಮರುದೇವಿಯಂತಹ ಪೌರಾಣಿಕ ಸ್ತ್ರೀಯರನ್ನು ಜೈನ ಕಾವ್ಯಗಳಲ್ಲಿ ಕೊಂಡಾಡಲಾಗಿದೆ. ರೇವತಿಯೆನ್ನುವವಳು ಜಿನದೇವರು ಜಿನಮುನಿ, ಜೈನಶಾಸ್ತ್ರಕ್ಕಲ್ಲದೆ ಬೇರೆಯದಕ್ಕೆ ಎರಗೆ ಎಂದು ಶಪತ ಮಾಡಿರುತ್ತಾಳೆ. ಈ ಮಾತುಗಳೇ ಮುಂದೆ ಅಕ್ಕಮಹಾದೇವಿ, ಹರಿಹರ ಕವಿಗೆ ಶೈವ ನಿಷ್ಠೆಯುಂಟಾಗಲು ಪ್ರೇರಣೆ ನೀಡಿರಬಹುದಾಗಿದೆ. ದೇಶ ಕಂಡಿರುವ ಮಹಾನ್ ಮಹಿಳೆಯರಲ್ಲಿ ಅತ್ತಿಮಬ್ಬೆಯು ಒಬ್ಬಳಾಗಿದ್ದಾಳೆ. ಅತ್ತಿಮಬ್ಬೆಯನ್ನಂತೂ ಪೊನ್ನ, ರನ್ನ, ಬ್ರಹ್ಮಶಿವರಲ್ಲದೆ ಶಾಸನಗಳಲ್ಲಿಯೂ ಹೊಗಳಲಾಗಿದೆ. ಈ ಧರ್ಮದಲ್ಲಿ ಕೆಲವರಂತು ಆ ಸಮಾಜದಲ್ಲಿ ಅನುಕರನೀಯ ಹಾಗೂ ಆದರ್ಶಮಯವಾದ ಸ್ಥಾನಮಾನಗಳನ್ನು ಪಡೆದಿದ್ದ ರೆಂದು ಹೇಳಬಹುದಾಗಿದೆ.



### ೩.೫. ಇಸ್ಲಾಂ ಧರ್ಮದಲ್ಲಿ ಹೆಣ್ಣಿನ ಸ್ಥಿತಿಗತಿ

ಮಹಮದ್ ಪೈಗಂಬರ್ ಹುಟ್ಟಿದ ಕಾಲದಲ್ಲಿ ಅರಬ್ ಜನಾಂಗದವರು ಬಹಳ ಅನಕ್ಷಸ್ಥರು, ಅನಾಗರಿಕರೂ ಆಗಿದ್ದರು. ಸುಮಾರು ೫ನೇ ಶತಮಾನದಲ್ಲಿ ಒಂದು ಗುಂಪಿನ ಮೇಲೆ ದಾಳಿ ಮಾಡಿದಾಗ ಸೋತ ಗುಂಪಿನ ಹೆಂಗಸರನ್ನು ತಮ್ಮ ಭೋಗ ವಿಲಾಸಗಳಿಗೆ ಬಳಸಲು ಕರೆದೊಯ್ಯುತ್ತಿದ್ದರು. ಬೇಡವಾದಾಗ ಅವರನ್ನು ಮಾರಾಟ ಮಾಡುತ್ತಿದ್ದರು. ಆಗ ಅವರ ದೃಷ್ಟಿಯಲ್ಲಿ ಹೆಣ್ಣು ಒಂದು ಪ್ರಾಣಿಯಂತೆನಿಸಿದ್ದಳು. ಪತ್ನಿಯರು, ಉಪಪತ್ನಿಯರು ಬೇಕಾದಷ್ಟು ಜನ ಇರುತ್ತಿದ್ದರು. ಹೆಣ್ಣು ಕೂಸನ್ನು ಜೀವಂತ ಸಮಾಧಿ ಮಾಡುತ್ತಿದ್ದರು. ಗುಲಾಮ ಸ್ತ್ರೀಯನ್ನು ಭೋಗಕ್ಕೆ ಮತ್ತು ಮನೆ ಕೆಲಸಕ್ಕೆ ಉಪಯೋಗಿಸುತ್ತಿದ್ದರು. ಮಹಮದ್ ಪೈಗಂಬರ್ ಇಂತಹ ಕ್ರೂರ ಜನಾಂಗವನ್ನು ನೈತಿಕತೆಯತ್ತ ತಿರುಗಿಸಲು ತುಂಬ ಪ್ರಯತ್ನಿಸಿದರು. ಅವರು ಹೆಣ್ಣು ಕೂಸನ್ನು ಜೀವಂತ ತಡೆದರು. ಹೆಣ್ಣನ್ನು ಗೌರವಿಸುವುದು ಧರ್ಮವೆಂದು ಸಾರಿದರು. ಗಂಡಸಿಗೆ ಹೆಂಗಸಿನ ಮೇಲೆ ಅಧಿಕಾರವಿರುವಂತೆ ಹೆಂಗಸರಿಗೂ ಗಂಡಸಿನ ಮೇಲೆ ಅಧಿಕಾರವಿದೆಯೆಂದರು. ಅದೇ ಕುರಾನಿನಲ್ಲಿ ಪುರುಷರು ಸ್ತ್ರೀಯರ ಮೇಲ್ವಿಚಾರಕರು, ಪೋಷಕರು ಮತ್ತು ಪಾಲಕರು ಅವರ ಆಸ್ತಿಯಿಂದ ಸ್ತ್ರೀಯರನ್ನು ಪೋಷಿಸುತ್ತಾರೆ. ಪತ್ನಿಯರು ಆಜ್ಞೆ ಮೀರಿ ನಡೆದರೆ ಅವರನ್ನು ಬಿಟ್ಟು ದೂರವಿರಿ, ಅವಶ್ಯವಿದ್ದಾಗ ಹೊಡೆಯಿರಿ[೩೭] ಎಂದು ಹೇಳಲಾಗಿದೆ.

ಪೈಗಂಬರ್ ಕಾಲದಲ್ಲಿ ಮಹಿಳೆಯರು ಧಾರ್ಮಿಕ ವಿಧಿವಿಧಾನಗಳಲ್ಲಿ ಭಾಗವಹಿಸಬಹುದಾಗಿತ್ತು. ಗಂಡಸರು ಎದುರಿಗೆ ಬಂದರೆ ಹೆಂಗಸರು ತಲೆ ತಗ್ಗಿಸಬೇಕು. ಮುಂಗೈ, ಪಾದ ಮತ್ತು ಮುಖ ಇವುಗಳನ್ನು

ಹೊರತುಪಡಿಸಿ ಬೇರೆ ಯಾವುದೇ ಅಂಗಾಂಗಳನ್ನು ಪ್ರದರ್ಶಿಸಕೂಡದು ಎಂದು ಖುರಾನ್ ಹೇಳುತ್ತಿದೆ. (ಖುರಾನ್ ೨೪-೩೧) ಇದೇ ರೀತಿಯ ಕಟ್ಟುಪಾಡು ಸ್ಮೃತಿಯೊಂದರಲ್ಲಿ ದೊರೆಯುತ್ತದೆ. 'ಎಳೆಯ ವಯಸ್ಸಿನ ಹೆಣ್ಣು ಪರದೆಯ ಹಿಂದಿರಬೇಕು. ಗಂಡನ ಅಪ್ಪಣೆಯಿಲ್ಲದೆ ಹೊರಗೆ ಹೋಗಬಾರದು. ಹೊರಗೆ ಹೋಗಲೇಬೇಕಾದಾಗ ಅವಳು ಸರಿಯಾಗಿ ಬಟ್ಟೆಗಳನ್ನು ಧರಿಸಬೇಕು. ಜೋರಾಗಿ ನಡೆಯಬಾರದು. ದೇಹದ ಯಾವ ಭಾಗವು ಕಾಣದಂತೆ ಎಚ್ಚರದಿಂದ ಮುಚ್ಚಿಕೊಂಡಿರಬೇಕು' ಎಂದಿದೆ. ಈ ನಿಯಮಗಳನ್ನು ರೂಪಿಸಿದ ಮನಸ್ಸುಗಳ ಸ್ವಾರ್ಥದ ಹಿಂದೆ ದೊಡ್ಡ ಭಯವೇ ಅಡಗಿದೆ. ಹೆಣ್ಣು ಮನೆ ಬಿಟ್ಟು ಹೊರ ಹೋದರೆ, ಹೊರ ಜಗತ್ತಿನ ಹೊರ ಜನರ ಆಕರ್ಷಣೆಗೆ ಒಳಗಾಗಿ ಸಂಸಾರಗಳು ವಿಘಟನೆಗೊಳ್ಳಬಹುದೆಂಬ ಆತಂಕದಿಂದಲೇ ಹೆಣ್ಣನ್ನು ನಾಲ್ಕು ಗೋಡೆಯ ಮಧ್ಯೆ ಕೂಡಿಹಾಕುವ ಪ್ರಯತ್ನ ನಡೆದಿರಬಹುದೆನಿಸುತ್ತದೆ.

ಇಸ್ಲಾಂ ಧರ್ಮ ವಿಧವೆಯರಿಗೆ ಉತ್ತಮ ಸ್ಥಾನ ನೀಡಿದೆ. ವಿಚ್ಛೇದನ ಪಡೆದವರಿಗಿಂತ ಸುಲಭವಾಗಿ ಚಿಕ್ಕ ಪ್ರಾಯದ ಮಕ್ಕಳಿಲ್ಲದ ವಿಧವೆಗೆ ವರ ದೊರೆಯುತ್ತಾನೆ. ಮಹಮದ್ ಪೈಗಂಬರ್ ತಮ್ಮ ೨೫ನೇ ವಯಸ್ಸಿನಲ್ಲಿ ಹಿಂದೆ ಎರಡು ಬಾರಿ ವಿವಾಹವಾಗಿ ಒಂದು ಮಗುವಿನ ತಾಯಿಯ ಆಗಿದ್ದು ತನಗಿಂತ ೧೫ ವರ್ಷ ಹಿರಿಯಳಾದ ಖತೀಜಾ ಬೀಬಿಯನ್ನು ವಿವಾಹವಾಗಿದ್ದರು.[೨೮] ವಿಧವೆ ಇಲ್ಲಿ ಅಪಶಕುನವಲ್ಲ, ಕಡ್ಡಾಯ ದಾನ ಮಾಡುವಾಗ ಆಕೆಗೆ ಆದ್ಯತೆಯನ್ನು ನೀಡಲಾಗುತ್ತದೆ. ವಿಧವೆಗೆ ದಾನ ಮಾಡಿದರೆ ಪುಣ್ಯ ಬರುತ್ತದೆ ಎಂದು ಹೇಳಲಾಗಿದೆ. ಈ ಧರ್ಮದಲ್ಲಿ ವಿಧವೆಗೆ ಬಹಿಷ್ಕಾರವಿಲ್ಲ. ವಿಧವಾ ಪುನರ್‌ವಿವಾಹವನ್ನು ಇಸ್ಲಾಂ ಧರ್ಮ ಎತ್ತಿ ಹಿಡಿದಿದೆ. ತಾಯಿಗೆ ಅತ್ಯುತ್ತಮ ಸ್ಥಾನ ನೀಡಲಾಗಿದೆ. ಸ್ತ್ರೀ ಪುರುಷನ ಅಧೀನದಲ್ಲಿರಬೇಕೆಂಬ ನಿಯಮ ಇಲ್ಲಿಯೂ ಇದೆ. ಧರ್ಮದ ಹಲವಾರು ನಿಯಮಗಳು ಸ್ತ್ರೀ ಪ್ರಾಧಾನ್ಯತೆಯನ್ನು ಎತ್ತಿ ಹಿಡಿದು ಸಮಾನತೆಯನ್ನು ಪ್ರತಿಪಾದಿಸಿದರೆ ಇನ್ನು ಕೆಲವು ನಿಯಮಗಳು ಅಧೀನತೆಯನ್ನು ಪ್ರತಿಪಾದಿಸುತ್ತಾ ಸ್ತ್ರೀಯರನ್ನು ಪರಾಧೀನಳನ್ನಾಗಿ ಮಾಡಿವೆ.

### ೩.೬. ವಚನ ಸಾಹಿತ್ಯದಲ್ಲಿ

ಹನ್ನೆರಡನೆಯ ಶತಮಾನದಲ್ಲಿ ಉತ್ತರ ಕರ್ನಾಟಕದ ಕಲ್ಯಾಣದಲ್ಲಿ ನಡೆದ ವೀರಶೈವ ಚಳುವಳಿ ಹಲವು ಬದಲಾವಣೆಗಳನ್ನು ತಂದಿತು. ಇದು ಬಾಹ್ಯ ಚಹರೆಯ ಹೆಣ್ಣು-ಗಂಡೆಂಬ ವ್ಯತ್ಯಾಸಗಳನ್ನು ನಿರಾಕರಿಸಿ, ಆತ್ಮದ ನೆಲೆಯಲ್ಲಿ ಎಲ್ಲರೂ ಸಮಾನರೆಂದು ಸಾರಿತು. ಜಗತ್ತೆಲ್ಲಾ ಹೆಣ್ಣು ಶಿವನೊಬ್ಬನೇ ಗಂಡು, ಇವೆರಡರ ಐಕ್ಯದ ಸ್ಥಿತಿಯೇ ಕೈವಲ್ಯ, ಬಯಲು ಅಥವಾ ಶೂನ್ಯಸ್ಥಿತಿ ಎಂಬ ತಾರ್ಕಿಕ ನಂಬಿಕೆಯಿಂದ ಈ ಧರ್ಮ ಹುಟ್ಟಿಕೊಂಡಿತು. ಇದು ಭಕ್ತಿ ಆಂದೋಲನದ ರೂಪ ತಳೆದು ಜಾತಿ, ವರ್ಗ, ಲಿಂಗ ಭೇಧಗಳನ್ನು ನಿರಾಕರಿಸಿ ಸ್ತ್ರೀಯರಿಗೂ ಶೂದ್ರರಿಗೂ ಮೋಕ್ಷದ ಅರ್ಹತೆಯನ್ನು ಎತ್ತಿ ಹಿಡಿಯಿತು. ಈ ಆಂದೋಲನದ ಸಂದರ್ಭದಲ್ಲಿ ಶಿವಶರಣೆಯರಾಗಿ ಆಧ್ಯಾತ್ಮಿಕವಾಗಿ ಪುರುಷ ಸಮಾನ ಅರ್ಹತೆ ಮಾನ್ಯತೆಯನ್ನು ಪಡೆದಿದ್ದ ಸ್ತ್ರೀಯರು. ತಮ್ಮ ಆಧ್ಯಾತ್ಮಿಕ ಅನುಭವಕ್ಕೆ ವಚನಗಳ ರೂಪದಲ್ಲಿ ಅಭಿವ್ಯಕ್ತಿಯನ್ನು ನೀಡಿದ್ದು ಜಾಗತಿಕ ಧಾರ್ಮಿಕ ಇತಿಹಾಸದಲ್ಲಿ ಮಹತ್ವದ ಸಂಗತಿಯಾಗಿದೆ. ಸ್ತ್ರೀ ಪುರುಷರನ್ನು ಆತ್ಮದ ನೆಲೆಯಿಂದ ಸಮಾನರೆಂದು ನೋಡುವ ವಿಚಾರಗಳನ್ನು ಕೆಲವು ವಚನಕಾರರು ಪ್ರತಿಪಾದಿಸಿದ್ದಾರೆ. ಜೇಡರ ದಾಸಿಮಯ್ಯ, ಆದಯ್ಯ,

ಗೊಗ್ಗವ್ವೆ, ಸತ್ಯಕ್ಕ, ಆಯ್ದಕ್ಕಿ ಲಕ್ಕಮ್ಮ ಮೊದಲಾದವರು ಹೆಣ್ಣು ಗಂಡನ್ನು ಕುರಿತಂತೆ ಒಂದು ಸೂತ್ರಪ್ರಾಯವಾದ ತತ್ವವನ್ನು ಪ್ರಕಟಿಸಿದ್ದಾರೆ. ಇವರ ನಡುವೆ ಅಲ್ಪಸ್ವಲ್ಪ ವ್ಯತ್ಯಾಸಗಳು, ಕೆಲವು ವಿವರಣೆಗಳು, ವಿಸ್ತರಣೆಗಳು ಇದ್ದರೂ ಇವರೆಲ್ಲರ ವಿಚಾರಗಳನ್ನು ಜೇಡರ ದಾಸಿಮಯ್ಯನ ಈ ಕೆಳಗಿನ ವಚನ ಪ್ರತಿನಿಧಿಸುತ್ತದೆ.

ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ಒಳಗೆ ಸುಳಿವಾತ್ಮನು ಗಂಡೂ ಅಲ್ಲ
ಹೆಣ್ಣು ಅಲ್ಲ ಕಾಣಾ ರಾಮನಾಥ[೩೯]

ಸೃಷ್ಟಿ ಮತ್ತು ಸೃಷ್ಟಿಕರ್ತನ ಬಗೆಗೆ ಶಿವಶರಣರು ಹೊಂದಿದ್ದ ಗಾಢವಾದ ತಾತ್ವಿಕ ನಂಬಿಕೆಯು ಶಿವನೊಬ್ಬನೆ ಕರ್ತೃ, ಅವನೊಬ್ಬನೆ ಪುರುಷ, ಅವನ ಸೃಷ್ಟಿಯೆಲ್ಲವೂ ಹೆಣ್ಣಿನ ರೂಪದ್ದೆಂದು ಭಾವಿಸುತ್ತದೆ. 'ಶರಣಸತಿ–ಲಿಂಗಪತಿ' ಎಂಬ ಶರಣರ ನಂಬಿಕೆ ಇದನ್ನೇ ಪ್ರತಿನಿಧಿಸುವಂತಿದೆ. ಈ ನಂಬಿಕೆಯ ಪ್ರಕಾರ ಸೃಷ್ಟಿಯಲ್ಲಿರುವ ಪುರುಷನು ದೇವನ ದೃಷ್ಟಿಯಿಂದ ಹೆಣ್ಣೆಂಬ ಭಾವನೆ ಮೂಡುತ್ತದೆ. ಆದ್ದರಿಂದ ಹೆಣ್ಣು ಗಂಡು ಎಂಬ ಲೌಕಿಕ ಪರಿಕಲ್ಪನೆಗಳು ಸಹಜವಾಗಿ ಅರ್ಥ ಕಳೆದುಕೊಳ್ಳುತ್ತವೆ. ಇದೇ ನಿರ್ಲಿಂಗೀಯ ನೆಲೆಯಿಂದ ಅಕ್ಕಮಹಾದೇವಿ ಲೋಕದ ಗಂಡರ ಸಂಬಂಧವನ್ನು ನಿರಾಕರಿಸುತ್ತಾಳೆ. ಸಾಮಾನ್ಯ ಗೃಹಸ್ಥ ಜೀವನಕ್ಕೆ ಹೊಂದಿಕೊಂಡ ಶಿವಶರಣೆಯರ ತಳಮಳದ ವಿವಿಧ ಸ್ತರಗಳನ್ನು ನೀಲಾಲೋಚನೆಯ ಈ ವಚನ ಚಿತ್ರಿಸುತ್ತದೆ.

ಏಕೆನ್ನ ಹುಟ್ಟಿಸಿದೆಯಯ್ಯಾ ಹೆಣ್ಣು ಜನ್ಮದಲ್ಲಿ ಪುಣ್ಯವಿಲ್ಲದ ಪಾಪಿಯ
ಅನು ಇಹಪರಕೆ ದೂರಳಯ್ಯ
ಎನ್ನನಾಮ ಹೆಣ್ಣು ನಾಮವಲ್ಲಯ್ಯ
ನಾನು ಸಿರಿಯಿದ್ದ ವಸ್ತುವಿನ ವಧುವಾದ ಬಳಿಕ
ಸಂಗಯ್ಯನಲ್ಲಿ ಬಸವನ ವಧುವಾದ ಕಾರಣ
ಎನಗೆ ಹೆಣ್ಣು ನಾಮವಿಲ್ಲವಯ್ಯ[೪೦]

ಹೊನ್ನು, ಹೆಣ್ಣು, ಮಣ್ಣುಗಳನ್ನು ಮಾಯೆಯೆಂದು, ಸಾಧಕ ಪುರುಷನ ದಾರಿಗೆ ಅಡ್ಡಿಗಳೆಂದು ವಿರಕ್ತ ಧರ್ಮವು ಸಾರಿದ್ದು, ವಚನ ಯುಗದಲ್ಲೂ ಈ ಪುರುಷ ಸಮಾನ ಸಾಧನಗೆ ಅರ್ಹರೆಂದು ಸ್ವೀಕರಿಸುವುದರ ನೆಲೆಯಿಂದ ಹೆಣ್ಣು ಮಾಯೆಯೆಂಬುದು ಪ್ರಶ್ನಾರ್ಹವೇ ಆಗುತ್ತದೆ. ಆದ್ದರಿಂದ ಶಿವಶರಣರಲ್ಲಿ ಉನ್ನತ ಸ್ಥಾನದಲ್ಲಿದ್ದ ಅಲ್ಲಮಪ್ರಭುವು 'ಮಾಯೆ'ಯನ್ನು ಕುರಿತು ನೀಡಿದ ವಿವರಣೆ ವಿಶಿಷ್ಟವೆನಿಸುತ್ತದೆ. ಹೆಣ್ಣು, ಮಣ್ಣು, ಹೊನ್ನುಗಳು ಸ್ವತಃ ಕೇಡಿನ ಮೂಲಗಳಲ್ಲಿ, ನಿಜವಾದ ಆಪತ್ತಿರುವುದು ಮನಸ್ಸಿನಲ್ಲಿ ಎಂಬುದನ್ನು ಅಲ್ಲಮಪ್ರಭುವಿನ ಪ್ರಸಿದ್ಧ ವಚನ ಸೂಚಿಸುತ್ತದೆ.

ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ

ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರ[೪೧]

ಈ ವಿವರಣೆಯಿಂದ ಮಾಯೆಯ ನೆಲೆ ಮೋಹಗೊಳಿಸುವ ವಸ್ತುವಿನ ನೆಲೆಯಿಂದ, ನೋಡುವ ವ್ಯಕ್ತಿಯ ಮನಸ್ಸಿನ ನೆಲೆಗೆ ರವಾನೆಯಾಗುತ್ತದೆ.[೪೨] ಅಕ್ಕಮಹಾದೇವಿಯ ಪ್ರಕಾರ ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡುವುದು, ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡುವುದು, ಸ್ತ್ರೀ ಪುರುಷರಿಬ್ಬರಿಗೂ ಪರಸ್ಪರರನ್ನು ಕುರಿತ ಅಭಿಮಾನವಾಗಿ ಮಾಯೆ ಕಾಡುತ್ತದೆಂದು ಈ ಸೆಳೆತದಿಂದ ಪಾರಾಗುವುದು ವಿರಕ್ತರಿಗೂ ಸುಲಭವಲ್ಲವೆಂದು ಅಕ್ಕಮಹಾದೇವಿ ಸೂಚಿಸುತ್ತಾಳೆ.

ಬಿಟ್ಟೆನೆಂದಡೆ ಬಿಡದೀ ಮಾಯೆ ಬಿಡದಿದ್ದಡೆ ಬೆಂಬತ್ತಿತ್ತು ಮಾಯೆ
ಯೋಗಿಗೆ ಯೋಗಿಣಿಯಾಯಿತ್ತು ಮಾಯೆ
ಸವಣಂಗೆ ಸವಣಿಯಾಯಿತ್ತು ಮಾಯೆ
ಯತಿಗೆ ಪರಾಕಿಯಾಯಿತ್ತು ಮಾಯೆ[೪೩]

ಇದರ ಜೊತೆಗೆ 'ಸತಿ, ಸುತ, ಪಿತರೆಲ್ಲರೂ ಮಾಯೆ, ಹೆತ್ತ ತಾಯಿ, ಮಗಳು ಮಾಯೆ' ಎನ್ನುವವರು ಇದ್ದಾರೆ. ಪಾತಿವ್ರತ್ಯಕ್ಕೆ ಸಂಬಂಧಿಸಿದಂತೆ ವೈದಿಕ ಧರ್ಮದ ಸ್ಮೃತಿಕಾರರ  ಹೇಳಿಕೆಯನ್ನು ಹೋಲುವ ಚೆನ್ನಬಸವಣ್ಣ ವಚನ ಈ ರೀತಿಯಿದೆ.

ಜಂಗಮ ಭಕ್ತಿ ಗಂಡನುಳ್ಳ ಸಜ್ಜನ ಸತಿಯಂತಿರಬೇಕು
ಹೊಯ್ದಡೆ ಬಯ್ದಡೆ ಜರೆದಡೆ ಕೋಪಿಸಿದಡೆ
ನಿಂದಿಸಿದಡೆ ಅಳಲಿಸಿದಡೆ ಬಳಲಿಸಿದಡೆ ಪುರುಡಿಸಿದಡೆ
ಇಂತಿವು ಮೊದಲಾಗಿ ಏನೊಂದು ಮಾಡಿದಡೆಯೂ
ಮನದಲ್ಲಿ ಮರುಗಿದಡೆ ಇದಿರುತ್ತರವ ಕೊಟ್ಟಡೆ
ಆ ಸಜ್ಜನ ಸತಿಯ ಗುಣಕ್ಕೆ ಕೊರತೆಯಹುದು
ಆ ಪುರುಷನ ದೈವವೆಂದರಿದು ಆತನ ಗುಣವ ನೋಡದೆ
ತನ್ನ ಗುಣವ ಬಿಡದೆ ಇರ್ದಡೆ ಪತಿವ್ರತೆಯೆನಿಸುವಳು[೪೪]

ಇಷ್ಟೆ ಅಲ್ಲದೆ ದೇವನಾಗುವ ಅವಕಾಶ ಕೇವಲ ಪುರುಷನಿಗಷ್ಟೇ ಸೀಮಿತವಲ್ಲ ಹೆಣ್ಣಿಗೂ ಇದೆಂಬುದನ್ನು ವಚನಕಾರರು ಮೊದಲಿಗೆ ತಿಳಿಸಿಕೊಟ್ಟರು. ಇದಕ್ಕೂ ಮೊದಲು ಭಾರತೀಯ ಧರ್ಮಗಳು ಹೆಣ್ಣನ್ನು ಕೇವಲ ಮನುಷ್ಯ ಮಟ್ಟದಲ್ಲಿಯೇ ಉಳಿಯುವಂತೆ ಮಾಡಿದ್ದವು. ಇದರಿಂದ ಔನ್ನತ್ಯ ಸಾಧನೆ ದೈವತ್ವ ಸಾಧನೆ ಕನಸಿನ ಮಾತೆಂಬ ತೀರ್ಮಾನಕ್ಕೆ ಬಂದ ಹೆಣ್ಣು ಪ್ರಾಥಮಿಕ ಹಂತದಲ್ಲಿಯೇ ಆತ್ಮೋದ್ಧಾರದ ಹಂಬಲವನ್ನು ಬಿಟ್ಟುಬಿಟ್ಟಳು. ಸಮಾನತೆಯ ತತ್ವವನ್ನು ಒಪ್ಪಿ ಪ್ರತಿಪಾದಿಸುತ್ತ ಬಂದ ವಚನಕಾರರು ಗಂಡಿಗೆ ದೇವನಾಗುವ ಸಾಧ್ಯತೆಯಿರುವಾಗ ಹೆಣ್ಣಿಗೇಕಿಲ್ಲ ಎಂಬ ಮೂಲಭೂತ ಪ್ರಶ್ನೆಯೆನ್ನುತ್ತಿದ್ದರು. ಅದನ್ನು ಪ್ರತಿಪಾದಿಸುವಂತೆ 'ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಹೆಣ್ಣಿನಲ್ಲಿ ದೈವತ್ತ್ವವನ್ನು ಕಾಣಲು ಪ್ರಶ್ನಿಸಿದರು.

ಹೆಣ್ಣಿನ ನೈಸರ್ಗಿಕ ಸಹಜ ಕ್ರಿಯೆಗಳಾದ ಹೆರಿಗೆ ಮತ್ತು ಋತುಚಕ್ರ ಅಥವಾ ಮುಟ್ಟಾಗುವಿಕೆಗೆ ಅಪವಿತ್ರದ ಪಟ್ಟ ಕಟ್ಟಿ ಪುರುಷ ಪ್ರಧಾನ ಸಮಾಜವು ಅವಳನ್ನು ಶೂದ್ರರಿಗಿಂತಲೂ, ಅಸ್ಪೃಶ್ಯರಿಗಿಂತಲೂ ಕೀಳಾಗಿ ಕಾಣುತ್ತಿದ್ದಿತು. ಅವಳಲ್ಲಿ ಈ ಕೀಳುಭಾವನೆ ಬಲವಾಗಿ ಬೇರೂರುವಂತೆ ಮಾಡಿ ಜೀವನದ ಸರ್ವಕ್ಷೇತ್ರಗಳಿಂದಲೂ ಅವಳು ಹೊರಗುಳಿಯುವಂತೆ ಮಾಡಲಾಯಿತು. ವೇದೋಪನಿಷತ್ತುವಾಚನ, ಶ್ರವಣಗಳಿಗೂ ಬಹಿಷ್ಕಾರ ಹೇರಿ ಅಜ್ಞಾನದ ಕೂಪಕ್ಕೆ ತಳ್ಳಲಾಗಿತ್ತು. ಆದರೆ ವಚನಕಾರರು 'ಸತಿ ಭಕ್ತೆಯಾದರೆ ಹೊಲೆಗಂಜಲಾಗದು' ಎಂದು ಸಾರುವುದರ ಮೂಲಕ ಹೆಣ್ಣನ್ನು ಅಪವಿತ್ರಳೆಂಬ ಭ್ರಾಂತಿಯಿಂದ ಹೊರತಂದರು. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಗಂಡಿನ ದಬ್ಬಾಳಿಕೆಗೆ, ಕಾಮ ಲಾಲಸೆಗೆ ಬಲಿಯಾಗುತ್ತಿರುವುದು ಸಹಜ ಸಂಗತಿಯಾಗಿದೆ. ಇದು ಹೆಣ್ಣಿನ ಹಾಗೂ ಸಮಾಜದ ನೆಮ್ಮದಿ ಹಾಗೂ ನೈತಿಕತೆಯ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ. ಆದ್ದರಿಂದ ಅವಿವಾಹಿತೆ, ವಿವಾಹಿತೆ, ವಿಧವೆಯಂತಹ ಹೆಣ್ಣುಗಳ ಶೀಲ ರಕ್ಷಣೆಗಾಗಿ ವಚನಕಾರರು ತಮ್ಮ ವಚನಗಳಲ್ಲಿ ಎಚ್ಚರಿಕೆ ನೀಡಿರುವುದನ್ನು ಕಾಣಬಹುದಾಗಿದೆ.

'ಮೊಲೆಯೆಂಬ ಭಾವತಪ್ಪಿ ಅಪ್ಪಿದವರ ತಲೆಕೊಂಬ ನಮ್ಮ ಕೂಡಲ ಸಂಗಮದೇವ, ಅನ್ಯವಧುವೆಂಬುದು ನಿಮ್ಮ ರುಣಿವಾಸ; ಪರವಧುವನು ಮಹಾದೇವಿಯೆಂಬ' ಎಂದು ಮೊದಲಾಗಿ ಬಸವಣ್ಣನವರು ಹೆಣ್ಣಿನ ಬಗೆಗೆ ಗೌರವಪೂರ್ವಕವಾಗಿಯೇ ಹೇಳಿದ್ದಾರೆ. ವಿಜಯನಗರ ಸ್ಥಾಪನೆಯ ಮೂಲಕ ಹಿಂದೂ ಧರ್ಮ ದೊಡ್ಡ ಪ್ರಮಾಣದಲ್ಲಿ ಪುನರುಜ್ಜೀವನಗೊಂಡಿತು. ವಿಜಯನಗರ ಸಾಮ್ರಾಜ್ಯದ ದೊರೆಗಳ ಆಳ್ವಿಕೆಯ ಕಾಲವನ್ನು ದಾಸಸಾಹಿತ್ಯದ ಸುವರ್ಣಯುಗವೆಂದು ಕರೆಯಲಾಗಿದೆ. ಪುರಂದರದಾಸ, ಕನಕದಾಸರ ಕಾಲವಂತೂ ಅಂದಿನ ದಾಸ ಸಾಹಿತ್ಯದ ಮಹೋನ್ನತ ಕಾಲ. ಇವರ ಕೀರ್ತನೆಗಳು ಅಂದಿನ ಕಾಲದ ಧಾರ್ಮಿಕ ಕ್ಷೋಭೆ, ಸಾಮಾಜಿಕ ಅಶಾಂತಿ, ಪರಸ್ಪರ ವೈಷಮ್ಯ ಮೊದಲಾದವುಗಳನ್ನು ವಿಶೇಷವಾಗಿ ಚಿತ್ರಿಸುತ್ತವೆ. ಆ ಕಾಲದ ಹರಿದಾಸರ ಕೃತಿಗಳಲ್ಲಿ ಕಂಡುಬರುವ ಅನೇಕ ಉದ್ಗಾರಗಳು ಆಗಿನ ಜನಜೀವನದ ಪ್ರತಿಬಿಂಬವೆನಿಸಿವೆ. ಸ್ವತಃ ಪುರಂದರದಾಸರೇ ಅಧರ್ಮದಿಂದ ನಡೆಯುತ್ತಿದ್ದ ಜಿಪುಣರಾಗಿದ್ದು, ತಮ್ಮ ಹೆಂಡತಿಯ ಮೂಗುತಿಯ ಪ್ರಸಂಗದಿಂದ ಅವರಿಗೆ ಜ್ಞಾನೋದಯವಾಯಿತೆಂಬುದು ತಿಳಿದ ಸತ್ಯವೇ ಆಗಿದೆ. ಅವರು ತಮ್ಮ ಹೆಂಡತಿಯ ನಡವಳಿಕೆಯಿಂದಲೇ ಧರ್ಮಮಾರ್ಗಕ್ಕೆ ತಿರುಗಿ ತಮ್ಮ ಸಂಪತ್ತನ್ನೆಲ್ಲಾ ತೊರೆದು ಭಕ್ತಿಮಾರ್ಗಕ್ಕೆ ಪ್ರವೇಶ ಮಾಡಿದ್ದನ್ನು ದಾಸರೇ ತಮ್ಮ ಕೀರ್ತನೆಯಲ್ಲಿ ತಿಳಿಸಿದ್ದಾರೆ. ಆದದ್ದೆಲ್ಲಾ ಒಳಿತೇ ಆಯಿತು ನಮ್ಮ ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು' ಎಂಬ ಕೀರ್ತನೆಯಲ್ಲಿ 'ಹೆಂಡತಿ ಸಂತತಿ ಸಾವಿರವಾಗಲಿ' ಎಂದು ತಮ್ಮ ಹೆಂಡತಿಯನ್ನು ಹೊಗಳಿ ಹರಸಿರುವುದಲ್ಲದೆ ಅಂತಹ ಸಾಧ್ವಿಮಣಿಗಳ ಸಂಖ್ಯೆ ಹೆಚ್ಚಲಿ ಎಂದೂ ಆಶಿಸಿದ್ದಾರೆ. ಮುಸುರೆ ತೊಳೆಯಬೇಕು, ಮನದ ಮುಸುರೆ ತೊಳೆಯಬೇಕು ಎಂದು ಆತ್ಮಶುದ್ಧಿಯ ಬಗೆಗೆ, 'ಗುಸು ಗುಸು ಬಿಡಬೇಕು' ಎಂಬ ಚಾಡಿಕೋರತನದ ವಿರುದ್ಧ ಗುಡುಗಿದ್ದಾರೆ. 'ಇಬ್ಬರ ಹೆಂಡಿರ ಸುಖವ ಇನ್ನು ಕಂಡೆನಯ್ಯ' 'ಆಜ್ಞೆಯಿಂದಾಳಬೇಕಣ್ಣ', 'ನಂಬಬೇಡ ನಾರಿಯ', 'ಸತಿಗೆ ಸ್ವಾತಂತ್ರ್ಯವ ಕೊಡದಿರಿ', 'ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ' ಮೊದಲಾಗಿ ಪುರುಷಕೇಂದ್ರಿತ ನೆಲೆಗಟ್ಟಿನಿಂದಲೇ ಹೆಣ್ಣಿಗೆ ಬುದ್ಧಿವಾದವನ್ನು ಹೇಳಲಾಗಿದೆ.

ಮದುವೆಯಾಗಿ ಹೆಂಡತಿಯ ಮನೆಯಲ್ಲಿ ಕಾಲ ಕಳೆಯುವ ಗಂಡಿನ ಮಾನ ಹೆಣ್ಣು ಕೊಟ್ಟತ್ತೆ ಮಾವಂದಿರ ಮನೆಯಲ್ಲಿ ಸೇರಿಯಿರುವವರೆ ಎಲೆ ಮನುಜ' ಎಂಬ ಕೀರ್ತನೆಯಲ್ಲಿ ತೆರೆದಿಟ್ಟಿದ್ದಾರೆ. ಹಾಗೆಯೇ 'ಮೂರ್ಖರಾದರು ಜನರು ಲೋಕದೊಳಗೆ' ಎಂಬ ಕೀರ್ತನೆಯಲ್ಲಿ ಮೂರ್ಖರ ಪಟ್ಟಿಯನ್ನು ನೀಡಿದ್ದಾರೆ. 'ಶರಣಸತಿ ಲಿಂಗಪತಿ' ಎಂಬುದು ಭಾರತೀಯರ ಭಕ್ತಿಯಾದರೆ ಇಸ್ಲಾಂ ಧರ್ಮದ ಸೂಫಿ ಪಂಥದಲ್ಲಿ ಇದಕ್ಕೆ ವ್ಯತಿರಿಕ್ತವಾಗಿದೆ. ಸೂಫೀ ಪಂಥದ ಪರಮಾತ್ಮ ಹೆಣ್ಣು ಆತ್ಮ ಗಂಡು. ಆ ಹೆಣ್ಣಿನ ಅಲೌಕಿಕ ಸೌಂದರ್ಯದ ವರ್ಣನೆ, ವಿಶ್ವಮಾಪಕ ವಿರಹ, ಮಾದಕ ಮಿಲನಗಳ ವರ್ಣನೆ ಫಾರಸೀ ಸಾಹಿತ್ಯದ ತವನಿಧಿ, ದೇವರನ್ನು ಹೆಣ್ಣಿನ ರೂಪದಲ್ಲಿ ಪುರಂದರದಾಸರು ಕೂಡಿದ್ದಾರೆ. ಮೋಹಿನಿಯ ಅವತಾರದ ಪೌರಾಣಿಕ ಕಲ್ಪನೆಯನ್ನೇ ಚೆಲುವಿನ ಕಣ್ಣಿನಿಂದ ಪುರಂದರದಾಸರು ನೋಡಿದ್ದಾರೆ.

ಇಂಥ ಹೆಣ್ಣಿನ ನಾನೆಲ್ಲೂ ಕಾಣೆನೊ
ಹೊಂತಕಾರಿ ಕಾಣಿರೋ ಸಂತತ ಸುರರಿಗೆ ಅಮೃತವಣೆನುಣಿಸಿದ
ಪಂಕ್ತಿಯೊಳಗೆ ಪರವಂಚನೆ ಮಾಡಿದ[೪೫]

ಎಂಬ ಪಲ್ಲವಿಯನ್ನು ಹೊಂದಿದ ಕೀರ್ತನೆಯಲ್ಲಿ ವಿವರವಾಗಿ ಮೂಡಿಬಂದಿದೆ. ಹೆಣ್ಣುಗಳನ್ನು, ಕಾಮ, ಅಸತ್ಯಗಳನ್ನೆಲ್ಲಾ ಒಂದು ಮಾಡಿ ಸೃಷ್ಟಿಸಲಾಗಿದೆ. ಆದ್ದರಿಂದ ದಾಸರು ನಾರಿಯರನ್ನು ನಂಬಬೇಡಿರೆಂದು ಗಂಡಸರಿಗೆ ಸಲಹೆ ನೀಡಿದ್ದಾರೆ. ಅಲ್ಲದೆ ಹೆಣ್ಣನ್ನು ನಂಬಬಾರದು, ಅವಳ ಮಾತು ಕೇಳಬಾರದು. ಅವಳನ್ನು ಮನೆಯಿಂದಾಚೆಗೆ ಬಿಡಬಾರದು ಎಂದೆಲ್ಲಾ ಕಟ್ಟುಪಾಡುಗಳನ್ನು ಅವಳ ಮೇಲೆ ಹೇರಲಾಗಿದೆ. ಹೆಣ್ಣಿನ ಮನ-ಗುಣ ತಿಳಿಯುವುದು ಹೇಗೆ ಕಷ್ಟವೋ ಗಂಡಿನ ಗುಣ ಮನ ತಿಳಿಯುವುದು ಕಷ್ಟವೇ; ಆದರೆ ಯಾರೂ ಇದರ ಬಗೆಗೆ ಪ್ರಸ್ತಾಪ ಮಾಡದಿರುವುದು ಆಶ್ಚರ್ಯಕರವಾಗಿದೆ. ಸಮಾನತೆಯಿಲ್ಲದ ನಮ್ಮ ಸಮಾಜದಲ್ಲಿ ವಿಧುರನಿಗೆ ಇರುವಷ್ಟು ಸ್ವಾತಂತ್ರ್ಯ ಸವಲತ್ತುಗಳು ವಿಧವೆಗೆ ಇಲ್ಲವಾಗಿವೆ. ಹೆಂಡತಿ ಸತ್ತುಹೋದರೆ ಗಂಡು ತಿಂಗಳು, ವರ್ಷದೊಳಗೆ ಪುನರ್‌ವಿವಾಹವಾಗುವ ವಿಪುಲ ಅವಕಾಶಗಳಿವೆ. ಆದರೆ ಗಂಡನನ್ನು ಕಳೆದುಕೊಂಡವಳಿಗೆ ಜೀವನಪರ್ಯಂತ ವಿಧವೆಯೆನ್ನುವ ಪಟ್ಟ ಹೊತ್ತುಕೊಂಡು ಮನೆಯ ಮೂಲೆಯಲ್ಲಿ ಕಾಲ ಕಳೆಯಬೇಕಾದ ಅನಿವಾರ್ಯ ಪರಿಸ್ಥಿತಿಯನ್ನು ಪುರುಷ ಪ್ರಧಾನ ಸಮಾಜ ನಿರ್ಮಿಸಿದೆ. ಇಷ್ಟೆಲ್ಲಾ ನೋವುಗಳನ್ನು ಸಹಿಸಿಕೊಂಡು ಬಂದರೂ ಅಂತಹವಳನ್ನು ಸಮಾಜ ವಿಕೃತವಾಗಿ ನೋಡುತ್ತಿದ್ದದನ್ನು ಕಾಣಬಹುದಾಗಿದೆ.

**ಜನಪದ ಗೀತೆಗಳಲ್ಲಿ ಹೆಣ್ಣು:** ಭಾಷೆ ರೂಪುಗೊಳ್ಳುವ ಮೊದಲೇ ಭಾವನೆಗಳು ರೂಪುಗೊಂಡಿರುತ್ತವೆಂಬುದು ಎಲ್ಲರೂ ನಂಬಬಹುದಾದ ಮಾತಾಗಿದೆ. ಭಾಷೆ ಬರವಣಿಗೆಯ ರೂಪುತಾಳುವುದಕ್ಕಿಂತ ಪೂರ್ವದಲ್ಲಿಯೇ ತಮ್ಮ ಭಾವನೆಗಳನ್ನು ಜನಪದರು ಮೌಖಿಕವಾಗಿ ವ್ಯಕ್ತಪಡಿಸುತ್ತಿದ್ದಿರಬೇಕು. ಇವು ಒಬ್ಬರಿಂದೊಬ್ಬರಿಗೆ ಸಾಗಿ ಬಂದು ಯಾವುದೋ ಹಂತದಲ್ಲಿ ಗ್ರಂಥಸ್ಥವಾಗಿವೆ. ಇಂತಹ ಕನ್ನಡ ಜನಪದ ಕಾವ್ಯ ಹೆಣ್ಣಿನ ಬದುಕಿನ ವಿವಿಧ ಮುಖಗಳನ್ನು ಪರಿಚಯಿಸಿದರೂ ಸಮಗ್ರ ನೋಟವನ್ನು ನಮಗೆ ಕಾಣಸಿಗದು.

**ತ್ರಿಪದಿಗಳಲ್ಲಿ ಹೆಣ್ಣು:** ಕನ್ನಡ ಸಾಹಿತ್ಯ ಬರವಣಿಗೆಗೆ ಇಳಿಯದ ಮೊದಲೇ ಎಷ್ಟೋ ತಲೆಮಾರುಗಳ ಹಿಂದೆಯೇ ತ್ರಿಪದಿ ಕನ್ನಡ ಜನತೆಯ ಕಂಠದಲ್ಲಿ ಜೀವಸ್ವರವಾಗಿ ಹುಟ್ಟಿ ಅವರ ಭಕ್ತಿ, ಭಾವ, ಆಶೆ, ಆಕಾಂಕ್ಷೆ, ಆಚಾರ, ವಿಚಾರ, ನೋವು, ನಲಿವುಗಳನ್ನು ವ್ಯಕ್ತಪಡಿಸಿದೆ. ತ್ರಿಪದಿಗಳು ಬಹುಪಾಲು ಮಹಿಳೆಯರಿಂದ ಹಾಡಲ್ಪಟ್ಟವುಗಳು. ತಾವು ಪಟ್ಟ ಪಾಡನ್ನು, ಅನುಭವಿಸಿದ ದುಃಖ ದುಮ್ಮಾನಗಳನ್ನು ಬೀಸುವಾಗ, ಕಟ್ಟುವಾಗ, ಸಸಿ ನಾಟಿಮಾಡುವಾಗ, ಕಳೆ ಕೀಳುವಾಗ, ಕಾಳು ಒಕ್ಕುವಾಗ, ಧಾನ್ಯ ತೂರುವಾಗ ಹೊರ ಹಾಕಿರುವಂತಹವು ಗಳಾಗಿವೆ. ಇಲ್ಲಿಯ ಮಹಿಳೆ ಪುರುಷ ಪ್ರಧಾನ ಚೌಕಟ್ಟಿನೊಳಗೆ ಬದುಕಿದ್ದವಳು. ತಾನು ಬದುಕಿದ ಸಮಾಜ ಹೆಣ್ಣನ್ನು ಯಾವ ರೀತಿ ಇರಬೇಕೆಂದು ಬಯಸಿದೆಯೋ ಅದರಂತೆಯೇ ಅವಳು ನಡೆದಿರುವುದು ಮತ್ತು ನುಡಿದಿರುವುದು ಕಂಡುಬರುತ್ತದೆ. ಹೆಣ್ಣಿಗೆ ಸಲಿಗೆ, ಸದರ ಕೊಡಬಾರದು; ಕೊಟ್ಟರೆ ಗಂಡು ಅವಳ ಕೈಗೊಂಬೆಯಾಗುತ್ತಾನೆಂಬ ಭಾವದ ಹಾಗೂ ಮೂಡಲ ಸೀಮೆಯ ಹೆಣ್ಣುಗಳು ಸಂಸಾರಕ್ಕೆ ಹೊಂದಿಕೊಂಡು ಹೋಗುವುದಿಲ್ಲವೆಂಬ ಮನೋಭಾವ ಹೇಗೋ ಆಗಿನವರಿಗೆ ಬಂದುಬಿಟ್ಟಿದೆ. ಆ ಮೂಲದ ಹೆಣ್ಣುಗಳನ್ನು ನಿರಾಕರಿಸುವಂತಹ ಜನಪದ ತ್ರಿಪದಿಗಳು ನಮಗೆ ದೊರೆಯುತ್ತವೆ.

ಕೆಂಡ ಸಂಪಿಗೆ ಹುಡ್ಗ ಕಂಡಲ್ಲಿ ಮುಡಿಬ್ಯಾಡ
ಹೆಂಡ್ತಿಗೆ ಸಲ್ಗೇ ಕೊಡಬ್ಯಾಡ ತಮ್ಮಯ್ಯ
ನಾಳೆ ನಿನ್ಮಾತು ನಡಿಯಾವ್ರೋ[೪೬]
ಮೂಡ ಸೀಮೆಯ ಹೆಣ್ಣು ಬೇಡ ಕಾಣಣಯ್ಯ
ನೀಡೀದ ಕಾಲ ತೆಗೆಯೊಳು ಆ ಬಾಲೆ
ನೆರೆಯೋರಿಗಂಜಿ ಬಾಳ್ಯಾಳೆ

ಜನಪದ ಸಾಹಿತ್ಯದಲ್ಲಿ ಹೆಣ್ಣಿನ ಪಾತ್ರ ಸೊಸೆಯಾಗಿ, ಅತ್ತೆಯಾಗಿ, ತಾಯಿಯಾಗಿ, ಮಗಳಾಗಿ ಹಲವು ರೀತಿಯಲ್ಲಿ ಕಂಡುಬರುತ್ತದೆ. ಸೊಸೆಯಾದರೆ ಅತ್ತೆಯ ಮನೆಯಲ್ಲಿ ಹೇಗೆ ನಡೆದುಕೊಳ್ಳಬೇಕು ಎಂಬ ಬಗ್ಗೆ ಹಲವು ತ್ರಿಪದಿಗಳಲ್ಲಿ ನಮಗೆ ಮಾಹಿತಿ ಸಿಗುತ್ತದೆ.

ಅತ್ತೆ ಮಾವನ ಪಾದ ತಂದೆತಾಯಿಯ ಪಾದ
ಮತ್ತೆ ಹಿರಿಯೋರ ಶ್ರೀಪಾದ ನೆನೆದಾರೆ
ಬೆನ್ನ ಹಿಂದಿದ್ದೋ ಕೈಲಾಸ[೪೭]
ಅತ್ತೆ ಮಾವಗಂಜಿ ಸುತ್ತೇಳು ನೆರೆಗಂಜಿ
ಮತ್ತೆ ನೀ ಪತಿಯ ದನಿಗಂಜಿ ಇದ್ದರ
ಉತ್ತಮರ ಮಗಳು ಇವಳನೆರೆ[೪೮]

ಮೇಲಿನ ತ್ರಿಪದಿಗಳನ್ನು ಗಮನಿಸಿದರೆ ಆಗಿನ ಸಮಾಜವು ವ್ಯವಸ್ಥಿತವಾಗಿ ಹೆಣ್ಣನ್ನು ತನ್ನ ಬಿಗಿ ಮುಷ್ಟಿಯಲ್ಲಿಟ್ಟುಕೊಂಡು ಅವಳಿಂದ ಪ್ರತಿಭಟನೆರಹಿತ ಸೇವೆಯನ್ನು ಪಡೆದಿರುವುದನ್ನು ಕಾಣಬಹುದಾಗಿದೆ. ಇದಕ್ಕೆ ಪೂರಕವಾಗುವಂತೆ ಸಂಚಿಯ ಹೊನ್ನಮ್ಮ ತಾನು ಒಬ್ಬ ಹೆಣ್ಣಾದರೂ ಪುರುಷ ಪ್ರಧಾನ ಸಮಾಜದ

ಒಂದು ಭಾಗವಾಗಿದ್ದುದರಿಂದ ಹೆಣ್ಣು ತಗ್ಗಿ ಬಗ್ಗಿ ನಡೆದರೆ ಕ್ಷೇಮ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದಂತೆ ಕಾಣುತ್ತದೆ. ಇದು ಜನಪದ ತ್ರಿಪದಿಗಳ ಭಾವವನ್ನೇ ಹೋಲುವಂತೆ ಇದೆ.

ಉತ್ತರಕುತ್ತರ ವಿತ್ತಿದಿರುಡದೆ
ಯೊತ್ತಿ ನುಡಿಯದೊತ್ತರಿಸದೆ
ಮತ್ತವರಿತ್ತಾಣತಿಯ ಮಸ್ತಕದೊಳು
ಪೊತ್ತು ಪೂಜಿಸುತೆಸಗುವುದು
ಅತ್ತಿತ್ತ ನೋಡದೆಯವಮತಿಗೆಯ್ಯದೆ
ಮತ್ತೆಯಾಗದೆ ಮರೆತಿರದೆ
ಅತ್ತೆಮಾವರಿದಿರಾಣತಿಯನುಲಿಪುದೇಕೆ
ಚಿತ್ತದೊಳೇಕೆ ಪತ್ನಿಯರು[೪೯]

ಹಾಗೆಯೇ ಕೂಗಿ ನುಡಿಯಬಾರದು ಕೊಬ್ಬು, ಕೋಪ, ತೋರಿಸಬಾರದು ಜನ ಮೆಚ್ಚುವಂತೆ ನಡೆಯಬೇಕೆಂಬುದು ಸಂಚಿ ಹೊನ್ನಮ್ಮನ ಹಿತೋಪದೇಶವಾಗಿದೆ. ಮುದುಕರ ಬಗೆಗೆ, ಅತ್ತಿಗೆ ನಾದಿನಿಯರ ಬಗೆಗೂ ಹೊಂದಿಕೊಂಡು ಜೀವನ ಸಾಗಿಸಬೇಕೆಂಬ ಹೊಂದಾಣಿಕೆಯ ತತ್ವವನ್ನು ಹೊನ್ನಮ್ಮ ಪ್ರತಿಪಾದಿಸಿದ್ದಾಳೆ. ಅಷ್ಟಲ್ಲದೆ ಸೊಸೆಯಾದವಳನ್ನು ಅತ್ತೆ ಹೇಗೆ ನೋಡಿಕೊಳ್ಳಬೇಕೆಂಬ ಬಗ್ಗೆಯೂ ಹೇಳಿದ್ದಾಳೆ. ಈ ರೀತಿಯ ಹೇಳಿಕೆಗಳು ಜನಪದರಲ್ಲಿ ಕಂಡುಬರುವುದಿಲ್ಲ. ಹೊನ್ನಮ್ಮ ಅತ್ತೆಯರು ಸೊಸೆಯರನ್ನು ನೋಡಿಕೊಳ್ಳುವ ಬಗ್ಗೆ ಹೇಳಿರುವ ಮಾತುಗಳು ಈ ರೀತಿ ಇವೆ.

ತಂದೆ ತಾಯನು ಬಿಟ್ಟು ತಮ್ಮ ಕೈಗೆಡೆಯಾಗಿ
ಬಂದ ಸೊಸೆಯರ ಬಾದಿಸದೆ
ಅಂದಂದಿಗುಡಿಗೆ ತೊಡಿಗೆಯಾಟ ಮೀಹಗೆ
ಳಿಂದ ಸಂತಸಗೊಳಿಸುವುದು
ಬಸವಳಿಸದೆ ಪಳಿಯದೆ ಭಂಗಪಡಿಸದೆ
ಹೊಸಗೆಡಿಸದೆ ಹದುಗಿಸದೆ
ಬಸಿರೊಳು ಬಂದ ಹೆಣ್ಮಕ್ಕಳ ಮರುಕವ
ಸೊಸೆಯರೆಡೆಯೊಳೆಸಗುವ
ಬಸಿರು ನಿಟ್ಟುಸಿಯುಣ ಬಡಿಸುವುದೊಳು ಮುಡಿ
ಯೆಸಕವರಿತು ಮಿಸಿಸುವುದು
ಒಸೆದು ಸಿಂಗರಿಸುವುದೊಲಿದು ನೋಡುವುದಂತು
ಸೊಸೆಯರ ಸೊಗವಡಿಸುವುದು.

ಆದರೂ ಸಂಚಿಯ ಹೊನ್ನಮ್ಮ ಹೆಣ್ಣನ್ನು ಕಡೆಗಣಿಸುವಾಗ, ಕೀಳಾಗಿ ನೋಡುವ ಲಿಂಗ ತಾರತಮ್ಯ ಮಾಡುವ ಸಮಾಜವನ್ನು ಸೂಕ್ಷ್ಮವಾಗಿ ಎಚ್ಚರಿಸುವುದನ್ನು ಕಾಣುತ್ತೇವೆ.

ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು
ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು
ಇವರಿರ್ವರೊಳೇಳ್ಗೆ ಪಡೆದವರಿಂದ
ಸವನಿಪುದಿಹಪರ ಸೌಖ್ಯ
ಅರಿತುನಿಟ್ಟಿಸೆ ಗಂಡು ಮಕ್ಕಳಂದತಿಶಯ
ದೆರಕದೊಳೆಸೆದ ಪೆಣ್ಗಳನು
ಪೊರ ನೋಟದಿಂದ ನೋಡದೆ ಪೋಲೆನಿಸದೆ
ಮರುಕವೆರಸಿ ಮನ್ನಿಪುದು[೩೦]

ಸಂಚಿ ಹೊನ್ನಮ್ಮನದು ಮಧ್ಯಮ ಮಾರ್ಗ; ತೀರ ಉಗ್ರವೂ ಅಲ್ಲದ ಪೂರ ಸಾಧುವು ಅಲ್ಲದ ಹೊಂದಾಣಿಕೆ ಮನೋಭಾವ ತೀವ್ರವಾಗಿರುವುದು ಇಲ್ಲಿಯ ವಿಶೇಷ. ಆದರೂ ತಾನು ಬದುಕಿದ ಪುರುಷ ಪ್ರಧಾನ ಸಮಾಜದ ಹಿಡಿತದಲ್ಲಿದ್ದರೂ ಸ್ತ್ರೀಪರ ವಕಾಲತ್ತನ್ನು ಕೆಲವೊಮ್ಮೆ ವಹಿಸಿದ್ದಾಳೆ. ತವರುಮನೆಗೆ ಕೆಟ್ಟ ಹೆಸರು ತರಬಾರದೆಂಬುದು ಹೆಣ್ಣಿನ ಮೇಲಿರುವ ಒತ್ತಡ; ಇದಕ್ಕಾಗಿ ಆ ಹೆಣ್ಣು ಅತ್ತೆಯ ಮನೆಯಲ್ಲಿ ಎಂತಹ ಕಷ್ಟವನ್ನಾದರೂ ಸಹಿಸಲು ಸಿದ್ಧಳಿರುತ್ತಾಳೆ.

ಅತ್ತೀಯ ಮನೆಯಾಗ ಮುತ್ತಾಗಿ ಇರಬೇಕು
ಹೊತ್ತಾಗಿ ನೀಡಿದರೂ ಉಣಬೇಕು ತವರೂರ
ಉತ್ತಮ ಹೆಸರು ತರಬೇಕು[೩೧]

ಇದಕ್ಕೆ ವಿರುದ್ಧವಾದ ಗುಣಗಳಿರುವ ಅಂದರೆ ಹೊಂದಿಕೊಂಡು ಬಾಳಲರಿಯದ ಹೆಣ್ಣು ಹೆಣ್ಣೇ ಅಲ್ಲ ಎಂಬ ನಂಬಿಕೆಯೂ ಜನಪದರಲ್ಲಿ ಬೇರೂರಿತ್ತು.

ಮಾತಂಬೆ ಮಗಳಲ್ಲಿ ತಾಟ್ಗಿತ್ತಿ ಸೊಸೆಯಲ್ಲ
ತೂಪರದೆ ಚಕ್ಕೆ ಒಲೆಗಲ್ಲ ತವರಿಗೆ
ಮಾತ ತಂದೋಳು ಮಗಳಲ್ಲ[೩೨]

ಎಂತಹ ಸಂದರ್ಭ ಬಂದರೂ ತವರೂರಿಗೆ ಹೆಣ್ಣು ಬರಬಾರದು. ಗಂಡನ ಮನೆಯೇ ಅವಳಿಗೆ

ಶ್ರೇಯಸ್ಕರ; ಎಂತಹ ನೋವು, ಸಂಕಟವಿದ್ದರೂ ಅಲ್ಲಿಯೇ ಅವಳು ಬಾಳಬೇಕು, 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬಂತಹ ನಂಬಿಕೆ ಬಲವಾಗಿತ್ತು.

'ಗಂಜೀಯ ಕುಡಿದರು ಗಂಡನ ಮನಿಲೇಸು
ಅಂದಣದ ಮೇಲೆ ಚವರೀಯ ಸಾರಿದರು
ಹಂಗೀನ ತವರ ಮನಿಸಾಕು'

'ಹುಚ್ಚನಂತಹ ಗಂಡ ಹುಲಿಯಂತಹ ಮೈದುನ
ದತ್ತೋರವ್ವ ನನ್ನ ನೆಗಿಯಾಣಿ ಕೈಯಾಗ
ಹ್ಯಾಂಗೀಸಿಬರಲೆ ಹಡೆದವ್ವ'[೫೬]

ಹೊಸ ಪರಿಸರದಲ್ಲಿ ಮನೆಯಲ್ಲಿ ವಿಚಿತ್ರ ವ್ಯಕ್ತಿತ್ವದ ಜನರ ಮಧ್ಯೆ ಹೊಂದಿಕೊಂಡು ಬಾಳಲೇಬೇಕಾದ ಅನಿವಾರ್ಯ ಪರಿಸ್ಥಿತಿ ಹೆಣ್ಣಿನದಾಗಿತ್ತು. ಪ್ರತಿಯೊಬ್ಬ ಹೆಣ್ಣು ಒಂದಲ್ಲ ಒಂದು ಸಂದರ್ಭದಲ್ಲಿ ಅತ್ತೆಯ ಕಡೆಯಿಂದಲೂ ಗಂಡನ ಕಡೆಯಿಂದಲೂ ಶೋಷಣೆಯನ್ನು ಸಹಿಸಿಕೊಂಡಿರಬೇಕಿತ್ತು. ಇಲ್ಲವಾದರೆ ಕೆರೆ ಬಾವಿಯ ಪಾಲಾಗಬೇಕಿತ್ತು. ಉತ್ತರ ದೇವಿಯು ತಾಯಿಯ ಮಾತಿನಂತೆ ಉತ್ತರೆ ಮಳೆಯಾದಳೆಂಬ ಉಲ್ಲೇಖ ಉತ್ತರದೇವಿ ಕಥನದಲ್ಲಿ ಸಿಗುತ್ತದೆ. ಉತ್ತರೆಯ ಉಳೆಯ ಸಂದರ್ಭದ ಬಿಸಿಲು ಅವಳ ಕಷ್ಟ ವನ್ನು ಸಂಕೇತಿಸಿದರೆ ನಂತರ ಸುರಿಯುವ ಮಳೆ ಅವಳ ದುಃಖದ ಸಂಕೇತವೆಂದು ಜನಪದರು ಭಾವಿಸುತ್ತಾರೆ.

ಅತ್ತೆ ಮಾವ ನಾದಿನಿ ಮೈದುನರೆಲ್ಲಾ ಒಂದಾಗಿ ಕಷ್ಟಕೊಟ್ಟರೂ ಸಹಿಸುವ ಹೆಣ್ಣು ಗಂಡನೊಬ್ಬ ನನ್ನ ಪಾಲಿಗಿದ್ದರೆ ಸಾಕೆಂದು ಬಯಸುತ್ತಾಳೆ. ಗಂಡನ ಪ್ರೀತಿ ಸಿಕ್ಕರೆ ಸಾಕೆಂದು ಹಪಹಪಿಸುತ್ತಾಳೆ. ಹಾಗಾಗಿ ಗಂಡನಿಗೆ,

ತಂದಿ ತಾಯಿಯ ಬಿಟ್ಟು ಬಂಧು ಬಳಗವ ಬಿಟ್ಟು
ಬಂದೀನಿ ರಾಯ ನಿಮಕೂಡ ಕೈಯಾನ
ಲಿಂಗವ ಮಾಡಿಸಲಹಿರಿ[೫೭] ಎಂದು ಮೊರೆಯಿಡುತ್ತಾಳೆ.

ಒಳ್ಳೆಯ ಮನೆಗೆ ತನ್ನ ಮಗಳನ್ನು ಕೊಡಲಿಲ್ಲ; ಅವಳ ಬದುಕು ಕಷ್ಟಕರವಾಗಿರುವುದನ್ನು ಕಂಡು ಹೆತ್ತವರು ಕೊರಗುವುದನ್ನು ಜನಪದರು ದಾಖಲಿಸಿದ್ದಾರೆ.

ಮಲ್ಲಿಗೆಯಂಥ ಮಗಳಿಗೆ ಎಲ್ಲಿತ್ತೋ ಒಗೆತನ
ಹುಲ್ಲಾಗ ಬೆಂಕಿ ಒಗೆದಂಗ ಗುಡ್ಡಾದ
ಕಲ್ಲೀಗಿ ಧಾರೆ ಎರೆದಾಂಗ[೫೮]

ಹೆಣ್ಣು ಚಂಚಲೆ, ಅವಳನ್ನು ಅರ್ಥ ಮಾಡಿಕೊಳ್ಳುವುದು ಸುಲಭದ ಮಾತಲ್ಲ ಎಂಬ ಅಂಶವನ್ನು ಜನಪದರು ಹೀಗೆ ವ್ಯಕ್ತಪಡಿಸಿದ್ದಾರೆ.

ಹೆಂಡರ ಮಾಯಂಗಳ ಗಂಡರೇನು ಬಲ್ಲರು
ಗುಂಡಿಯಲ್ಲಿರುವ ಕುರು ಮೀನ ಹೆಜ್ಜೆಯ
ಕಂಡವರುಂಟೆ ಧರೆಯೊಳಗೆ.[೫೬]

ಒಟ್ಟಾರೆ ಹೆಣ್ಣಿನ ಬದುಕು ಬಹುಪಾಲು ದುಃಖದಿಂದಲೇ ತುಂಬಿರುತ್ತದೆಂದು ಜನಪದ ಸಾಹಿತ್ಯ ಹೇಳುತ್ತದೆ. 'ಸುಖ ಎಲ್ಲಾರಿಗೆಲ್ಲಿದೆಯವ್ವ ದುಃಖ ಚೆಲ್ಲೇದ ಮರ್ತ್ಯದ ಮ್ಯಾಲೆ' ಎನ್ನುವ ತೀರ್ಮಾನವೇ ಅವಳ ಪಾಲಿಗೆ ಕೊನೆಯದಾಗಿ ಉಳಿಯುತ್ತದೆ. ಜನಪದ ಕಾವ್ಯದಲ್ಲಿ ಹೆಣ್ಣಿನ ಬದುಕಿನ ವಿವಿಧ ಮುಖಗಳನ್ನು ಕಂಡಾಗ ಧರ್ಮಶಾಸ್ತ್ರಗಳು ಅವಳನ್ನು ಹೇಗೆ ಇರಿಸಿದವೋ ಹಾಗೆಯೇ ಅವಳು ಇದ್ದಾಳೆಂಬುದು ಮನವರಿಕೆಯಾಗುತ್ತದೆ. ಸಮಾಜ ಅವಳ ಪಾಲಿಗೆ ಕೊಟ್ಟಿರುವುದು ನಿರಂತರ ದುಡಿಮೆಯ ತ್ಯಾಗದ ಬದುಕನ್ನು ಎಂಬ ಅಂಶವನ್ನು ಜನಪದ ಕಾವ್ಯವೂ ಸ್ಪಷ್ಟೀಕರಿಸುತ್ತದೆ.[೫೭]

ಹೆಣ್ಣಿನ ಜನ್ಮ ಸಾರ್ಥಕವಾಗಬೇಕಾದರೆ ಆಕೆ ತಾಯಿಯಾಗಬೇಕೆಂಬುದಕ್ಕೆ ಹಲವಾರು ನಿದರ್ಶನಗಳು ನಮ್ಮ ಪ್ರಾಚೀನ ಕಾವ್ಯಗಳಲ್ಲಿ ದೊರೆಯುತ್ತವೆ. ಮಕ್ಕಳನ್ನು ಪಡೆಯದ ಹೆಣ್ಣಿನ ಬಾಳು ನಿರರ್ಥಕ ಎಂಬ ನಂಬಿಕೆಯಿದ್ದುದರಿಂದಲೇ ಮಕ್ಕಳಿಗಾಗಿ ಹೆಣ್ಣುಗಳು ಪರಿತಪಿಸುತ್ತಿದ್ದರು. ಅದರಲ್ಲೂ ಗಂಡು ಮಗು ಹುಟ್ಟಿದರೆ ತಾಯಿ ತಂದೆಗಳಿಗೆ ಸ್ವರ್ಗ ಪ್ರಾಪ್ತಿ ಎಂಬ ನಂಬಿಕೆಯೂ ಅಂದಿನ ಸಮಾಜದಲ್ಲಿ ಬಲವಾಗಿ ಬೇರೂರಿತ್ತು. 'ಕೈಗನ್ನಡಿಯ ವೊತಿಲ್ಲರ ಕೈಗೊಪ್ಪುವ ಮಗನೆತ್ತಿ ಪುಳಕಾಂಕುರಮರಿ ಮೈಗಗ್ಗಳಿಸದೆ ಕೈಗಮದೇಂ ಬೇಧಮುಂಟೆ ಸೀರೆಯ ಕೈಗಂ' 'ಗರ್ಭಂ ಬೆಳೆಯದ ಬಾಳಕಿಯ ಬಸಿರನರ್ಥಕ ಮಲ್ತೇ[೫೮] ಜನಪದರಲ್ಲಿಯೂ ಮಕ್ಕಳಿಲ್ಲದ ಹೆಣ್ಣಿನ ಬದುಕು ವ್ಯರ್ಥವೆಂಬಂತಹ ಅನೇಕ ತ್ರಿಪದಿಗಳಿವೆ.

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡಿಗೆ ಎತ್ತು ದುಡಿದಾಂಗ ಬಾಳಲೆಯ
ಹಾಸ್ಯಾಂಡು ಬೀಸಿ ಒಗೆದಾಂಗ[೫೯]
ಕಂದನ ಕೊಡುಶಿವನೆ ಬಂಧನ ಬಿಡಲಾರೆ
ಹಂಗೀನ ಬಾನ ಉಣಲಾರೆ ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ[೬೦]
ಗಂಡು ಮಕ್ಕಳು ಒಂಬತ್ತು ಕೊಡು ಸ್ವಾಮಿ
ಬಂಡೀಯ ಮುಂದ ಕಳಸಕ್ಕ ಒಪ್ಪುವಂತ
ಒಬ್ ಹೆಣ್ಮಮಗಳ ಕೊಡುದೇವ.

ಮಕ್ಕಳನ್ನು ಪಡೆಯುವ ಕ್ರಿಯೆ ಹೆಣ್ಣು ಗಂಡುಗಳಿಬ್ಬರಿಗೂ ಸಂಬಂಧಿಸಿದ್ದು. ಆದರೆ ಪುರುಷ ಪ್ರಧಾನ ಸಮಾಜ ಇದಕ್ಕೆ ಹೆಣ್ಣೊಬ್ಬಳನ್ನೇ ಹೊಣೆಗಾರಳನ್ನಾಗಿ ಮಾಡಿದೆ. ಗಂಡು ಬೇರೊಂದು ಮದುವೆಯಾಗಲು ಬಂಜೆತನವು ಒಂದು ಪ್ರಮುಖ ಕಾರಣವಾಗಿದೆ. ಗಂಡನಿಂದ ಅತ್ತೆ ಮಾವಂದಿರಿಂದ ನಿರ್ಲಕ್ಷ್ಯಕ್ಕೊಳಗಾಗಿ ದುರ್ಬರ ಬದುಕು (ಜೀವನ) ಮಾಡಲಾಗದ ಹೆಣ್ಣು ಮೇಲಿನ ರೀತಿಯಲ್ಲಿ ಪರಿತಪಿಸುತ್ತಾಳೆ. ಈ ಎಲ್ಲಾ

ಕಾರಣಗಳಿಂದಲೇ ಹೆಣ್ಣು ಜನ್ಮ ಶಾಪವೆಂದು ಅಭಿಪ್ರಾಯ ಬಹಳ ಕಡೆ ವ್ಯಕ್ತವಾಗುತ್ತದೆ. ಹೆಣ್ಣಾಗಿ ಹುಟ್ಟಲೇಬಾರದು ಹುಟ್ಟಿ ಪಡಬಾರದ ಪಾಡು ಪಡುವುದಕ್ಕಿಂತ ಹುಟ್ಟದಿರುವುದೇ ಲೇಸೆಂಬ ಹೇಳಿಕೆಗಳು ಬಹಳಷ್ಟಿವೆ.

ಜನಪದ ಕಥನಕಾವ್ಯಗಳು ಕಲ್ಪನೆಗಿಂತ ಹೆಚ್ಚಾಗಿ ವಾಸ್ತವಿಕ ಬದುಕನ್ನೇ ಚಿತ್ರಿಸುತ್ತದೆ. ಇಲ್ಲಿ ಸುಖಾಂತ್ಯವಾಗಿ ಬಿಂಬಿಸುವ ಕಥನಕಾವ್ಯಗಳು ಇರುವಂತೆಯೇ ಹೆಣ್ಣಿನ ದುಃಖಾಂತದ ಜೀವನವನ್ನು ಸಾಮಾಜಿಕ ಸಂದರ್ಭದ ಹಿನ್ನೆಲೆಯಲ್ಲಿ ರಚಿಸುವಂತಹ ಕಥನ ಕಾವ್ಯಗಳು ಇವೆ. ಇಲ್ಲಿ ಹೆಣ್ಣಿಗೂ ದುಃಖಕ್ಕೂ ಇರುವ ಸಂಬಂಧ ಬಿಡಿಸಲಾಗದ ನಂಟು. ಅವಳ ದುಃಖ ನೆನ್ನೆ ಮೊನ್ನೆಯದಲ್ಲ, ಸಮಾಜ ಆರಂಭವಾದ ದಿನದಿಂದ ಇಂದಿನವರೆಗೂ ನಿರಂತರವಾಗಿ ಹರಿದು ಬಂದದ್ದಾಗಿದೆ.[೬೧] ಹೆಣ್ಣಿಗೆ ಹೆಣ್ಣೆ ಶತ್ರು ಎಂಬ ಮಾತನ್ನು ಪುಷ್ಟೀಕರಿಸುವಂತೆ 'ಉತ್ತರದೇವಿಯ ಕಥೆ' ಬರುತ್ತದೆ. ನೀರಿಗೆ ಹೋದ ಉತ್ತರದೇವಿ ತಡವಾಗಿ ಮನೆಗೆ ಬಂದಿದ್ದಕ್ಕೆ ವೈಯಕ್ತಿಕ ದ್ವೇಷದಿಂದ ಸೊಸೆ ಜೊತೆ ಜಗಳ ತೆಗೆದ ಅತ್ತೆ ಕುಂಟುನೆಪ ಹೂಡಿ ಮಗನಿಗೆ ಮತ್ತೊಂದು ಮದುವೆ ಮಾಡುವ ಆಸೆ ತೋರಿಸಿ ಮಕ್ಕಳನ್ನು ಹೊಂದಿರುವ ಉತ್ತರದೇವಿಯನ್ನು ತೌರಿಗಟ್ಟುತ್ತಾಳೆ. ತಂದೆ, ತಾಯಿ, ಅಕ್ಕ, ಅಣ್ಣರ ಮನೆಯಲ್ಲಿ ಆಶ್ರಯ ಕಾಣದ ಉತ್ತರದೇವಿ ತಾಯಿಯ ಮನೆಯಲ್ಲಿ ಸಾಂತ್ವನ ಪಡೆಯುತ್ತಾಳೆ. ಆದರೆ ತಾಯಿಗೂ ತನ್ನದೆ ಗತಿ ಬಂದಿರುತ್ತದೆ. ಮಗಳನ್ನು ಸಂತೈಸಿದ ತಾಯಿ ಹೇಳುತ್ತಾಳೆ.

ಹಿಂದಾಲ ಕಾಲದಲ್ಲಿ ನನಗೂ ಈ ಸಾಗಿತ್ತು
ನಿಮ್ಮಪ್ಪ ನನ್ನ ಉರಿಸಿದ ಉತ್ತರದೇವಿ ನನ್ನ ಪಾಡು ನಿನಗೆ ಒದಗೀತೆ[೬೨]

ಈರೋಬಿ ಕಥೆಯಲ್ಲಿ ಆಕೆಯ ಗಂಡ ಶೆಟ್ಟಿ ಸಂಕರರಾಯ ಸತ್ತಾಗ ಇವಳು ಕೊಂಡ ವೇರಬೇಕಾಗುತ್ತದೆ. ಮದುವೆಗೆ ಮುನ್ನವೇ ಸತ್ತ ತನ್ನ ಭಾವೀಪತಿ ಚಂದಯ್ಯನಿಗಾಗಿ 'ನಾಗವ್ವ' ಬೆಂಕಿಗೆ ಹಾರಬೇಕಾಗುತ್ತದೆ. ಭಾಗೀರಥಿ 'ಕೆರೆಗೆ ಹಾರ'ದಲ್ಲಿ ಹೊಸದಾಗಿ ತೆಗೆಯಿಸಿದ ಕೆರೆಯಲ್ಲಿ ನೀರು ಬಾರದಿದ್ದಾಗ ಅದಕ್ಕೆ ಆಹುತಿ ಯಾಗಬೇಕಾಗುತ್ತದೆ. ಕಟ್ಟಿದ ಕೆರೆಯ ಒಡ್ಡು ನಿಲ್ಲದೆ ಹೋದಾಗ ಹಸಿ ಬಾಣಂತಿಯಾಗಿದ್ದ ಹುಳಿಯೂರು ಕೆಂಚವ್ವ ಹೊಸ ಕೆರೆಯಲ್ಲಿಯೇ ಕರಗಬೇಕಾಗುತ್ತದೆ. ಗಂಡನಿಂದ ಸುಖ ಪಡೆಯುವ ಮುನ್ನವೇ ಹಿರಿದಿಮ್ಮವ್ವ ಅನ್ಯರಿಂದ ತೊಂದರೆಗೆ ಒಳಗಾಗಿ ಮಾನ ಉಳಿಸಿಕೊಳ್ಳಲು ಬೆಂಕಿಗೆ ಹಾರಬೇಕಾಗುತ್ತದೆ. ಶೆಟ್ಟಿಗಾರ ತಿಮ್ಮಪ್ಪ ಎಂಬ ನೀಳ್ಗವನದಲ್ಲಿ ಅತ್ತೆ ನಾದಿನಿಯರು ರಾಕ್ಷಸಿಯರಂತೆ ಚಿತ್ರಿತರಾಗಿದ್ದಾರೆ. ಕಾಡ ಸಿದ್ಧಮ್ಮನ ಹಾಡಿನಲ್ಲಿ ಸವತಿ ಮಾತ್ಸರ್ಯ ಮುಖ್ಯವಾಗಿ ಚಿತ್ರಿತವಾಗಿದೆ. ಬಾಲನಾಗಮ್ಮ ಕಥನ ಕಾವ್ಯದಲ್ಲಿ ಸಣ್ಣ ತಪ್ಪಿಗಾಗಿ ಹೆಣ್ಣೊಬ್ಬಳು ಪ್ರಾಣವನ್ನೇ ಕಳೆದುಕೊಳ್ಳಬೇಕಾಗುತ್ತದೆ. 'ಜನಪದ ಕಥನಕಾವ್ಯಗಳು ಅಂದಂದಿನ ಸಾಮಾಜಿಕ ಜೀವನದ ರೀತಿ–ನೀತಿ, ವಿಧಿ–ವಿಧಾನಗಳ ಮೇಲೆ ಬೆಳಕು ಚೆಲ್ಲುತ್ತವೆ. ಕೆರೆ, ಕಟ್ಟೆ, ಕೋಟೆ, ಕೊತ್ತಲಗಳು ಭದ್ರವಾಗಿ ಇರಲೆಂದು ಸ್ತ್ರೀಯರನ್ನು ಬಲಿ ಕೊಡುತ್ತಿದ್ದರು. ಅದರಲ್ಲಿಯೂ ಬಲಿ ಕೊಡಲು ಬೇರೆ ಮನೆಯಿಂದ ಬಂದ ಹೆಣ್ಣುಗಳಿಂದಲೇ ಅಂದರೆ ಸೊಸೆಯರೆ ಬೇಕಾಗಿತ್ತು. ಸೊಸೆ ಸತ್ತಾಗ ಸೋಬಾನ, ಮಗ ಸತ್ತರೆ ಮನೆಹಾಳು ಎಂಬ ಗಾದೆ ಈ ಕಾರಣದಿಂದಲೇ ಹುಟ್ಟಿರಬಹುದೆನಿಸುತ್ತದೆ.[೬೩]

### ೩.೭. ಜನಪದ ಮಹಾಕಾವ್ಯಗಳಲ್ಲಿ ಹೆಣ್ಣು

ಮಲೆಮಾದೇಶ್ವರ ಕಾವ್ಯದಲ್ಲಿ ಸಂಕಮ್ಮ ತನ್ನ ಗಂಡನಿಂದ ಚಿತ್ರಹಿಂಸೆಗೆ ಗುರಿಯಾಗಬೇಕಾಗುತ್ತದೆ. ಆ ಕಾರಣ ಸಂಕಮ್ಮ ಹೆಣ್ಣಿನ ಜನ್ಮವನ್ನೇ ನಿರಾಕರಿಸುವ ಮಾತನಾಡುತ್ತಾಳೆ.

ಒಬ್ಬರ ನಗಿಸೋದು ತರವೇನೋ ಒಬ್ಬಾರ ಅಳಿಸೋದು ತರವೇನೋ
ಇಬ್ಬಂದಿಕಾರ ಭಗವಂತ ಅನ್ನೇಕಾರ ಭಗವಂತ
ಈ ಪಾಪಿ ಹೆಣ್ ಜಲ್ಮ ಅಯ್ಯೋ ಶಿವನೇ
ಹುಟ್ಟಲೇಬಾರದು ಧರೆಯೊಳಗೆ[೪೪]

ಮಂಟೇಸ್ವಾಮಿ ಕಾವ್ಯದಲ್ಲಿ ಸಿದ್ದಪ್ಪಾಜಿಯು ಕಾಳಮ್ಮನಂತಹ ಮಹಿಳೆಯನ್ನು ಸೋಲಿಸಿ ಪವಾಡ ಮೆರೆಯುತ್ತಾನೆ. ಸುಕ್ಕಾಲಿಗರ ಮಾರಿಯ ಬೆನ್ನ ಚರ್ಮ ಸುಲಿದು ಬಾಸುಂಡೆ ಮೂಡಿಸುತ್ತಾನೆ. ಎಲ್ಲಮ್ಮನ ಕಥೆಯಲ್ಲಿ ನೀರು ತರಲು ತಡವಾದ ರೇಣುಕೆಯನ್ನು ಜಮದಗ್ನಿ ಶಪಿಸುತ್ತಾನೆ. ಹೊಳೆಯಲ್ಲಿ ಗಂಧರ್ವನನ್ನು ನೋಡಿದ ಪಾಪಕ್ಕೆ ಆಕೆ 'ತೊನ್ನುರೋಗ' ಪೀಡಿತಳಾಗಬೇಕಾಗುತ್ತದೆ. ಜುಂಜಪ್ಪನ ಕಾವ್ಯದಲ್ಲಿ ಮಕ್ಕಳಾಗದ ಚಿನ್ನಮ್ಮನನ್ನು 'ಹೊಟ್ಯಾಗ ಮಕ್ಕಳಿಲ್ಲದವಳು, ಕಟ್ಟೇಗ ನೀರಿಲ್ಲದವಳು' ಎಂದು ಹಂಗಿಸಲಾಗುತ್ತದೆ. ಗಾದೆಗಳಲ್ಲಿಯೂ ಹೆಣ್ಣನ್ನು ನಿಕೃಷ್ಟವಾಗಿಯೇ ಕಾಣಲಾಗಿದೆ. 'ಹೆಣ್ಣಿನ ಬುದ್ಧಿ ಮೊಣಕಾಲು ಕೆಳಗೆ', 'ಹೆಣ್ಮಕ್ಕಳ ಬಾಯಿ ಸುಮ್ಮನೆ ಕೂರ', ಹೆಣ್ಣು ನಗಬಾರದು, ಗಂಡು ಅಳಬಾರದು, ಹೆರದವಳು ಹೆತ್ತರೆ ಊರೆಲ್ಲಾ ನಾತ ಮೊದಲಾದ ಗಾದೆಗಳು ಸಮಾಜ ಹೆಣ್ಣನ್ನು ನೋಡುವ ದೃಷ್ಟಿಕೋನವನ್ನು ತಿಳಿಸುತ್ತವೆ.

ಜನಪದರಲ್ಲಿ ಹೆಣ್ಣಿನ ಬಗೆಗಿನ ಕೆಲವು ನಂಬಿಕೆಗಳು ಈ ರೀತಿಯಿವೆ. ಹೆಣ್ಣಿನ ಕಾಲಿನ ಕಿರುಬೆರಳು ನೆಲಕ್ಕೆ ತಾಗಿಕೊಂಡು ಇರದಿದ್ದರೆ ಗಂಡ ಬೇಗನೆ ಸಾಯುತ್ತಾನೆ; ಅಂಡಗಾಲು ದುಂಡುಗೈಯವಳ ಬಳಿ ಗಂಡ ಬಾಳಲ್ಲ, ಕುದುರೆಕಾಲಿನ ಹೆಣ್ಣು ಕುಲಕ್ಕೆ ಕೇಡು; ಆಷಾಡದಲ್ಲಿ ಹೆಣ್ಣು ಮೈನೆರೆದರೆ ಸಂಸಾರಕ್ಕೆ ಕೇಡು; ಮುಟ್ಟಾದವರು ಮಕ್ಕಳನ್ನು ಮುಟ್ಟಿದರೆ ಮಕ್ಕಳು ಬಾಡುತ್ತಾರೆ. ಹೆಣ್ಣು ಎಲೆ ಅಡಿಕೆ ತಿನ್ನುವಾಗ ಹೆಚ್ಚು ಸುಣ್ಣ ತಿಂದರೆ ದರಿದ್ರ; ಸೊಸೆ ಬಲಗಾಲು ಮುಂದೆ ಮಾಡಿ ಮನೆಗೆ ಪ್ರವೇಶಿಸಬೇಕು; ಹೆಂಡತಿ ಗಂಡನ ಹೆಸರು ಹೇಳಿದರೆ, ಗಂಡನ ಆಯುಷ್ಯ ಕಡಿಮೆಯಾಗುತ್ತದೆ, ಹೆಂಗಸರ ಸೀರೆ ಗಂಡಸರಿಗೆ ತಾಗಿದರೆ ಗಂಡನ ಆಯುಷ್ಯ ಇತ್ಯಾದಿ ಕಡಿಮೆಯಾಗುತ್ತದೆ. ನಂಬಿಕೆಗಳು ಹೆಣ್ಣಿನ ಬಗೆಗೆ ನೇತ್ಯಾತ್ಮಕ ಭಾವನೆ ಮೂಡಿಸುವುದಲ್ಲದೆ, ಸ್ಪಷ್ಟವಾಗಿ ಪುರುಷ ನಿರ್ಮಿತವಾದವುಗಳೆಂಬುದನ್ನು ತಿಳಿಸುತ್ತವೆ.[೪೫] ಸಾಮಾಜಿಕ ಆಚರಣೆಗಳಲ್ಲಿಯೂ ಹೆಣ್ಣಿಗೆ ಮಹತ್ವದ ಸ್ಥಾನವೇನೂ ಲಭ್ಯವಿಲ್ಲ. ವಿಶೇಷವಾಗಿ ಮದುವೆಯ ಸಂದರ್ಭದಲ್ಲಿ ಹೆಣ್ಣನ್ನು ಗಂಡಿನ ಎಡಭಾಗದಲ್ಲಿ ಕೂಡಿಸಲಾಗುತ್ತದೆ. ಕಾರಣ ನಮ್ಮ ದೇಹದಲ್ಲಿ ಬಲಭಾಗಕ್ಕೆ, ಮೇಲ್ಭಾಗಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಲಾಗುತ್ತದೆ. ಅರ್ಧನಾರೀಶ್ವರನ ಕಲ್ಪನೆಯಲ್ಲಿಯೂ ಸ್ತ್ರೀ ದೇಹ ಭಾಗವಿರುವುದು ಎಡಭಾಗದಲ್ಲಿಯೇ (ಗಂಡಿನ ಎಡಭಾಗದ ಮೂಳೆಗಳಿಂದ ಹೆಣ್ಣನ್ನು ನಿರ್ಮಿಸಲಾಗಿದೆಯೆಂಬುದು ಬೈಬಲ್ ನಂಬಿಕೆ) ಕೊಡುವುದು, ಸ್ವೀಕರಿಸುವುದು ಯಾವಾಗಲೂ ಬಲಗೈ ಮೂಲಕವಾಗಿಯೇ ಎನ್ನುವುದು ಈ ಮಾತಿಗೆ ಪೂರಕವಾಗಿದೆ. ಎಡಗೈಯಿಂದ ಯಾವ ಕೆಲಸವನ್ನು ಸಂಪ್ರದಾಯಸ್ಥರು ಮಾಡಗೊಡುವುದಿಲ್ಲ

(ಎಡಚರನ್ನು ಹೊರತುಪಡಿಸಿ) ಎಡಗೈ ಎಡಭಾಗ ಕನಿಷ್ಠವೆಂಬ ನಂಬಿಕೆ ಜನಪದರಲ್ಲಿದೆ. ಹೆಣ್ಣನ್ನು ಗಂಡಿಗಿಂತ ಕನಿಷ್ಠವೆಂದು ಪರಿಭಾವಿಸಿರುವುದರಿಂದಲೇ, ಹೆಣ್ಣು ಯಾವಾಗಲೂ ಗಂಡಿನ ಎಡಭಾಗದಲ್ಲಿಯೇ ಪ್ರತಿಷ್ಠಾಪಿಸಲ್ಪಡುತ್ತಾಳೆ. ಹಾಗೆಯೇ ತಲೆಯನ್ನು ಎತ್ತಮಾಂಗವೆನ್ನುತ್ತೇವೆ. ಕಾಲನ್ನು ಅಧಮಾಂಗವೆನ್ನುತ್ತೇವೆ. ತಲೆ ಎತ್ತಿ ನಡೆಯುವುದು ಶ್ರೇಷ್ಠತೆಯ ಸಂಕೇತವಾದರೆ ತಲೆ ತಗ್ಗಿಸಿ ನಡೆಯುವುದು ಕನಿಷ್ಠತೆಯ ಸಂಕೇತ ವಾಗುತ್ತದೆ. ಕಾಲಿಗೆ ನಮಸ್ಕರಿಸುವುದು ಕಾಲ ಬಳಿ ಕುಳಿತುಕೊಳ್ಳುವುದು ಸಹ ಕನಿಷ್ಠತೆಯ, ಸೇವಾ ಮನೋಭಾವದ, ಶರಣಾಗತಿಯ ಸಂಕೇತವಾಗಿದೆ. ಸೋತವರ, ಅಸಹಾಯಕತೆಯ ಸಂಕೇತವು ಆ ಸ್ಥಾನವನ್ನು ಸೂಚಿಸುತ್ತದೆ. ಗೌರವ ಸೂಚಿಸುವುದರ ಸಂಕೇತವೂ ಇರಬಹುದು. ಆಂಜನೇಯ ಶ್ರೀರಾಮನ ಕಾಲ ಬಳಿ ಕುಳಿತಿರುವುದರ ಕಲ್ಪನೆ. ಲಕ್ಷ್ಮಿಯು ನಾರಾಯಣನ ಕಾಲ ಬಳಿ ಕುಳಿತಿರುವ ಕಲ್ಪನೆ, ಈ ಸೇವಾ ಮನೋಭಾವದ ಸಂಕೇತವಾಗಿಯೇ ಬೆಳೆದು ಬಂದಿದೆಯೆನ್ನಬಹುದು. ಹೆಣ್ಣಾಗಲಿ, ಸೇವಕರಾಗಲಿ, ಸಾಮಾನ್ಯರಾಗಲಿ ಯಾವತ್ತೂ ಮುಂದೆ ಹೋಗುವುದಿಲ್ಲ. ಗಂಡನ, ರಾಜನ, ರಾಜಕಾರಣಿಯ ಹಿಂದೆ ಮಾತ್ರ ಬರುತ್ತಿರುತ್ತಾರೆ. ಮದುವೆಯಲ್ಲಿಯೂ ಹೆಣ್ಣು ಸಪ್ತಪದಿ ತುಳಿಯುವಾಗ ಗಂಡಿನ ಹಿಂದೆಯೇ ಸಹಚಾರಿಣಿಯಾಗಿ ಬರುವುದನ್ನು ಕಾಣಬಹುದು. ಆ ಎಲ್ಲಾ ಅಂಶಗಳು ಹೆಣ್ಣಿನ ಸ್ಥಾನಮಾನಗಳನ್ನು ಸ್ಪಷ್ಟಪಡಿಸಲು ಸಹಕರಿಸುತ್ತವೆ.[೬೬] ಹೆಣ್ಣಿನ ಬಗೆಗಿನ ಕೀಳು ಮನೋಭಾವವೂ ಆ ಹೆಣ್ಣು ಮಗು ಗರ್ಭಾವಸ್ಥೆ ಯಲ್ಲಿರುವಾಗ ಪ್ರಾರಂಭವಾಗಿ ಅವಳು ಭೂಮಾತೆಯ ಗರ್ಭ ಸೇರುವವರೆಗೂ ಮುಂದುವರೆಯುವುದನ್ನು ಕಾಣಬಹುದಾಗಿದೆ. ಹುಟ್ಟುವ, ಶಿಕ್ಷಣ ಪಡೆಯುವ, ವಿವಾಹದ ನಂತರ ಮಕ್ಕಳನ್ನು ಪಡೆಯುವ ಈ ಎಲ್ಲಾ ವಿಷಯದಲ್ಲಿಯೂ ಹಣ್ಣಿಗೆ ಯಾವುದೇ ಆಯ್ಕೆಗಳಿರುವುದಿಲ್ಲ. ಈ ಎಲ್ಲಾ ಸಂದರ್ಭಗಳಲ್ಲಿಯೂ ಹೆಣ್ಣು ಗಂಡಿನ ಅಜ್ಞಾಪಾಲಕಿಯಾಗಿ ಕಾರ್ಯನಿರ್ವಹಿಸಬೇಕಾಗುತ್ತದೆ. ಗಂಡು ಈ ಸಮಸ್ಯೆಗಳಿಂದ ಮುಕ್ತನಾಗಿದ್ದಾನೆ. ವಿವಾಹದ ನಂತರವೂ ಹೆಣ್ಣು ತನ್ನ ಗಂಡ ಹಾಗೂ ಆತನ ಮನೆಯವರು ಹೇಳಿದ ಹಾಗೆ ಕೇಳಿಕೊಂಡಿರಬೇಕು. ಪ್ರತಿಭಟಿಸಿದರೆ, ಎದುರುತ್ತರ ನೀಡಿದರೆ ಅವಳಿಗೆ ನಿಜವಾಗಿಯೂ ನರಕ ದರ್ಶನ ಪ್ರಾರಂಭವಾದಂತೆಯೇ ಇದೆಲ್ಲವನ್ನು ಸಹಿಸುವ ಹೆಣ್ಣು ಕುಟುಂಬದ ಹಾಗೂ ಸಮಾಜದ ಗೌರವವನ್ನು ಕಾಪಾಡುವ ಹಕ್ಕುದಾರಳೆಂಬಂತೆ ವರ್ತಿಸಬೇಕಾಗುತ್ತದೆ.

ಪ್ರಾಚೀನ ಕಾಲದಲ್ಲಿ ಹೆಣ್ಣು ಗಂಡುಗಳ ಮಧ್ಯೆ ಹೇಳಿಕೊಳ್ಳುವಂತಹ ವ್ಯತ್ಯಾಸ ಕಾಣುವುದಿಲ್ಲ. ಅಲೆಮಾರಿ ಗಳಾಗಿ ಹಣ್ಣು ಹಂಪಲುಗಳನ್ನು ಸಂಗ್ರಹಿಸಿ ಜೀವನ ನಡೆಸುತ್ತಿದ್ದ ಆದಿಮಾನವನ ಕಾಲದಲ್ಲಿ ಎಲ್ಲಾ ಕೆಲಸ ಗಳನ್ನು ಹೆಣ್ಣು ಗಂಡು ಕೂಡಿಯೇ ಮಾಡುತ್ತಿದ್ದುದು ಕಂಡುಬರುತ್ತದೆ. ಪಶುಪಾಲನೆಯ ನಂತರ ಕೃಷಿ ಕೆಲಸದಲ್ಲಿ ತೊಡಗಿದಾಗ ಸಹಜವಾಗಿಯೇ ಮನೆಯ ಹೊರಗೆ ದುಡಿಯುವ ಸದಾ ಕ್ರಿಯಾಶೀಲವಾಗಿರುವ ಗಂಡನ್ನು ಕೆಲವು ಸಮಯ ದೈಹಿಕ ಏರುಪೇರುಗಳ ಹಿನ್ನೆಲೆಯಲ್ಲಿ ಹೊರಗೆ ಗಂಡಿಗೆ ಸರಿಸಮವಾಗಿ ದುಡಿಯಲು ಸಾಧ್ಯವಾಗದ ಹೆಣ್ಣು ಮನೆಯಲ್ಲಿ ದುಡಿಯುವುದನ್ನು ಕಾಣುತ್ತೇವೆ.

ಈ ರೀತಿಯ ಹೊರ ಹಾಗೂ ಒಳ ದುಡಿಮೆಗಳು ಸಹಜವಾಗಿ ಮೇಲು ಕೀಳು, ಹೆಚ್ಚು ಕಡಿಮೆ ಎನ್ನುವ ತಾರತಮ್ಯ ಮೂಡಿಸಿ ಉತ್ಪನ್ನತೆಗೆ ಮನ್ನಣೆ ಹೆಚ್ಚಾಗತೊಡಗಿತು. ಸದಾ ಹೊರಗೆ ಸುತ್ತಾಡುವ, ಬೇಟೆಯಾಡುವ, ಪಶುಪಾಲನೆ ಮಾಡುವ, ವ್ಯವಸಾಯ ಕಾರ್ಯದಲ್ಲಿ ತೊಡಗುವ ಪುರುಷ ಸಹಜವಾಗಿ

ಅಧಿಕಾರ ಸ್ಥಾಪನೆಗೆ ಮುಂದಾದ ಹಾಗೆಯೇ ಯಾವಾಗಲೂ ಮನೆಯಲ್ಲಿಯೇ ಇರುವ ಉಪಉತ್ಪನ್ನದಲ್ಲಿ ಮಾತ್ರವೇ ತೊಡಗಿರುವ, ಸಂತಾನ ಪಡೆಯುವ, ನಿರ್ವಹಿಸುವ ಕಾರಣದಿಂದ ಹೆಣ್ಣಿನ ಸ್ಥಾನಮಾನ ಮೊದಲಿಗೆ ಹಿನ್ನಡೆಯನ್ನು ಅನುಭವಿಸಿತು. ಹೆಣ್ಣಿನ ಬಗೆಗೆ ಹೇಳಲಾಗಿರುವ ಹೇಳಿಕೆಗಳು ಹಾಗೂ ನುಡಿಗಟ್ಟುಗಳು ನೇತ್ಯಾತ್ಮಕ ದೃಷ್ಟಿಕೋನದಿಂದ ಕೂಡಿವೆ. ಅವಳ ಸೃಷ್ಟಿ ಕ್ರಿಯೆಯ, ತಾಳ್ಮೆಯ ಅಗಾಧತೆಯನ್ನು ಸಹಿಸದ ಗಂಡು ಅವಳನ್ನು ನಿರ್ಲಕ್ಷಿಸುವ ಮೂಲಕ ಅವಳ ಪ್ರಭಾವವನ್ನು ತಗ್ಗಿಸುವ ದೃಷ್ಟಿಯಿಂದ ಈ ರೀತಿಯ ಹೇಳಿಕೆಗಳನ್ನು, ನುಡಿಗಟ್ಟುಗಳನ್ನು ಸೃಷ್ಟಿಸಿರುವಂತಿದೆ. ಹೆಣ್ಣನ್ನು ಅಜ್ಞಾತದ, ಅಜ್ಞಾನದ ಮಡಿಲಲ್ಲಿಟ್ಟು ಅವಿದ್ಯಾವಂತಳನ್ನಾಗಿಸಿ ತಾನು ನಿನಗಿಂತ ಮೇಲು ಎಂದು ಸಾಧಿಸಿ ಅವಳನ್ನು ಹೀನಾಯ ಸ್ಥಿತಿಗೆ ತಳ್ಳಲಾಗಿದೆ. ಪ್ರಾದೇಶಿಕ, ವಿದೇಶಿಕ ಮಟ್ಟದ ಚಿಂತನೆಯಲ್ಲೂ ಸಹ ಹೆಣ್ಣಿನ ಬಗೆಗಿನ ನಿಲುವುಗಳು ಸಮಾನವಾಗಿಯೇ ಇರುವುದನ್ನು ಗುರುತಿಸಬಹುದಾಗಿದೆ. ಅವರೆಲ್ಲರ ದೃಷ್ಟಿಯಲ್ಲಿ ಹೆಣ್ಣನ್ನು ಕೆಡುಕು ದೋಷ ಎಂಬಂತೆ ಬಿಂಬಿಸಲಾಗಿದೆ.

ಪ್ರಾರಂಭದ ಮಾತೃಪ್ರಧಾನ ಕುಟುಂಬದಲ್ಲಿ ಶೀಲಪ್ರಾಧಾನ್ಯತೆ ಅಷ್ಟಾಗಿ ಇರಲಿಲ್ಲವೆಂಬುದು ತಿಳಿದು ಬರುತ್ತದೆ. ಪಿತೃಪ್ರಧಾನ ಕುಟುಂಬ ವ್ಯವಸ್ಥೆ ರೂಪುಗೊಳ್ಳತೊಡಗಿದಂತೆ ಕನ್ಯತ್ವ, ಪತಿನಿಷ್ಠೆ, ಶೀಲ ಮೊದಲಾದವುಗಳ ಬಗೆಗೆ ಒತ್ತು ಬೀಳಲು ಪ್ರಾರಂಭವಾಯಿತು. ಏಕೆಂದರೆ ಹಂತ ಹಂತವಾಗಿ ಪುರುಷನಲ್ಲಿ ಪಶುಮಾಲೀಕತ್ವ, ಆಸ್ತಿ ಮಾಲೀಕತ್ವ ಕ್ರೋಡೀಕರಣಗೊಂಡಂತೆ, ಹೆಣ್ಣು ಸಹ ಗಂಡಿನ ಆಸ್ತಿಯಂತಾದಳು. ಹಾಗಾಗಿ ಮಾಲೀಕನ ಬಗೆಗೆ ವಿದೇಯತೆ, ನಿಷ್ಠೆ ಇರಲೇಬೇಕಾದ ಅನಿವಾರ್ಯತೆಯುಂಟಾಯಿತು. ಹೆಣ್ಣಿಗೆ ಸೃಷ್ಟಿಸಾಮರ್ಥ್ಯದ ಸಾಧನ ಪ್ರಕ್ರಿಯೆಗಳಾದ ಮುಟ್ಟು, ಹೆರಿಗೆಗಳನ್ನು ಮೈಲಿಗೆ, ಸೂತಕಗಳೆಂದು ಪರಿಗಣಿಸಿ ಹೆಣ್ಣಿನ ಅಹಮಿಕೆಗೆ ಮುಟ್ಟುಗೋಲು ಹಾಕಿ ತನ್ನ ಮುಷ್ಟಿಯಲ್ಲಿಟ್ಟುಕೊಳ್ಳುವ ಪ್ರಯತ್ನವನ್ನು ಕಾಣಬಹುದಾಗಿದೆ. ಇದರಂತೆಯೇ ಮೇಲ್ವರ್ಗದವರು ದೈಹಿಕ ಶ್ರಮದ ಮೂಲಕ ಉತ್ಪಾದನೆಯಲ್ಲಿ ತೊಡಗಿದ ಶೂದ್ರವರ್ಗವನ್ನು ನಿರ್ಲಕ್ಷಿಸಿ ಅವರಲ್ಲಿಯೇ ತಮ್ಮ ಬಗೆಗೆ ತಮಗೇ ಕೀಳರಿಮೆ ಮೂಡುವಂತೆ ಮಾಡಿದರು. ಹೀಗೆ ಹೆಣ್ಣು ಹಾಗೂ ಶ್ರಮಿಕ ಶೂದ್ರ ವರ್ಗಗಳಿಗೆ ತಮ್ಮ ಶಕ್ತಿಯೇ ತಮಗೆ ಮುಳುವಾಗಿದೆ.

ಜನಪದ ಕಥಾಸಾಹಿತ್ಯದಲ್ಲಿ ಗೀತೆಗಳಷ್ಟೇ ಪ್ರಾಧಾನ್ಯತೆ ತೋರಿದ ಪ್ರಕಾರವೆಂದರೆ ಕಥಾಸಾಹಿತ್ಯ. ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿ ತನ್ನ ಸ್ಥಾನವನ್ನು ಉಳಿಸಿಕೊಂಡಿದ್ದಲ್ಲದೇ ವಿಶ್ವವ್ಯಾಪಿ ಪಸರಿಸಿದೆ. ಇಂತಹ ಒಂದು ಕಥೆಯನ್ನು ಹೇಳುವ ಕಲೆ ಎಲ್ಲರಿಗೂ ಇರುವುದಿಲ್ಲ. ಅದನ್ನು ಮನಮುಟ್ಟಿಸುವ ಕಾರ್ಯ ಬಲ್ಲವರಿಗೇ ಗೊತ್ತು. ಎಲ್ಲರೂ ಎಲ್ಲಾ ಪ್ರಕಾರಗಳಲ್ಲಿ ಪರಿಣಿತಿ ಹೊಂದಲು ಸಾಧ್ಯವಿಲ್ಲ. ಹಾಗಾಗಿ ಒಬ್ಬೊಬ್ಬರು ಒಂದೊಂದು ಕಲೆಯಲ್ಲಿ ಪರಿಣಿತರಾಗಿರುವರು. ಹಾಡು ಹೇಳುವವ ಅದರಲ್ಲಿಯೇ ಪರಿಣಿತಿ ಹೊಂದಿರುತ್ತಾನೆ. ಹಾಗೆ ಕಥೆ ಹೇಳುವವನು ಕಥೆಯಲ್ಲಿ ಪರಿಣಿತಿ ಹೊಂದಿರುತ್ತಾನೆ. ಏಕೆಂದರೆ ಕಥೆಯನ್ನು ನಿರೂಪಿಸಲು ಅಥವಾ ಹೇಳುವಾಗ ಒಬ್ಬರಿಂದ ಆಗದು. ಹಾಗಾಗಿ ಹೇಳುವವನು ಮತ್ತು ಕೇಳುವವನ ಇರಲೇಬೇಕು. ಹಾಡುಗಳು ಹಾಗೇನಿಲ್ಲ. ಒಬ್ಬನೇ ಇದ್ದಾಗಲೂ ಹಾಡಬಹುದು, ಇನ್ನೊಬ್ಬರು ಕೇಳಲಿ, ಬಿಡಲಿ ತನ್ನಷ್ಟಕ್ಕೆ ತಾನೇ ಹಾಡಬಹುದು. ಕಥೆ ಕೇಳುಗರಿಲ್ಲದಿದ್ದರೆ ಕಥೆಯೇ ಪ್ರಾರಂಭವಾಗುವುದಿಲ್ಲ.

ಇಂತಹ ಒಂದು ಕಟ್ಟುಪಾಡುಗಳನ್ನು ಇಟ್ಟುಕೊಂಡು ಬಂದ ಈ ಕಥಾ ಸಾಹಿತ್ಯ ಮಾನವನ ಅಂತರಾಳದಲ್ಲಿ ಹಾಸುಹೊಕ್ಕಾಗಿ ನೆಲೆಯೂರಿದೆ. ಜನಪದರಲ್ಲಿ ಈ ಸಾಹಿತ್ಯ ಈಗಲೂ ಉಳಿದುಕೊಂಡು ಬಂದಿದೆಯೆಂದರೆ ಅದು ಕಥಾ ತಾಂತ್ರಿಕ ನೈಪುಣ್ಯತೆಯ ಕಾರಣಕ್ಕಾಗಿ.

ಕಥೆಗಳು ನಿರ್ದಿಷ್ಟ ವಯಸ್ಸಿನವರಿಗೆ ಮಾತ್ರ ಸೀಮಿತಗೊಂಡಿಲ್ಲ. ಮಕ್ಕಳಿಂದ ಮುದುಕರವರೆಗೆ ಕಥೆಗಳು ವಿವಿಧ ರಂಜನೆ ನೀಡುವುದಲ್ಲದೆ ಬದುಕನ್ನು ಅರ್ಥೈಸುವ ಪ್ರಯತ್ನವಾಗಿದೆ. ಹಲವು ಕಥಾ ಪ್ರಕಾರಗಳು ಮಕ್ಕಳಿಗೆ, ತರುಣರಿಗೆ, ವೃದ್ಧರಿಗೆ ಇಷ್ಟವಾಗುತ್ತವೆ. ಅವರವರ ಅಭಿರುಚಿಗನುಗುಣವಾಗಿ ಋತುಮಾನಕ್ಕೆ ತಕ್ಕಂತೆ ಕಾಲ ವಯೋಮಾನಕ್ಕೆ ತಕ್ಕಂತೆ ಹೇಳಲ್ಪಡುತ್ತವೆ.

ಕಥೆಗಳು ಬಿಚ್ಚಿಕೊಳ್ಳುವ ತಾಣಗಳೆಂದರೆ ಊರ ದೇವರ ಗುಡಿ, ಜಗಲಿ ಕಟ್ಟೆ, ಸುಗ್ಗಿಯ ಕಾಲ ಮುಗಿದ ಸಂದರ್ಭಗಳಲ್ಲಿ. ಕಥೆಗಳ ಹುಟ್ಟಿನ ಮೂಲವನ್ನು ಕಂಡುಹಿಡಿಯುವುದು ತುಂಬಾ ಕಷ್ಟ.. ಆದಿಮಾನವನ ಕಾಲದಿಂದಲೂ ಇವುಗಳ ನಿರೂಪಣೆಯಾಗುತ್ತಾ ಬಂದಿರಬೇಕೆಂದು ವಿಚಾರ ಮಾಡಬಹುದು. ಅಲೆಮಾರಿಯಾಗಿ ಕಾಡು-ಮೇಡು ಬೇಟೆಗಾಗಿ ಅಲೆಯುತ್ತಾ ಬಂದ ಆದಿಮಾನವ ತನಗಾದ ಸಿಹಿ-ಕಹಿ ಅನುಭವಗಳನ್ನು ಕಥೆಯ ರೂಪದಲ್ಲಿ ಹೆಣೆದು ಮನರಂಜನೆಗಾಗಿ ತನ್ನ ಹೆಂಡತಿ, ಮಕ್ಕಳು, ಸುತ್ತಲಿನವರ ಮುಂದೆ ಹೇಳುತ್ತಾ ಬಂದಿರಬೇಕು. ಅದನ್ನೇ ಗುಹೆ, ಬೇಟೆಯ ಆಯುಧ ಮುಂತಾದವುಗಳ ಮೇಲೆ ಚಿತ್ರ ರೂಪದಲ್ಲಿ ಮೂಡಿಸಿರಬೇಕು. ಕಥೆಗಳು ಆದಿಮಾನವನ ಸಂಪ್ರದಾಯ ಮತ್ತು ಸಂಸ್ಕೃತಿಯ ದರ್ಶನ ನೀಡಬಲ್ಲ ದೂರದರ್ಶಕ ಯಂತ್ರಗಳಾಗಿವೆ.[೬೭]

ಕಥೆಗಾರನಲ್ಲಿ ಜ್ಞಾನ ಇರುವುದು ಅವಶ್ಯ. ಒಬ್ಬನು ಒಂದು ಕಥೆಯನ್ನು ಸ್ವಲ್ಪದರಲ್ಲಿಯೇ ಹೇಳಿ ಮುಗಿಸಿದರೆ, ಮತ್ತೊಬ್ಬ ಅದೇ ಕಥೆಯನ್ನು ಸುದೀರ್ಘವಾಗಿ ರಸವತ್ತಾಗಿ ವರ್ಣಿಸುತ್ತಾನೆ. ಬೇಸರ ಬಂದ ವೇಳೆ ಬೇಸರ ಕಳೆಯುವುದೇ ಕಷ್ಟವಾದಾಗ, ಸುಗ್ಗಿಯ ಕೆಲಸಗಳೆಲ್ಲಾ ಮುಗಿದು ಹಾಯಾಗಿ ಕುಳಿತಾಗ ಇಂತಹ ಕಥೆಗಾರರನ್ನು ಎದುರಿಗೆ ಕುಳ್ಳಿರಿಸಿಕೊಂಡು ಹಳ್ಳಿಗರು ಕಥಾವಲೋಕನ ಮಾಡುವರು. ಇಂತಹ ಕಥೆಗಳು ಹೈದರಾಬಾದ್ ಕರ್ನಾಟದಲ್ಲಿ ಹೇರಳವಾಗಿ ಸಿಗುತ್ತವೆ. ಇಂತಹ ಕಥಾ ಸಾಹಿತ್ಯದಲ್ಲಿ ಬರುವ ಹೆಣ್ಣಿನ/ಗಂಡಿನ ಸ್ವರೂಪವನ್ನು ಅವಲೋಕಿಸುವುದು ಸೂಕ್ತ. ಹೆಣ್ಣು-ಗಂಡು ಇಲ್ಲದೆ ಕಥೆಗಳು ಸೃಷ್ಟಿಕಾರ್ಯ ಜಟಿಲವಾದುದು.

ಗಂಡಿನಲ್ಲಿರಬಹುದಾದ ಗುಣಗಳು, ಹೆಣ್ಣಿನಲ್ಲಿರುವ ಗುಣಗಳನ್ನಾಧರಿಸಿ ಗಂಡು ಹೆಣ್ಣು ಎಂಬ ನಿರ್ಧಾರ ವಾಗುತ್ತದೆ. ಮಗು ತಾಯಿಯ ಗರ್ಭದಲ್ಲಿರುವಾಗ ತಾಯಿ ಸೇವಿಸುವ ಆಹಾರವನ್ನು ಮಗು ಸೇವಿಸುತ್ತದೆ. ಅದು ಹೆಣ್ಣು ಆಗಿರಲಿ, ಅಥವಾ ಗಂಡು ಆಗಿರಲಿ ತಾಯಿ ಗರ್ಭದಿಂದ ಕರುಳು ಬೇರ್ಪಡಿಸಿ ಹೊರ ಜಗತ್ತಿಗೆ ಬಂದಾಗ ಅದಕ್ಕೆ ಗಂಡು-ಹೆಣ್ಣು ಎಂಬ ಬೇಧ ಭಾವಗಳಿರುವುದಿಲ್ಲ. ಅಂತಹ ಮಗುವನ್ನು ನಾವು ಖಾಲಿ ಮಡಕೆಗೆ ಹೋಲಿಸಬಹುದು. ತಮ್ಮ ಪರಿಸರದಲ್ಲಿನ ವಾತಾವರಣಕ್ಕೆ ಅನುಗುಣವಾಗಿ ಮಗು ಬೆಳೆಯುತ್ತಾ ಗಂಡು ಹೆಣ್ಣಿನ ಸ್ವರೂಪ ಗೊತ್ತಾಗುತ್ತದೆ.

ಗಂಡಸು ಮೊದಲಿನಿಂದಲೂ ಹೊಸದನ್ನು ಕಟ್ಟುವವನು ಹಣ್ಣುಗಳನ್ನು ಮರದಿಂದ ಬೀಳಿಸಲು ಪ್ರಾಣಿಗಳನ್ನು ಕೈಯಲ್ಲಿ ಆತ ಹಿಡಿದು ದೊಣ್ಣೆ ಲೋಕದ ಮೇಲೆ ಅವನ ಹಿಡಿತವನ್ನು ಹೆಚ್ಚಿಸುವ ಉಪಕರಣ ವಾಯಿತು. ತನ್ನನ್ನು ತಾನು ಸಮುದ್ರಕ್ಕೆ ಹೋಗಿ ಮೀನು ಹಿಡಿಯುವ ಕೆಲಸಕ್ಕೆ ಅಷ್ಟೇ ಸೀಮಿತವಾಗಲಿಲ್ಲ. ನೀರಿನ ಮೇಲೆ ಹಿಡಿತ ಸಾಧಿಸಲು ಮರದ ಕಾಂಡಗಳನ್ನು ಕೊರೆದು ದೋಣಿಗಳನ್ನು ಮಾಡಿಕೊಂಡನು. ಲೋಕದಿಂದ ಬೇಕಾದ್ದನ್ನು ಪಡೆಯಲು ಲೋಕದ ಮೇಲೆ ಹಿಡಿತ ಸಾಧಿಸಲು ವಿಸ್ತರಿಸಿಕೊಂಡನು. ಅದಕ್ಕಾಗಿ ವ್ಯಕ್ತಿಯಾಗಿ ತನ್ನ ವ್ಯಕ್ತಿತ್ವ ಸಂಪೂರ್ಣವಾಗುವ ದಾರಿಯಲ್ಲಿ ಸಾಗಿದ ಬದುಕಿಗಾಗಿ ಹೊಸದನ್ನು ಕಟ್ಟಲು ಆರಂಭಿಸಿದ ವರ್ತಮಾನವನ್ನು ದಾಟಿ ಭವಿಷ್ಯದ ಕಡೆ ತೆರೆದುಕೊಂಡು ಅದಕ್ಕಾಗಿ ಮೀನುಗಾರಿಕೆ ಬೇಟೆ ಮುಂತಾದ ಚಟುವಟಿಕೆಗಳು ಪಾವಿತ್ರತೆಯನ್ನು ಪಡೆದುಕೊಂಡವು. ಅಲ್ಲಿ ಜಯಗಳಿಸಿದಾಗ ಹಬ್ಬ-ಉತ್ಸವಗಳನ್ನು ಆಚರಿಸಲು ಪ್ರಯತ್ನಿಸಿದ. ಹೀಗೆ ಗಂಡಸು ಪ್ರಕೃತಿಯನ್ನು ಮೀರಲು ಸಿದ್ಧನಾದ. ಅಲೆಮಾರಿ ವೃತ್ತಿಯಿಂದ ಹೊರಬಂದು ನೆಲೆಯೂರಲು ಅವಕಿಸಿದ. ಕೃಷಿಗಾಗಿ ಒಂದೆಡೆ ಭೂಮಿಯನ್ನು ಉಳುಮೆ ಮಾಡಲು ಪ್ರಾರಂಭ ಮಾಡಿದ. ಮಹಿಳೆಯು ಮೊದ ಮೊದಲು ಕೃಷಿ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸಿದಳು. ಆದರೆ ಹೆಣ್ಣು ಸಹಜ ಸ್ವಭಾವಗಳಿಂದ ಗರ್ಭಧಾರಣೆ, ಮಕ್ಕಳ ಹೆರಿಗೆ, ಲಾಲನೆ-ಪಾಲನೆ, ಪೋಷಣೆ ಸಂದರ್ಭದಲ್ಲಿ ಗಂಡಸಿನಂತೆ ದುಡಿಯುವುದು ಕಷ್ಟಸಾಧ್ಯವಾಯಿತು. ಮಕ್ಕಳ ಸಂತಾನದಲ್ಲಿ ಏರಿಕಾಕ್ರಮದಲ್ಲಿ ಸಾಗಿತು. ಇದರ ಪರಿಣಾಮ ವಂಶವೃದ್ಧಿ ಬೆಳೆಯುತ್ತಾ ಸಾಗಿತು.

ಈ ಹಿನ್ನೆಲೆಯಲ್ಲಿ ಗಂಡಸು ಕಾಡನ್ನು ಕಡಿದು ಹೆಚ್ಚುವರಿ ಭೂಮಿ ಮಾಡಿ ಉಳುಮೆ ಮಾಡಲು ತವಕಿಸಿದ ಹೀಗೆ ಕೃಷಿ ಚಟುವಟಿಕೆಯನ್ನು ವಿಸ್ತರಿಸಬೇಕಾಯಿತು. ತನಗಿಂತ ದುರ್ಬಲ ಗಂಡಸನ್ನು ಗುಲಾಮ ರನ್ನಾಗಿ ಮಾಡಿಕೊಂಡು, ಆ ಮೂಲಕ ಹೆಚ್ಚು ಹೆಚ್ಚು ಉತ್ಪಾದನೆಯಲ್ಲಿ ತೊಡಗಿದ. ಕೃಷಿಗೆ ಬೇಕಾದ ಉಪಕರಣಗಳನ್ನು ಪರಿಸರದಲ್ಲಿ ದೊರೆಯುವ ಮರಗಳನ್ನು ಕಡಿದು ಸಲಕರಣೆಗಳನ್ನು ಸಿದ್ಧಪಡಿಸಿಕೊಂಡ. ಇದರಿಂದ ಕೃಷಿಚಟುವಟಿಕೆಯಲ್ಲಿ ವಿಪರೀತ ಏರಿಕೆಯನ್ನು ಕಂಡುಕೊಂಡು ಮಾರಾಟಕ್ಕೆ ಅಣಿಯಾದನು. ಹೀಗೆ ಗಂಡಸುನಲ್ಲಿ ತರ್ಕಬದ್ಧ ಆಲೋಚನೆ, ಚಿಂತನೆ ಮುಂತಾದವು ಮೈತಳೆಯತೊಡಗಿದವು. ವಿಶ್ವದ ಕಲ್ಪನೆಯೇ ಬದಲಾಯಿತು. ಹೆಣ್ಣಿಗೆ ಅಧಿಕಾರ ಅಥವಾ ಮೂಲ ಪಿತೃಪ್ರಧಾನ ಕುಟುಂಬ ಇದ್ದಿದ್ದು, ದುಡಿಯುವ ಗುಲಾಮಗಿರಿಯಿಂದ ಆದಾಯದಲ್ಲಿ ಹೆಚ್ಚಳ ಕಂಡ ಸ್ತ್ರೀಯನ್ನು ಕೆಲಸದಿಂದ ಹೊರಗಿಡಲು ಪ್ರಾರಂಭಿಸಿದ ದುಡಿಮೆಯ ಫಲಕ್ಕಿಂತ ಗುಲಾಮರ ದುಡಿಮೆ ಹೆಚ್ಚು ಆದಾಯ ತರುವಂಥದಾದ್ದರಿಂದ, ಬುಡಕಟ್ಟು ಸಮಾಜದಲ್ಲಿ ಹೆಂಗಸಿಗಿದ್ದ ಆರ್ಥಿಕ ಪಾತ್ರವು ಅವಳ ಕೈತಪ್ಪಿ ಹೋಯಿತು. ಗುಲಾಮರೊಡನೆ ಯಜಮಾನನಾಗಿ ಗಂಡಸು ತನ್ನ ಹೊಸ ಸಾಧ್ಯತೆಯನ್ನು ಕಂಡುಕೊಂಡ ಅದು ಹೆಂಗಸಿನ ಮೇಲೆ ಅವನಿಗಿದ್ದ ಅಧಿಕಾರಕ್ಕಿಂತ ಮಿಗಿಲಾದುದೆಂದು ಅವನಿಗೆ ಅರಿವಾಯಿತು. ಗಂಡಸ್ಸಿಗೆ ಹೆಣ್ಣಿನ ಫಲವಂತಿಕೆಯ ಕಾರಣವಾಗಿ ಅವಳ ಬಗ್ಗೆ ಭಯ ಗೌರವಗಳು ಇದ್ದವು. 'ಅನ್ಯ'ಳಾಗಿದ್ದರಿಂದ ಅನ್ಯದ ತಲ್ಲಣಗೊಳಿಸುವ ಚಹರೆಗಳನ್ನು ಅವಳು ಹೊಂದಿದ್ದಳು. ಹೀಗಾಗಿ ಹೆಣ್ಣು ಗಂಡಸನ್ನು ತನ್ನ ಹಿಡಿತದಲ್ಲಿರಿಸಿಕೊಂಡಿದ್ದಳು. ಆದರೆ ಅದೇ ಸಮಯದಲ್ಲಿ ತಾನೂ ಆತನನ್ನು ಅವಲಂಬಿಸಿದ್ದಳು. ಒಡೆಯ ಗುಲಾಮರ ನಡುವಣ ಈ

ಪರಸ್ಪರಾವಲಂಬನೆಯ ಸಂಬಂಧ ಅವಳಿಗೆ ಒಂದು ಬಗೆಯ ನಿರಾಳತೆಯನ್ನು ತಂದಿತ್ತು. ಇದರಿಂದಾಗಿಯೇ ಬಿಡುಗಡೆಯ ಭಾವವನ್ನು ಅವಳು ಹೊಂದಿದ್ದಳು. ಯಜಮಾನ ಕ್ರೂರ ಅಧಿಕಾರ ಪ್ರದರ್ಶಿಸುವ ಮೂಲಕವೇ ತನ್ನ ಹೆಮ್ಮೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದನು. ಈ ಹೆಮ್ಮೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದನು. ಈ ಹೆಮ್ಮೆಯ ಹೆಚ್ಚಳಕ್ಕಾಗಿ ಹೆಂಗಸನ್ನು ಗುರಿಮಾಡಿಕೊಂಡ. ಅವಳ ಮೇಲಿಂದ ಹಿಡಿತ ಹೆಚ್ಚಿದಷ್ಟು ಆತ ಬಲಶಾಲಿಯಾಗುತ್ತಿದ್ದ. ಅವಳು ಕುಗ್ಗುತ್ತಿದ್ದಳು.[೬೮]

ಹೆಣ್ಣಿಗೆ ಸ್ತ್ರೀ, ಮಹಿಳೆ, ಅಬಲೆ, ನಾರಿ ಹೀಗೆ ಹಲವಾರು ಗುಣವಾಚಕಗಳಲ್ಲಿ ಕರೆದು ಆದಿ ಕಾಲ ದಿಂದಲೂ ಶೋಷಿತಳನ್ನಾಗಿ ಮಾಡಲಾಗಿದೆ. ಹೆಣ್ಣಿಗೂ ತನ್ನ ಬದುಕಿನಲ್ಲಿ ಅಪಾರ ಹಂಬಲವಿರುತ್ತದೆ. ಅವರ ಆಸೆ ಆಕಾಂಕ್ಷೆಗಳಿಗೆ ಧಕ್ಕೆ ಉಂಟಾದಾಗ ಅವಳು ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತಾಳೆ. ಈ ಹೋರಾಟ ಅದು ನೇರವಾಗಿ ಪ್ರತಿಭಟನಾತ್ಮಕವಾಗಿಯಾದರೂ ಆಗಿರಬಹುದು ಅಥವಾ ಬೇರೆ ಬೇರೆ ಸಂಕೇತ ಕ್ರಿಯೆಗಳ ರೂಪದ್ದಾದರೂ ಆಗಿರಬಹುದು. ಇಲ್ಲವೆ ಸಾಹಿತ್ಯ ರೂಪದಲ್ಲಿ ಅಭಿವ್ಯಕ್ತವಾಗಬಹುದು. ಸಮಾಜದ ಸಂಪ್ರದಾಯಗಳ ವಿರುದ್ಧ ನೇರವಾಗಿ ಬಂಡೆದ್ದು ಹೋರಾಟ ಮಾಡಲಾಗದವರು ತಮ್ಮ ಸಾಹಿತ್ಯದಲ್ಲಿ ತೋಡಿಕೊಂಡ ಸಂಕಟ ನೋವುಗಳನ್ನು ಅಧ್ಯಯನದಲ್ಲಿ ಒಳಗು ಮಾಡಿಕೊಳ್ಳಲಾಗುವುದು. ಮಹಿಳಾ ಲೋಕವನ್ನು ಗ್ರಹಿಸುವ ಬಗೆ ಇಂದು ಬದಲಾಗುತ್ತಿದೆ. ಹೆಣ್ಣಿನ ಬದುಕನ್ನು ಕುರಿತು ಚಿಂತಿಸುವ, ಶೋಧಿಸುವ ಮತ್ತು ಕಟ್ಟುವ ಪ್ರಯತ್ನ ನಡೆಯುತ್ತಿದೆ. ಲಿಂಗಸಮಾನತೆ ಸ್ಥಾಪಿಸುವ ಕಾಳಜಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಅಷ್ಟೇ ಅಲ್ಲ ವೈಯಕ್ತಿಕ ನೆಲೆಯಲ್ಲೂ ಪ್ರಕಟವಾಗುತ್ತಿದೆ. ಈ ಎಲ್ಲಾ ಪ್ರಯೋಗ ಪ್ರಕ್ರಿಯೆಗಳು ಮಹಿಳಾ ಸ್ಪಂದನದ ಪರಿಸರ ನಿರ್ಮಾಣ ಮಾಡುವಲ್ಲಿ ಒಂದಷ್ಟು ಯಶಸ್ವಿಯಾಗಿದೆ. ಇದು ಎಲ್ಲ ಸ್ತ್ರೀಪರ ಮನಸ್ಸುಗಳಿಗೆ ಸಮಾಧಾನ ತಂದಿಟ್ಟ ಸಂಗತಿ. ಈ ಸಮಾಧಾನ ಕಾಣುವ ಸಂದರ್ಭ ದಲ್ಲೇ ಹೊಸ ಆತಂಕದ ಭಯ ಕಾಡತೊಡಗಿದೆ. ಇದು ಲಿಂಗ ನೆಲೆಯಲ್ಲಿ ಮಹಿಳೆಯರನ್ನು ಸಾಮೂಹಿಕವಾಗಿ ಶಕ್ತಿಯಾಗಿ ಕಟ್ಟುವ ಮತ್ತು ಲಿಂಗ ವ್ಯವಸ್ಥೆಯ ನಿರಚನದ ಆಶಯಕ್ಕೆ ಸವಾಲು ಒಡ್ಡುತ್ತಿದೆ. ಮಹಿಳಾ ಸಂಘಶಕ್ತಿಯನ್ನು ಮುರಿಯುವ ಹಂತದಲ್ಲಿ ಕೋಮುವಾದಿತನ, ಜಾತಿವಾದಿತನಗಳು ಅಪಾಯಕಾರಿಯಾಗಿ ಬೆಳೆಯುತ್ತಿವೆ. ಮಹಿಳೆ ಪಡೆದುಕೊಂಡ ಉದ್ಯೋಗ, ಅಧಿಕಾರಗಳು ನಿರೀಕ್ಷೆ ಬದಲಾಗಿ ಮಹಿಳೆಯರಲ್ಲಿ ಸೀಳುಗಳನ್ನು ಸೃಷ್ಟಿಸಲು ಕಾರಣವಾದುದು ದೊಡ್ಡ ದುರಂತ.

ಜನಪದ ಸಾಹಿತ್ಯದ ಬಹುಮುಖ್ಯ ಹಾಗೂ ಜನಪ್ರಿಯ ಪ್ರಕಾರ 'ಜನಪದ ಕಥಾ ಸಾಹಿತ್ಯ' ಈ ಸಾಹಿತ್ಯವನ್ನು ಸ್ತ್ರೀ–ಪುರುಷರ ಪ್ರಕಾರ ಎಂದು ನಿಖರವಾಗಿ ಹೇಳುವುದು ಅಸಾಧ್ಯವಾದರೂ ಅದು ಬಹುತೇಕ ಮಹಿಳಾ ಅಭಿವ್ಯಕ್ತಿಯೇ ಆಗಿದೆ. ಆದರೂ ಪುರುಷರ ಮೇಲುಗೈ ಎದ್ದು ಕಾಣುತ್ತಿದೆ. ಈ ಪ್ರಕಾರವೊಂದರ ಸೃಷ್ಟಿಕರ್ತ ಅಥವಾ ಕರ್ತೃ ಯಾರೆಂಬ ಪ್ರಶ್ನೆಗಿಂತ ಆ ಪ್ರಕಾರದ ಪ್ರದರ್ಶನಕಾರರು ಯಾರು ಎನ್ನುವುದು ಸಂವೇದನೆಯನ್ನು ತಿಳಿಯುವಲ್ಲಿ ಮಹತ್ವದ್ದಾಗುತ್ತದೆ. ಭಾರತದ ಬಹುರೂಪಿ ಸಂಸ್ಕೃತಿ ಮಾತೃರೂಪಿಯಾದುದು. ಸಾಮಾಜಿಕ ಸಾಂಸ್ಕೃತಿಕ ಸ್ತರದಲ್ಲಿ ಅದು ಇಂದೂ ಜೀವಂತವಾಗಿದೆ. ಕನ್ನಡ ಜಾನಪದದಲ್ಲಿ ಅದರ ಗಾಢವಾದ ಚಹರೆಯನ್ನು ಗುರುತಿಸುವುದು ಸತೀಕೇಂದ್ರಿತವಾದ ಮಾತೃಪ್ರಧಾನ

ಸಮಾಜದ ಹೆಣ್ಣಿನ ಸ್ಥಾನಮಾನ ಪುರುಷ ಕೇಂದ್ರಿತ ಸಮಾಜಕ್ಕಿಂತ ತೀರಾ ಭಿನ್ನವಾಗಿದೆ. ಇಲ್ಲಿ ಹೆಣ್ಣಿನ ಹುಟ್ಟು ಬದುಕು ಅತ್ಯಂತ ಅಗತ್ಯದ ಹಾಗೂ ಗೌರವದ ಸಂದರ್ಭವಾಗಿದ್ದು ನಿರ್ಬಂಧವಿಲ್ಲದ ಸಹಜಮುಕ್ತ ಸ್ಥಿತಿಯದಾಗಿರುತ್ತದೆ. ಹೀಗೆ ಸಮಾಜದ ಹಾಗೂ ಕಥಾ ಸಾಹಿತ್ಯದ ದೃಷ್ಟಿಯಿಂದ ಹೆಣ್ಣು ಗಂಡಿನ ಪರಿಕಲ್ಪನೆಯನ್ನು ನೋಡಬಹುದಾಗಿದೆ. ಇವುಗಳ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕದ ಜನಪದ ಕಥಾ ಸಾಹಿತ್ಯದಲ್ಲಿ ಹೆಣ್ಣು ಗಂಡಿನ ಸ್ವರೂಪವನ್ನು ತಿಳಿಯುವುದು ಅತಿ ಮುಖ್ಯವಾಗಿದೆ.

'ಬಂಗಾರ ಕೂದಲು ರಾಜಕುಮಾರಿ' ಕಥೆಯಲ್ಲಿ ಬಂಗಾರ ಕೂದಲಿನ ರಾಣಿಯ (ಸೋನಾರಾಣಿ) ತಂದೆ ರಾಜ ಊರಿನ ಒಳಿತಿಗಾಗಿ ಬಾವಿಯನ್ನು ತೆಗೆಸುತ್ತಾನೆ. ಆದರೆ ಬಾವಿಯಲ್ಲಿ ನೀರೇ ಬರಲಿಲ್ಲ. ಅದಕ್ಕಾಗಿ ತನಗಿದ್ದ ಒಬ್ಬ ಮಗಳನ್ನು 'ಮದುವೆ'ಯ ನೆಪದಲ್ಲಿ ಅವಳ ತೂಕದಷ್ಟು ಚಿನ್ನಾಭರಣ ಆಪೇಕ್ಷಿಸಿದ. ಅವಳ ತೂಕದಷ್ಟು ತೆರವು ಕೊಟ್ಟರೆ ಅವಳನ್ನು ಕೊಟ್ಟು ಮದುವೆ ಮಾಡಿಕೊಡುವುದಾಗಿ ಪೋಟೋ ತೆಗೆದು ಬಾವಿ ಹತ್ತಿರ ಪ್ರಸಾರಕ್ಕೆ ಇಟ್ಟ. ಕೆಲವರು ತೆರವು ಕಟ್ಟಕ್ಕಾಗದೆ ಹಿಂದಾದರು. ಒಬ್ಬ ರಾಜ ನಾನು ಅವಳ ತೂಕದಷ್ಟು ಹಣ ಕೊಡುವುದಾಗಿ, ಅವಳನ್ನು ಮದುವೆಯಾಗುವುದಾಗಿ ತಿಳಿಸಿದ. ಅವಳ ತೂಕಕ್ಕೆ ತನ್ನಲ್ಲಿರುವ ಸಂಪತ್ತನ್ನೆಲ್ಲಾ ತಂದಿಟ್ಟ, ಆದರೆ ಅವಳ ತೂಕಕ್ಕೆ ಸರಿಹೋಗಲಿಲ್ಲ. ತಾಯಿ, ತಂಗಿಯನ್ನು ಒತ್ತಿಟ್ಟು ಬಂಗಾರ ಹಾಕಿದ; ಅದು ಹೊಂದಾಣಿಕೆ ಆಗಲಿಲ್ಲ. ಕೊನೆಗೆ ತನ್ನ ರಾಜ್ಯವನ್ನೇ ಒತ್ತಿಟ್ಟು ಬಂಗಾರ ತಂದು ಇಟ್ಟ; ಆಗ ಅವಳ ತೂಕಕ್ಕೆ ಸರಿ ಹೋಯ್ತು. ವಚನದಂತೆ ಅವಳನ್ನು ಮದುವೆಯಾಗಿ ಕುದುರೆ ಮೇಲೆ ಕೂರಿಸಿಕೊಂಡು ಹೊರಟ. ಇಲ್ಲಿ ಸೋನಾರಾಣಿ ಮನಸ್ಥಿತಿ ಅರ್ಥ ಮಾಡಿಕೊಳ್ಳದೇ ತಂದೆ ಮಾರಾಟದ ವಸ್ತುವಾಗಿ ಇಡುತ್ತಾನೆ. ರಾಜನಿಗೆ ತನ್ನ ಮಗಳಿಗಿಂತ ತನಗೆ ರಾಜ್ಯವೇ ಮುಖ್ಯ ಎಂಬುದು ಗೊತ್ತಾಗುತ್ತದೆ.

ಮದುವೆಯಾಗಿ ಕುದುರೆ ಮೇಲೆ ಕೂತು ಬಾಲ್ಕಿ ಪಟ್ಟಣಕ್ಕೆ ಬರುತ್ತಾರೆ. ಅವರಲ್ಲಿ ಒಂದು ಕಾಸು ಹಣವಿರಲಿಲ್ಲ. ಊಟಕ್ಕೂ ಕಷ್ಟವಾಯಿತು. ಕಷ್ಟವನ್ನು ತನ್ನ ಹೆಂಡತಿಗೆ ಹೇಳಿದ ಅದಕ್ಕೆ ರಾಣಿ ಗಲ್ಲಾಪೆಟ್ಟಿಗೆ ಇಸುಕೊಂಡು ನೆತ್ತಿಯ ಮೇಲಿನ ಬಂಗಾರದ ಕೂದಲನ್ನು ಕಿತ್ತು ಅದರಲ್ಲಿ ಇಟ್ಟು ಹೇಳಿದಳು. ಒಂದು ಕೂದಲನ್ನು ಯಾರಿಗಾದ್ರು ಕೊಟ್ಟು ಸೌದೆ ತನ್ನಿ, ಇನ್ನೊಂದು ಕೂದಲು ಕೊಟ್ಟು ಹಣ ತನ್ನಿ ಅಂತ; ಅದರಂತೆ ದಿವಾಳಿ ರಾಜ ಮಾರಾಟ ಮಾಡಲು ಹೊರಟ ಅಲ್ಲಿ ರಾಜನ ಮನೆಗೆ ಹೋಗಿ ತೋರಿಸಿ ಹೇಳಿದ ಅವಳ ಕೂದಲೇ ಇಷ್ಟು ಮಿಂಚುತ್ತಿರುವಾಗ ಅವಳು ಎಷ್ಟು ಸುಂದರವಾಗಿ ಇರಬಹುದೆಂದು ಊಹಿಸಿ ಅವನಿಗೆ ಹಣ ಕೊಟ್ಟು ಕಳುಹಿಸುತ್ತಾನೆ. ನಂತರದಲ್ಲಿ ಅವಳನ್ನು ಅಪಹರಿಸುತ್ತಾನೆ. ನಂತರ ಅವಳು ರಾಜನ ಹಿಡಿತದಿಂದ ತಪ್ಪಿಸಿಕೊಂಡು ಹೊರಬರುತ್ತಾಳೆ. ಬಂದ ಸಂದರ್ಭದಲ್ಲಿ ಹಲವಾರು ತೊಂದರೆಗಳನ್ನು ಕೊಡುವಂಥದ್ದು, ಅದರಿಂದ ರಾಣಿ ಜಾಣತನದಿಂದ ತಪ್ಪಿಸಿಕೊಂಡು ಬಂದು ಮತ್ತೊಂದು ಪಟ್ಟಣದ ರಾಜನ ಮನೆಯಲ್ಲಿ ಗಂಡು ವೇಷಧಾರಿಯಾಗಿ ಸೇರಿಕೊಳ್ಳುತ್ತಾಳೆ. ಇತ್ತ ತನ್ನ ಗಂಡ ಭಿಕ್ಷಾಟನೆ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ. ಸೋನಾರಾಣಿ, ಸೋನಾರಾಣಿ ಎಂದು ಪರಿತಪಿಸುತ್ತಾ ಹೂಮಾರುಗಿತ್ತಿ ಅಜ್ಜಿಯ ಮನೆಯಲ್ಲಿಯಲ್ಲಿಯೇ ಉಳಿದುಕೊಂಡಿದ್ದ. ರಾಜ್ಯ ಸಂಪತ್ತು, ತೆರವು ಕೊಟ್ಟು ತಂದ ಹೆಂಡತಿಯನ್ನು ಕಳೆದುಕೊಂಡು ಚಿಂತಾಮಗ್ನನಾಗಿದ್ದ.

ಕೊನೆಯಲ್ಲಿ ಸೋನಾರಾಣಿ ಮತ್ತು ತನ್ನ ಗಂಡ ಇಬ್ಬರು ಒಂದಾದರು. ಆದರೆ ಸೋನಾರಾಣಿ ಮೇಲೆ ಅವನಿಗೆ ಸಂಶಯ. ಪರೀಕ್ಷೆ ಮಾಡ್ತಿರೇನ್ರಿ ಎಂದು ಹಲವಾರು ಗುರುತುಗಳನ್ನು ಹೇಳಲಾಗಿ ಇಬ್ಬರು ಒಂದಾದರು. ಕಳೆದುಕೊಂಡ ರಾಜ್ಯವನ್ನು ಮರು ಸಂಪಾದಿಸಿ ಸಂಸಾರ ದೂಡತೊಡಗಿದರು. ಪುನಃ ತಾವು ಇದ್ದ ಸ್ವಂತ ಊರಿಗೆ ಹೋಗುತ್ತಾರೆ. ಸೋನಾರಾಣಿ ಸ್ವರೂಪದಲ್ಲಿ ಮತ್ತು ಗುಣದಲ್ಲಿ ಶ್ರೀಮಂತಳೇ ಸರಿ. ಸೋನಾರಾಣಿಯನ್ನು ಕಳೆದುಕೊಂಡ ಗಂಡ ಪರಿತಪಿಸಿದ. ಆತ ವ್ಯಕ್ತಪಡಿಸುವ ವೇದನೆ ಯನ್ನು ಗಮನಿಸಿದರೆ ಆತ ಅವಳ ಮೇಲೆ ಇಟ್ಟ ಪ್ರೀತಿ ವಾತ್ಸಲ್ಯ ಗೊತ್ತಾಗುತ್ತದೆ. ಈ ಹಿನ್ನೆಲೆಯಲ್ಲಿ ಆತನ ಗುಣ ಸ್ವಭಾವ ಉತ್ತಮವಾದದ್ದೇ ಆಗಿದೆ.

ಬಡಿಗ್ಯಾನ ಜಾಣತನ ಕಥೆಯಲ್ಲಿ ಬಡಿಗಾರ ಮೋನಪ್ಪ ಬಹಳ ಶ್ರೀಮಂತ. ಸಿಕ್ಕಾಪಟ್ಟೆ ಹಣ, ಸಂಪತ್ತು ಸಂಪಾದಿಸಿದ್ದ. ಆತನಿಗೊಬ್ಬ ಮಗನಿದ್ದ. ಅವನಿಗೆ ಮದುವೆ ಮಾಡಿದ. ಸೊಸೆ ಬಂದ ಸ್ವಲ್ಪ ಕಾಲದಲ್ಲಿ ಮೋನಪ್ಪ ಮತ್ತು ಹೆಂಡತಿ ಇಬ್ಬರು ತೀರಿಕೊಂಡರು. ಮಗನಿಗೆ ಅಪ್ಪನ ವೃತ್ತಿ ಮುಂದುವರೆಸುವ ಆಸೆ. ಆದರೆ ಹೆಂಡತಿ ನೀವು ಕೆಲಸ ಮಾಡೋದು ಬ್ಯಾಡ ರೀ! ಅತ್ತೆ ಮಾವ ಸಂಪಾದಿಸಿರೋ ಆಸ್ತಿ ಬಹಳ ಇದೆ, ಕೂತು ಉಂಡರೂ ಸವೆಯೋ ಹಾಗಿಲ್ಲ ಅಂತ ಹೇಳಿ ಗಂಡನನ್ನು ದಾರಿ ತಪ್ಪಿಸಿದಳು. ಹೀಗೆ ೧೨-೧೫ ವರ್ಷ ಕೂತೇ ಉಂಡರು; ಮನೆಯಲ್ಲಿನ ಸಂಪತ್ತೆಲ್ಲಾ ಕರಗಿಹೋಯ್ತು. ಕೊನೆಗೆ ಅವರ ಸಂಸಾರ ಬೀದಿಗೆ ಬರಬೇಕಾಯಿತು. ಬಡಿಗಾರ ಹೆಂಡತಿಯ ಮುಖವನ್ನು ಮದುವೆಯಲ್ಲಿ ನೋಡಿದವರು ಕೊನೆಗೆ ಇಂದು ನೋಡ್ತಾ ಇದ್ದಾರೆ. ಕಾಲ ಕಳೆದಂತೆ ಊಟಕ್ಕೆ, ಬಟ್ಟೆಗೆ ತೊಂದರೆ ಆಯ್ತು. ಕೊನೆಗೆ ರಾಜನ ಮನೆ ಸೇರಿದರು. ರಾಜನ ಆಶ್ರಯದಲ್ಲಿ ಕೆಲಸ ನಿರ್ವಹಿಸುತ್ತಾ ಹೊಟ್ಟೆ ಹೊರೆಯುತ್ತಿದ್ದರೆ, ಬಡಿಗಾರನ ಹೆಂಡತಿಗೆ ಸಾಕಾಗಿ ತನ್ನ ತವರಿಗೆ ಹೋಗಿ ಅಣ್ಣನ ಹತ್ತಿರ ಕಷ್ಟವೆಲ್ಲಾ ಹೇಳಿಕೊಂಡು 'ಆಯೇರಿ' ತಗೊಂಡು ಬರೋಕೆ ಮಕ್ಕಳನ್ನು ಕರಕೊಂಡು ಹೋದಳು. ಮೊದಲನೇ ಅಣ್ಣ ಮಾತಾಡಿಸಿದ. ಆದರೆ ಅತ್ತಿಗೆ ಊಟ ಕೊಡಲಿಲ್ಲ. ಎರಡನೇ ಅಣ್ಣನ ಹತ್ತಿರ ಹೋದರು. ಅಣ್ಣನ ಹೆಂಡತಿ ಮನೆಯಲ್ಲಿ ಕಾಳು ಖಾಲಿಯಾಗಿವೆ ಅಂದಳು. ಕೊನೆಗೆ ಇವಳು ಅಣ್ಣನನ್ನು ತಬ್ಬಿಕೊಂಡು ಅಳುವುದಕ್ಕೆ ಶುರುಮಾಡಿದಳು. ಅಪ್ಪ-ಅವ್ವ ಇದ್ದಿದ್ದರೆ ಆಯರೇ ಮಾಡಿ ಕಳಿಸೋರು ಅಂದಳು. ಅದಕ್ಕೆ ಅಣ್ಣ ಒಂದು ಹಳೇ ಸೀರೆ, ಅಂಗಿ ಕೊಟ್ಟ.

ಬಡಿಗಾರ ಮತ್ತು ಹೆಂಡತಿ ಮಕ್ಕಳು ತಮ್ಮ ಊರಿಗೆ ಬಂದರು. ಬಡಿಗಾರ ಸೂತ್ರದ ಗೊಂಬೆ ತಯಾರಿಸಿದ. ಆದರೆ ಲಗಾಮು ಹಾಕುವುದಷ್ಟೇ ಬಾಕಿ ಉಳಿದಿತ್ತು. ಅಷ್ಟರಲ್ಲಿ ರಾಜನ ಕರೆ ಬಂದಿದ್ದಕ್ಕೆ ಹಾಗೆ ತೆಗೆದುಕೊಂಡು ಹೋದ. ರಾಜನ ಮಗನಿಗೆ ಕೀಲಿ ಕುದುರೆ ಮೇಲೆ ಆಸೆ. ಅಪ್ಪನಿಂದ ಕೀಲಿ ಕದ್ದು ಕುದುರೆ ಪಡೆದುಕೊಂಡು ಅದರ ಮೇಲೆ ಕೂತ. ಕೂಡಲೇ ಅದು ಹೊರಟೇಹೋಯಿತು. ಕೊನೆಗೆ ಬಹುದೂರದಲ್ಲಿ ಕಳ್ಳರ ಮನೆ ಮುಂದೆ ನಿಂತಿತು. ಅಲ್ಲಿಯೇ ಇದ್ದ ದೇವಸ್ಥಾನದಲ್ಲಿ ಉಳಿದುಕೊಂಡ. ನಿತ್ಯ ಪೂಜೆಗೈಯ್ಯುತ್ತಿದ್ದ ಹೂಗಾರ ಮುದುಕಿ ನೋಡಿ ಯಾರಪ್ಪಾ ನೀನು ಎಂದು ಕೇಳಿದಾಗ ಇರೋ ವಿಷಯ ತಿಳಿಸಿದ. ಅಜ್ಜಿ ಮನೆಗೆ ಕರೆದುಕೊಂಡು ಬಂದಳು. ರಾಜನ ಮಗಳು ಮೈನೆರೆತಾಳೆ. ಅವಳಿಗೆ

ಹೂಮಾಲೆ ಕೊಡಬೇಕು ಹೂ ತರುತ್ತೇನೆ ಇಲ್ಲೇ ಇರು ಎಂದು ಹೇಳಿದಾಗ ನಾನೇ ತರುತ್ತೇನೆ ಅಜ್ಜಿ ಅಂತ ಹೇಳಿ ಹೂ ತಂದು ತಾನೇ ಹೂಮಾಲೆ ಕಟ್ಟಿದ. ಇತ್ತ ರಾಜನ ಮಗಳು ಹೂಮಾಲೆ ಸುಂದರವಾಗಿ ಕಟ್ಟಿದ್ದಕ್ಕೆ ಯಾರು ಅಜ್ಜಿ ಹೂಮಾಲೆ ಕಟ್ಟಿದ್ದು ಎಂದು ಕೇಳಿದಾಗ ಅಜ್ಜಿ ಹೇಳುತ್ತಾಳೆ. ನನ್ನ ಮೊಮ್ಮಗಳು ಕಟ್ಟಿದಾಳೆ ಅಂತ. ಅದಕ್ಕೆ ನೋಡುವ ಆಸೆ ರಾಜನ ಮಗಳಿಗೆ ಆಗುತ್ತದೆ. ನಿನ್ನ ಮೊಮ್ಮಗಳನ್ನು ನಾಳೆ ಕರೆತನ್ನಿ ಅಜ್ಜಿ ಅಂತ ಹೇಳ್ತಾಳೆ. ಅದರಂತೆ ಅಜ್ಜಿ ಹೆಣ್ಣು ವೇಷಧಾರಿಯಾಗಿ ಕಳುಹಿಸಿಕೊಡುತ್ತಾಳೆ. ಹುಡುಗಿ ಅಲ್ಲ ಗಂಡಸು ಎಂದು ಗೊತ್ತಾದಾಗ ರಾಜನ ಮಗಳು ಪ್ರೀತಿಸುತ್ತಾಳೆ. ಕಾಲಾಂತರದಲ್ಲಿ ಗರ್ಭವತಿಯಾಗುತ್ತಾಳೆ. ರಾಜನಿಗೆ ಗೊತ್ತಾದ ಕೂಡಲೇ ಅವನನ್ನು ಹಿಡಿಯುವ ಪ್ರಯತ್ನ ಮಾಡುತ್ತಾರೆ. ಆದರೆ ಇಬ್ಬರು ಕೀಲು ಕುದುರೆಯ ಮೇಲೆ ಹೋಗುವಾಗ ಹೆರಿಗೆ ಬ್ಯಾನೆ ಶುರುವಾಗುತ್ತದೆ. ಗಂಡು ಮಗುವಿಗೆ ಜನ್ಮವಿತ್ತಳು. ಇತ್ತ ಬೆಂಕಿ ತರಲು ಹೋದ ಪತಿರಾಯ ಬೆಂಕಿಗೆ ಕೀಲುಕುದುರೆ ಆಹುತಿಗೊಂಡು ಅಲ್ಲಿಯೇ ಉಳಿಯುತ್ತಾನೆ. ಇತ್ತ ಹೆಂಡತಿ ಪತಿ ಬಾರದೇ ಇರೋದನ್ನು ಗಮನಿಸಿ ಮಗುವನ್ನು ಎತ್ತಿಕೊಂಡು ಊರ ಮಾರ್ಗವಾಗಿ ನಡೆಯುವ ಮಧ್ಯದಲ್ಲಿ ಹಸಿವು ಬಾಯಾರಿಕೆಯಾಗುತ್ತದೆ. ನಂತರ ಮಗುವನ್ನು ತೋಟದ ಮಾಲೀಕನಿಗೆ ಒಪ್ಪಿಸಿ ಬಾವಿಗೆ ನೀರು ಕುಡಿಯಲು ಹೋಗುವಳು. ಕುಡಿದು ಬರುವಷ್ಟರಲ್ಲಿ ಮಗು ಇರುವುದಿಲ್ಲ. ತೋಟದ ಮಾಲೀಕನಿಗೂ ಮಕ್ಕಳಾಗಿರದ ಕಾರಣ ಮಗುವನ್ನು ಕದ್ದೊಯ್ದರು. ಇತ್ತ ತಾಯಿ ಮಗು ಕೊಡುವವರೆಗೂ ಮನೆ ಬಿಡುವುದಿಲ್ಲವೆಂದು ಅಲ್ಲಿಯೇ ಠಿಕಾಣಿ ಹೂಡಿದಳು. ಕಾಲಾಂತರದಲ್ಲಿ ಮಗ ದೊಡ್ಡವನಾಗಿ ಮದುವೆ ವಯಸ್ಸಿಗೆ ಬರುತ್ತಾನೆ. ಮದುವೆ ಮಾಡುವ ತೀರ್ಮಾನವಾಗುತ್ತದೆ. ಆದರೆ ಹೆಣ್ಣು ತನ್ನ ತಾಯಿಯೊಂದಿಗೆ ಮದುವೆ ಮಾಡುವ ತೀರ್ಮಾನಕ್ಕೆ ಬರುತ್ತಾರೆ.

ರಾತ್ರಿ ಸಮಯದಲ್ಲಿ ಆಕೆ ಇರುವಲ್ಲಿಗೆ ಹೋಗುವ ತೀರ್ಮಾನ ಮಾಡುತ್ತಾನೆ. ಆದರೆ ಹೋಗುವಾಗ ದಾರಿಯಲ್ಲಿ ಕರುವಿಗೆ ತುಳಿಯುತ್ತಾನೆ. ತುಳಿದಾಗ ಕರು ಬ್ಯಾ ಅಂತ ಅಂದಕೂಡಲೇ ಕರುವಿನ ತಾಯಿ ತನ್ನ ತಾಯಿ ಎನ್ನುವ ಖಬರ ತನಗ ಇಲ್ಲ. ಮತ್ತೊಬ್ಬರ ಖಬರ ಇದಕ್ಕೇನು ಎಂದು ಮೂರು ಸಾರಿ ಅನ್ನುತ್ತದೆ. ಇದರಿಂದ ಎಚ್ಚೆತ್ತ ಅವನು ಆ ಹೆಂಗಸು ಹತ್ತಿರ ವಿಚಾರ ಮಾಡುತ್ತಾನೆ. ಆಕೆ ಎಲ್ಲವನ್ನು ಬಿಡಿ ಬಿಡಿಯಾಗಿ ಹೇಳುತ್ತಾಳೆ. ಹೂಗಾರ ಗಂಡ-ಹೆಂಡತಿಯನ್ನು ಕರಿಯುತ್ತಾನೆ. ನಂತರ ಸಾದರ ವೇಷದಾಗ ಇದ್ದ ತಂದೆಯನ್ನು ಗುರುತಿಸಿ ಅವರಿಬ್ಬರ ನಡೆದ ಕಥೆಗಳ ವಿಚಾರ ತಿಳಿದು ತಂದೆ ತಾಯಿ ಇವರೇ ಎಂದು ತಿಳಿದಾಗ ತಂದೆಯನ್ನು ಕರೆದುಕೊಂಡು ಬಂದು ಸುಖವಾಗಿ ಇರುತ್ತಾರೆ. ಇಲ್ಲಿ ತಂದೆ-ತಾಯಿಯರ ಪ್ರೀತಿ ಅಮರ ಅನಂತವೆಂಬುದು ತಿಳಿಯುತ್ತದೆ.

'ಜಾಣ ಸೊಸೆ' ಕಥೆಯಲ್ಲಿ ಮುಖ್ಯ ತಂದೆ, ಮಗ, ಸೊಸೆ ಹಾಗೂ ಪಾತ್ರದವಳ ಪಾತ್ರಗಳು ಬಹುಮುಖ್ಯವೆನಿಸುತ್ತವೆ.

ತಂದೆ ಪಾತ್ರ: ತಂದೆಗೆ ಒಬ್ಬನೇ ಮಗ ಅವನಿಗೆ ಮದುವೆ ಮಾಡಿದ್ದ. ಬಂದ ಸೊಸೆ ಮಗನನ್ನು ಮಮತೆಯಿಂದ ನೋಡಿಕೊಳ್ಳುವಳೋ, ಇಲ್ಲವೋ ಎಂದು ಪರೀಕ್ಷಿಸಿ ನೋಡಬೇಕೆಂದು ತವಕಿಸಿದ. ಒಮ್ಮೆ ಮಗನಿಗೆ ಸಾಯಂಕಾಲದ ಊಟ ಮಾಡಬೇಡ ಬೆಳಿಗ್ಗೆ ಎದ್ದ ಕೂಡಲೆ ಊಟ ಕೇಳು ಎಂದು

ಹೇಳಿಕೊಟ್ಟ. ಅದರಂತೆ ಮಗ ರಾತ್ರಿ ಊಟ ಬಿಟ್ಟು ಬೆಳಗಾಗುತ್ತಲೆ ಊಟ ಕೇಳಿದ. ಅದಕ್ಕೆ ಸೊಸೆ 'ಇಷ್ಟು ತೀವ್ರ ಊಟ ಕೇಳಿದ್ರೆ ನಾನೇನು ಕೊಡಲಿ ಹೊತ್ತೇರುವವರೆಗೆ ತಡೆಯಿರಿ' ಎಂದಳು. ಇದನ್ನು ಅರಿತ ತಂದೆ ಇವಳು ತಕ್ಕನಾದ ಸೊಸೆ ಅಲ್ಲ ಅವಳನ್ನು ತವರಿಗೆ ಕಳುಹಿಸಿಯೇ ಬಿಟ್ಟ.

ಎಳ್ಳು ವ್ಯಾಪಾರಕ್ಕೆಂದು ಮಗನೊಂದಿಗೆ ಎಳ್ಳು ಚೀಲಗಳನ್ನು ಹಾಕಿ ನೆರೆಯೂರು ಸಂತೆಗೆ ಕಳುಹಿಸಿದ. ಎಳ್ಳು ಮಾರುವ ಮಾಪನದಿಂದ ಎಳ್ಳೆಣ್ಣೆ ಪ್ರತಿಯಾಗಿ ತರಬೇಕು ಎಂಬ ಮಾತನ್ನು ಹೇಳಿದ. ಈ ವ್ಯಾಪಾರಕ್ಕೆ ಯಾರು ಮುಂದಾಗಲಿಲ್ಲ. ಒಂದೂರಿನ ಶ್ರೀಮಂತ ಮುಂದೆ ಆದ ಅವನ ಮಗಳು ಸೊಸೆ ಹಂಚಿನಲ್ಲಿ ಎಳ್ಳು ಅಳೆದು ಅದೇ ಹಂಚಿನಲ್ಲಿ ಪ್ರತಿಯಾಗಿ ಎಳ್ಳೆಣ್ಣೆ ಅಳೆದುಕೊಟ್ಟಳು. ಒಂದು ಗಾಡಿ ಎಳ್ಳಿಗೆ ಒಂದು ಕೊಡ ಎಣ್ಣೆ ಬಂದಿತು. ಈ ವಿಷಯ ತನ್ನ ತಂದೆಗೆ ತಿಳಿಸಿದ. ಇವಳು ತಕ್ಕದಾದ ಸೊಸೆ ಎಂದು ತಿಳಿದು ಅವಳನ್ನು ಸೊಸೆಯಾಗಿ ಮಾಡಿಕೊಂಡ.

ಮಗನಿಗೆ ಸನಗಿನ ವ್ಯಾಪಾರಕ್ಕೆಂದು ದೂರ ದೂರದ ಪಟ್ಟಣಗಳಿಗೆ ವ್ಯಾಪಾರಕ್ಕೆ ಕಳುಹಿಸಿದ. ಬಹಳ ದಿನಗಳವರೆಗೆ ಬಾರದಿದ್ದಾಗ ಆ ಮಗನ ವ್ಹಾತ್ಸಲ್ಯದಿಂದ ಆಳುಗಳ ಮೂಲಕ ಹುಡುಕುವ ಪ್ರಯತ್ನ ಮಾಡಿಸಿದ; ಆದರೆ ಪ್ರತಿಫಲ ಸಿಗಲಿಲ್ಲ. ಅದಕ್ಕಾಗಿ ಚಿಂತಾಕ್ರಾಂತರಾದರು ತಂದೆ, ತಾಯಿ. ಮಗ ಜೂಜಾಟದಲ್ಲಿ ಸೋತು ಸನಗುಗಳೆಲ್ಲಾ ಅಲ್ಲದೆ ಅವನು ಗೆದ್ದವರ ಮನೆಯಲ್ಲಿ ಜೀತದಾಳಾಗಿದ್ದ. ಇದರಿಂದ ಮುಕ್ತಿ ಮಾಡಿಸಿಕೊಂಡು ಸೊಸೆ ಮಗನನ್ನು ಕರೆತಂದಾಗ ತಂದೆ-ತಾಯಿಗೆ ಆದ ಸಂತೋಷ ಅಷ್ಟಿಷ್ಟಲ್ಲ.

ಮಗ: ತನ್ನ ತಂದೆಯ ಮಾತಿಗೆ ಎದುರು ಉತ್ತರ ನೀಡದೆ ಪಾಲಿಸುವ ಗುಣ ಮಗನದ್ದು. ರಾತ್ರಿ ಊಟ ಬಿಟ್ಟು ಬೆಳಿಗ್ಗೆ ಎದ್ದಕೂಡಲೇ ಊಟ ಕೇಳು ಎಂದು ಹೇಳಿದಾಗ ಹಾಗೆ ಮಾಡಿದ್ದು ಮೊದಲ ಹೆಂಡತಿ ನಿನಗೆ ಸರಿಯಾದವಳು ಅಲ್ಲವೆಂದು ತವರಿಗೆ ಕಳುಹಿಸಿದಾಗಲೂ ಎದುರು ಉತ್ತರ ನೀಡದೇ ಸುಮ್ಮನಿರುತ್ತಾನೆ. ಹಾಗೆಯೇ ಎಳ್ಳು ವ್ಯಾಪಾರಕ್ಕೆ ಹೋದಾಗ ಎಳ್ಳು ಬದಲಿಗೆ ಎಳ್ಳು ಮಾರಿದ ಮಾಪನದಿಂದ ಎಳ್ಳೆಣ್ಣೆ ತೆಗೆದುಕೊಂಡು ಬರಬೇಕು ಎಂದಾಗ ಅದಕ್ಕೂ ಏನೂ ಹೇಳದೇ ಇದ್ದುದು. ಎರಡನೇ ಹೆಂಡತಿಯನ್ನಾಗಿ ಪಡೆದ ಮೇಲೆ ಹೊಸದರಲ್ಲೇ ತಂದೆ ಹೇಳಿದಂತೆ ಸನಗು ಮಾರಾಟಕ್ಕೆ ದೂರದ ಪಟ್ಟಣಕ್ಕೆ ಹೆಂಡತಿಯನ್ನು ಬಿಟ್ಟು ವ್ಯಾಪಾರಕ್ಕೆ ಹೋಗಿದ್ದು, ಇವೆಲ್ಲವೂ ಗಮನಿಸಿದರೆ, ಪಿತೃವಚನಕ್ಕೆ ಕಟ್ಟುಬಿದ್ದು ಪಿತೃಪರಿಪಾಲನೆ ಸ್ವಭಾವವನ್ನು ಹೊಂದಿದವನಾಗಿದ್ದಾನೆ. ಆದರೂ ಈ ಕಥೆಯಲ್ಲಿ ಕೊನೆಗೆ ಜೂಜಾಟಕ್ಕೆ ಒಳಗಾಗಿ ಗುಲಾಮನಾಗಿ ಇರುವುದು ಗಮನಿಸಿದರೆ ಇವನು ಜಾಣನಲ್ಲ ಎನ್ನುವಂತೆ ಪ್ರತಿಬಿಂಬಿತವಾಗುತ್ತದೆ.

ಸೊಸೆ: ಈ ಕಥೆಯಲ್ಲಿ ಸೊಸೆಯ ಪಾತ್ರ ಪ್ರಮುಖವಾದುದು. ಮಾರಾಟಕ್ಕೆ ಎಳ್ಳು ಬದಲಿಗೆ ಎಳ್ಳು ಮಾಪನ ಮಾಡಿಕೊಂಡದರಿಂದ ಎಳ್ಳೆಣ್ಣೆ ಪಡೆಯುವನಿಗೆ ತಂದೆ ಈ ಎಳ್ಳು ಬಿಡಲಾರದೆ ಒಂದು ತನ್ನ ಮಗಳಿಗೆ ಹೇಳಿದಾಗ ದೋಸೆ ಹೆಂಚಿನಲ್ಲಿ ಎಳ್ಳು ಮಾಪನ ಮಾಡಿಕೊಂಡು ಅದರಿಂದ ಎಣ್ಣೆ ಅಳೆದುಕೊಟ್ಟ ಜಾಣ್ಮೆ ಪ್ರದರ್ಶಿಸಿರುವಂತದ್ದು. ನಂತರ ಎಳ್ಳು ಮಾರಾಟ ಮಾಡಿದವನ ಮನೆಗೆ ಹೆಂಡತಿಯಾಗಿ ಹೋದಳು. ಗಂಡನ ತಂದೆ ತಾಯಿಗೆ ಒಪ್ಪಿಗೆಯಾದವಳು ಕೂಡ. ಮದುವೆಯಾಗಿ ಹೊಸದರಲ್ಲಿ ಗಂಡ ಸನಗಿನ

ವ್ಯಾಪಾರಕ್ಕೆ ದೂರದ ಪಟ್ಟಣಕ್ಕೆ ಹೋಗಿರುವುದು ಅದಕ್ಕೆ ಇವಳ ಸಹಕಾರ, ಸಮ್ಮತಿ ನೀಡಿರುವಂತದ್ದು ಹೀಗೆ ಗಂಡ ಬಾರದೆ ಇದ್ದಾಗ ಪತ್ರದ ಮುಖೇನ ಕಾರಣ ತಿಳಿಯುತ್ತದೆ. ಇತ್ತ ಅತ್ತೆ-ಮಾವರಿಗೆ ಮಗ ಬರುವುದಕ್ಕೆ ತಡ ಆಗಬಹುದು ಅದಕ್ಕೆ ನೀನು ತವರೂರಿಗೆ ಹೋಗಿಬರುವುದಾಗಿ ಸುಳ್ಳು ಹೇಳಿ ಬರುತ್ತಾನೆಂದು ಧೈರ್ಯ ಹೇಳಿ ಹೊರಟಿರುವಂತದ್ದು, ಗಂಡ ಪಾತ್ರದವಳ ಮನೆಯಲ್ಲಿ ಜೂಜಿಗೆ ಸೋತು ಗುಲಾಮನಾಗಿರುವುದನ್ನು ತಿಳಿದು ತಾನು ಗಂಡು ವೇಷಧಾರಿ ಹಾಕಿಕೊಂಡು ಜೂಜಾಟದವಳ ಮನೆ ಸೇರಿ ಆಟದ ನಿಯಮಾವಳಿಗಳನ್ನು ತಿಳಿಯುತ್ತಾಳೆ. ನಂತರ ಯುಕ್ತಿಯಿಂದ ಜೂಜಾಟದಲ್ಲಿ ಗೆದ್ದು ಅವಳನ್ನೇ ಗುಲಾಮಳಾಗಿ ಮಾಡಿಕೊಳ್ಳುವಳು. ಅವಳಲ್ಲಿ ಇರುವ ಎಲ್ಲಾ ಸಂಪತ್ತನ್ನು ತಾನು ವಶಪಡಿಸಿಕೊಂಡು ಬೇರೆಯವರು ಗುಲಾಮರಾದವರನ್ನು ಮುಕ್ತಿಗೊಳಿಸುವ ಸ್ವರೂಪ ಅವಳದು. ಹೀಗೆ ಜೂಜಾಟದಿಂದ ಗೆದ್ದು ಪುನಃ ತಮ್ಮ ಊರಿಗೆ ಬರುತ್ತಾರೆ. ಇವರನ್ನು ಗಂಡ ತಂದೆ ತಾಯಿ ಆನಂದ ಪಡುತ್ತಾರೆ. ಅತ್ತೆ-ಮಾವನಿಗೆ ತಕ್ಕ ಸೊಸೆ ಎಂದು ಸೈ ಅನಿಸಿಕೊಳ್ಳುತ್ತಾಳೆ.

ಪಾತ್ರದವಳು: ಈ ಕಥೆಯ ಮುಂದುವರಿಕೆಗೆ ಹಾಗೂ ಕಥೆಯ ಮುಖ್ಯವಸ್ತು ಅಲ್ಲದಿದ್ದರೂ ಕೂಡ ಅವಳ ಪಾತ್ರ ಬಹುಮುಖ್ಯವಾದುದು. ಜೂಜುಗಾರಿಕೆಯಲ್ಲಿ ಹೆಸರಾದವಳು. ರಾತ್ರಿಯಲ್ಲಿ ಈ ಆಟ ನಡೆಯುವುದು. ಪಾತ್ರದವಳ ಮಗ್ಗುಲಲ್ಲಿ ಕುಳಿತ ಒಂದು ಬೆಕ್ಕಿನ ನೆತ್ತಿಯ ಮೇಲೆ ಹಣತೆ ದೀವಿಗೆಯನ್ನಿರಿಸಿ ಅದರ ಪ್ರಕಾಶದಲ್ಲಿ ಕವಡಿ ಹಾಕಿ ಜೂಜನಾಡುವುದು. ಆಟ ಆಡುತ್ತಿರುವಾಗ ಆ ಬೆಕ್ಕು ಹಣತೆ ಒಗೆದು ಓಡಿಹೋದರೆ ಆಕೆ ಸೋತಂತೆ. ಅದು ಓಡಿಹೋಗದೆ ಕುಳಿತೇ ಬಿಟ್ಟರೆ ಆಕೆ ಗೆದ್ದಂತೆ. ಸೋತವರು ತಮ್ಮ ವಸ್ತುವನ್ನು ಧನವನ್ನು ಆಕೆಗೊಪ್ಪಿಸಿ ಆಕೆ ಹೇಳಿದಂತೆ ಕೇಳಬೇಕು.

ಹೀಗೆ ಜೂಜಾಟಕ್ಕೆ ಬಂದು ಸಂಪತ್ತು, ಹಣವನ್ನೆಲ್ಲಾ ಸೋತು ಅವಳಿಗೆ ಗುಲಾಮರಾದವರೂ ಅದೆಷ್ಟೋ ಮಂದಿ. ಅದರಲ್ಲಿ ಒಬ್ಬನ ಹೆಂಡತಿ ಗಂಡು ವೇಷಧಾರಿಯಾಗಿ ಬಂದು ಅವಳ ಜೂಜಿನಾಟದ ನಿಯಮಗಳಿಗೆ ಒಪ್ಪಿಗೆ ಸೂಚಿಸಿ ಪಗಡೆಯಾಟಕ್ಕೆ ಕೂತರು ಸಮಯ ಸರಿದಂತೆ ತಾನು ಕಿಸೆಯಲ್ಲಿಟ್ಟುಕೊಂಡ ಎರಡು ಇಲಿಗಳನ್ನು ಪಾತ್ರದವಳಿಗೆ ಗೊತ್ತಾಗದಂತೆ ಹೊರತೆಗೆದು ಬಿಡುತ್ತಾಳೆ. ಇದರಿಂದ ಇಲಿ ಕಂಡ ಬೆಕ್ಕು ಚಂಗನೆ ಜಿಗಿದಿದ್ದರಿಂದ ನೆತ್ತಿಯ ಮೇಲೆ ಇದ್ದ ಹಣತೆ ಕೆಳಗೆ ಬಿದ್ದಿತು. ಇದರಿಂದ ಪಾತ್ರದವಳು ಸೋತಳು. ಕೊನೆಗೆ ತನ್ನಲ್ಲಿದ್ದ ಎಲ್ಲಾ ಸಂಪತ್ತು ಹಾಗೂ ತಾನು ಗೆದ್ದವಳಿಗೆ ಗುಲಾಮಳಾಗಿ ಇರುತ್ತಾಳೆ. ಈ ಕಥೆಯಲ್ಲಿ ಜೂಜಿನಾಟದವಳು ಮೋಸದಿಂದ ಗೆಲ್ಲುವುದು. ಇದು ಅವಳ ಸ್ವರೂಪಕ್ಕೆ ಪ್ರತಿಬಿಂಬಿದಂತಿದೆ.

'ಕಳ್ಳನ ಮಗಳು' ಕಥೆಯಲ್ಲಿ ತಾಯಿ, ಮಗ, ಕಳ್ಳ, ಕಳ್ಳನ ಮಗಳು, ಕೋಮಟಿಗನ ಪಾತ್ರಗಳು ಬರುತ್ತವೆ. ಇವು ಅಲ್ಲದೆ ಚೌಕಿದಾರ, ಮಜಕೂರಿ, ಪಾಟೀಲ, ಕುಲಕರ್ಣಿ ಪಾತ್ರಗಳು ಸಹ ಇವೆ.

ಒಂದೂರಲ್ಲಿ ತಾಯಿ, ಮಗ ಇದ್ದರು. ಮಗನಿಗೆ ಮದುವೆ ಮಾಡಿದ್ದಳು. ಮಗ ದುಡಿದು ಹಣ ಸಂಪಾದನೆ ಮಾಡುವೆನೆಂದು ಪೀಡಿಸಿ ತಾಯಿ ಹತ್ತಿರ ನೂರು ರೂಪಾಯಿ ಪಡೆದುಕೊಂಡ. ಹಾದಿಯಲ್ಲಿ ಒಬ್ಬ ಹುಡುಗನು ಸೀಸೆಯಲ್ಲಿ ನೀರು ಹಾಕಿ ಅದರೊಳಗೆ ಕಪ್ಪೆ ಬಿಟ್ಟು ಓಡಾಡಿಸುತ್ತಿದ್ದನು. ಮಗನು ಆತನಿಗೆ ನೂರು ರೂಪಾಯಿ ಕೊಟ್ಟು ಸೀಸೆ ತೆಗೆದುಕೊಂಡು ಬಂದಿದ್ದರಿಂದ ತಾಯಿ ಕೋಪಗೊಂಡು

ಸೀಸೆಯನ್ನು ಒಡೆದುಬಿಟ್ಟಳು. ಕಪ್ಪೆ ಜಿಗಿಯಲಿಕ್ಕೆ ಹತ್ತಿತ್ತು. ಕಪ್ಪೆ ಹೇಳಿತು. ನನ್ನನ್ನು ನೀರೊಳಗಿಂದ ಹೊರಗೆ ಹಾಕಿದ್ರೆ ನಾನು ಬದುಕುವುದು ಹೇಗೆ? ನನ್ನನ್ನು ನೀರೊಳಗೆ ಬಿಟ್ಟರೆ ನಿನಗೆ ಬಂಗಾರದಲಾಲ ಕೊಡುವೆನು ಎಂದಿತು. ಅದರಂತೆ ನೀರಲ್ಲಿ ಬಿಟ್ಟಿದ್ದರಿಂದ ಬಂಗಾರಲಾಲ ಅವನಿಗೆ ಕೊಟ್ಟಿತು. ಅದನ್ನು ತೆಗೆದುಕೊಂಡು ತಾಯಿಗೆ ಕೊಡಬೇಕು ಎಂದು ಬರುವಾಗ ಕಪ್ಪೆ ಬಂಗಾರಲಾಲ ಕೊಡುವುದನ್ನು ನೋಡಿದ ಕಳ್ಳನು ಅವನ ಬೆನ್ನು ಹತ್ತಿದನು. ಹೀಗೆ ಮಗ ಕಳ್ಳನ ಕೈಗೆ ಸಿಕ್ಕಿ ಹಾಕಿಕೊಂಡ. ಮಗನಲ್ಲಿ ಜಲಚರ ಪ್ರಾಣಿಗಳ ಪ್ರೀತಿ ಸ್ವಭಾವ ಇರುವುದನ್ನು ಗುರುತಿಸಬಹುದು. ಅಲ್ಲದೆ ತನ್ನ ತಾಯಿಯೇ ನಿನಗೆ ಅರಳು ಮರಳು ನೂರು ರೂ ಕೊಡುವುದಿಲ್ಲ ಎಂದು ತಿರಸ್ಕರಿಸಿದ್ದರಿಂದ ಅವನು ದಡ್ಡನೆಂದೂ ಹಾಗೂ ನೂರು ರೂ ಕೊಟ್ಟು ಹುಡುಗನಿಂದ ಕಪ್ಪೆ ಇರುವ ಸೀಸೆ ಖರೀದಿಸಿದ್ದು ಗಮನಿಸಿದರೆ ಈ ಕಥೆಯಲ್ಲಿ ಅವನು ದಡ್ಡನೆಂದು ಬಿಂಬಿತವಾಗುತ್ತದೆ. ನಂತರ ತನ್ನ ಕಳ್ಳನ ಅಪ್ಪನಿಂದ ಮಗಳು ಇವನನ್ನು ಕಾಪಾಡುವುದು, ಅದರಿಂದ ಅವಳಿಗೆ ಮನಸ್ಸು ಕೊಡುವುದು ಇಬ್ಬರು ಒಂದಾಗಿ ಜೀವಿಸುವ ಸಂದರ್ಭದಲ್ಲಿ ಪುನಃ ವಿಘಟನೆಯಾಗುವಂಥದ್ದು ಕಥೆಯ ತುಂಬೆಲ್ಲಾ ಕಾಣಬಹುದು.

ಕಳ್ಳ: ಕಪ್ಪೆ ನೀಡಿದ ಬಂಗಾರಲಾಲ ಪಡೆಯುವ ಸಲುವಾಗಿ ಅವನನ್ನೂ ಬೆನ್ನಟ್ಟಿ ಹಿಡಿದು ನನ್ನ ಮಗಳನ್ನು ಕೊಟ್ಟಿದ್ದೆ; ಒಲ್ಲೆನೆಂದು ಹೊರಟಿದ್ದಾನೆ ಎಂದು ಸುಳ್ಳು ಹೇಳಿ ಜನರನ್ನು ಸೇರಿಸುತ್ತಾನೆ. ನಂತರ ಮಗಳಿಗೆ ನನ್ನ ಗಂಡನೆಂದು ಒಪ್ಪಿಕೊಂಡು ಕೈ ಹಿಡಿಯುವಂತೆ ಅವನ ಗುರುತು ಹೇಳಿ ಕಳುಹಿಸುತ್ತಾನೆ. ಅದರಂತೆ ಕಳ್ಳನ ಮಗಳು ಸಹ ಯುಕ್ತಿಯಿಂದ ನಟನೆ ಮಾಡಿ ನೀನು ಸಿಟ್ಟಿನಿಂದ ನನ್ನನ್ನು ಬಿಟ್ಟು ಬಂದರೆ ನಾ ಹೇಗೆ ಇರಲಿ ನಿನ್ನ ಬಿಟ್ಟು ಎಂದು ರಾಗ ತೆಗೆಯುತ್ತಾಳೆ. ಅನಿವಾರ್ಯವಾಗಿ ಅವರ ಮನೆ ಸೇರಲೇಬೇಕಾಯಿತು. ಇತ್ತ ಕಳ್ಳ ಅವನನ್ನು ಕೊಲ್ಲಿ ಬಂಗಾರಲಾಲ ಪಡೆಯುವ ಯೋಜನೆಗಳನ್ನು ಮಗಳಿಗೆ ಹೇಳಿದನು. ಅದರಂತೆ ಮಾಡದೇ ಮುಂಚಿತವಾಗಿ ಆ ಅಪಾಯದಿಂದ ಅವನನ್ನು ಕಾಪಾಡಿ ಇಬ್ಬರು ಓಡಿಹೋಗುತ್ತಾರೆ. ಕಳ್ಳ ಅವರ ಬೆನ್ನಟ್ಟಿ ಹೋದರೂ ಕೊನೆಗೆ ನಿರಾಸೆಯಿಂದ ಹಿಂತಿರುಗುತ್ತಾನೆ.

ಬರುವ ಹಾದಿಯಲ್ಲಿ ಕಡುಬಡವರ ಕುಟುಂಬ ಎರಡು ಮಕ್ಕಳೊಂದಿಗೆ ವಾಸವಾಗಿದ್ದರು. ಮಕ್ಕಳಿಗೆ ಸಣ್ಣಮಿಣಿಚೀಲು, ದೊಡ್ಡಮಿಣಿಚೀಲು ಎಂದು ಕರೆಯುತ್ತಿದ್ದರು. ಆ ಕಡೆ ಆ ಚೀಲಗಳನ್ನು ತೆಗೆದಿಡು ಎನ್ನುವ ಮಾತು ಆಲಿಸಿದ ಕಳ್ಳನು ಇವರ ಮನೆಯಲ್ಲಿರುವ ಆ ಚೀಲಗಳನ್ನು ಕದಿಯಬೇಕು ಎಂದು ಯೋಜನೆ ಹಾಕಿದ. ರಾತ್ರಿ ಸಮಯದಲ್ಲಿ ಒಳನುಗ್ಗಿ ಹುಡುಕುತ್ತಾನೆ. ಎಲ್ಲೂ ಚೀಲಗಳು ಕಾಣಲೇ ಇಲ್ಲ. ಎಳ್ಳು ಮೂಟೆ ಮಾತ್ರ ಇತ್ತು. ಇದರಿಂದ ನಿರಾಶೆಯಿಂದ ವಾಪಸ್ಸಾಗುತ್ತಾನೆ.

ಕಳ್ಳನ ಮಗಳು: ತಂದೆಗೆ ಸಹಕರಿಸಿ ನಟನೆ ಮಾಡುವ ನಾಟ್ಯಗಾತಿ. ಅಲ್ಲದೆ ಅವಳ ಮನಸ್ಸು ಒಳ್ಳೆಯದು ಕೂಡು ತನ್ನ ತಂದೆ ಬಂಗಾರಲಾಲ. ತಂದ ಹುಡುಗನನ್ನು ಕೊಡಲಿಯಿಂದ ಕತ್ತರಿಸು ಎಂದಾಗ ಬೇಡ ವಿಷಯ ಹಾಕಿ ಸಾಯಿಸೋಣ ಎಂದು ಯೋಜನೆ ಹಾಕಿಕೊಟ್ಟವಳು. ನಂತರ ಆ ಹುಡುಗನಿಗೆ ಬಂದು ನಾಲ್ಕು ರೊಟ್ಟಿಯಲ್ಲಿ ಮೇಲಿನ ಎರಡು ರೊಟ್ಟಿಗಳು ವಿಷ ಹಾಕಿದವು. ಕೆಳಗಿನವು ತಿನ್ನು ಎಂದು ಹೇಳುವವಳು. ನಂತರ ಕಳ್ಳ ಅಪ್ಪನಿಂದ ಹುಡುಗನನ್ನು ಪಾರುಮಾಡಿದ ಪುಣ್ಯಾತಿಗಿತ್ತಿ.

ಹುಡುಗನ ಜೋಡಿ ಹೋಗುತ್ತಾಳೆ. ನಂತರ ಪುನಃ ಅಪ್ಪನ ಕೈಗೆ ಸಿಕ್ಕಾಗ ಕುದುರೆ ಬದಲಿಸಿ ಗಂಡನಿಗೆ ಮರದ ಮೇಲೆ ಕೂತುಕೊಳ್ಳಿ ಅಪ್ಪ ಅಲ್ಲಿಗೆ ಬರುವ ಸಮಯಕ್ಕೆ ನಾನು ಅಲ್ಲಿಗೆ ಕುದುರೆ ತಗೊಂಡು ಬರುವೆ ಎಂದು ಯೋಜನೆ ಹಾಕಿಕೊಟ್ಟವಳು. ಆಗಲು ಕಳ್ಳ ಅಪ್ಪನಿಂದ ಪಾರುಮಾಡುತ್ತಾಳೆ.

ಬಿಂಬಾಲಿಯ ಅದೃಷ್ಟ ಕತೆಯಲ್ಲಿ ತಿಮ್ಮಣ್ಣನೆಂಬ ಅಣ್ಣ ಬಿಂಬಾಲಿ ಎಂಬ ತಂಗಿ ಇದ್ದರು. ಇವರು ತೋಟದಲ್ಲಿ ಗೊಂಡೆ ಹೂವಿನ ಗಿಡಗಳನ್ನು ಎರಡು ಸಾಲಿನಲ್ಲಿ ಬೆಳೆಸಿದರು. ಅಣ್ಣ ಹಾಕಿದ ಹೂವಿನ ಗಿಡದಲ್ಲಿ ಹೆಣ್ಣು ಹೂವು, ತಂಗಿ ಹಾಕಿದ ಗಿಡದಲ್ಲಿ ಗಂಡು ಹೂವು ಬಿಡುವುದಕ್ಕೆ ಪ್ರಾರಂಭವಾದವು. ತಿಮ್ಮಣ್ಣ ಈ ಗಿಡದಲ್ಲಿನ ಹೂವುಗಳನ್ನು ಕೊಯ್ದು ಯಾರು ಮುಡಿಯುತ್ತಾರೋ ಅವರನ್ನೇ ಮದುವೆ ಯಾಗುವುದಾಗಿ ಶಪಥ (ಪ್ರತಿಜ್ಞೆ) ಮಾಡುತ್ತಾನೆ. ಈ ವಿಷಯ ತಂಗಿಗೂ ಗೊತ್ತು. ಹೊಳೆಗೆ ಮೀನು ಹಿಡಿಯಲು ಹೋದಾಗ ತಂಗಿ ಅಣ್ಣ ಬೆಳೆಸಿದ ಗಿಡದಲ್ಲಿನ ಹೂವಿನ ಗೊಂಡೆಗಳನ್ನು ಕಿತ್ತು ದಂಡೆಕಟ್ಟಿ ಮುಡಿಯಬೇಕೆಂದು ಹೊಳೆಯ ಮೇಲ್ಭಾಗದಲ್ಲಿಳಿದು ಮಿಂದಳು. ಇವಳ ಕೂದಲು ಅಣ್ಣನಿಗೆ ನದಿಯಲ್ಲಿ ತೇಲಿ ಬರುತ್ತದೆ. ಅದು ನೀಳವಾಗಿ, ಚಿನ್ನದಂತೆ ಹೊಳೆಯುತ್ತಿರುತ್ತದೆ. ನಂತರ ಇವಳೇ ನನಗೆ ಮಡದಿ ಯಾಗಬೇಕೆಂದು ಪ್ರತಿಜ್ಞೆ ಮಾಡಿದನು.

ಮೀನು ಹಿಡಿದುಕೊಂಡು ತಿಮ್ಮಣ್ಣನು ಮನೆಗೆ ಬರುವಷ್ಟರಲ್ಲಿ ಬಿಂಬಾಲಿಯು ಅಣ್ಣನು ನೆಟ್ಟ ಗಿಡಗಳೊಳಗಿನ ಗೊಂಡೆ ಹೂಗಳಿಂದ ದಂಡೆ ಕಟ್ಟಿದ್ದು, ಅದನ್ನು ಮುಡಿಯಲೇಬೇಕೆಂದು ತಲೆಗೆ ಎಣ್ಣೆ ಸವರಿ ಬಾಚಿಕೊಳ್ಳುತ್ತಿದ್ದಳು. ಅದನ್ನು ಕಂಡು ತಿಮ್ಮಣ್ಣ ನೇರವಾಗಿ ತಾಯ ಬಳಿಗೆ ಹೋದನು. ನಂತರ ತಾನು ಮಾಡಿದ ಪ್ರತಿಜ್ಞೆ ತನ್ನ ತಾಯಿಯ ಹತ್ತಿರ ಹೂಗಳನ್ನು ಕೊಯ್ದವರಾರು? ಎಂದು ಕೇಳಿದನು. ಮತ್ತಾರು ಕೊಯ್ದಿಲ್ಲಪ್ಪಾ ನಿನ್ನ ತಂಗಿ ನಾಲ್ಕು ಹೂ ಕೊಯ್ದು ದಂಡೆಕಟ್ಟಿಕೊಂಡಿದ್ದಾಳೆ ಎಂದಳು ತಾಯಿ. ನಾನು ಮಾಡಿದ ಪ್ರತಿಜ್ಞೆ ಬಿಂಬಾಲಿಗೆ ಗೊತ್ತಿದೆ. ಆದ್ದರಿಂದ ಆಕೆ ನನ್ನನ್ನು ಮದುವೆಯಾಗಲು ಸಿದ್ಧಳಾಗಬೇಕು ಎಂದು ಹೇಳಿದನು. ಮುಂದೆ ತಂದೆ-ತಾಯಿ ಈ ಮದುವೆಗೆ ಒಪ್ಪದಿದ್ದಾಗ ಹಠ ಮಾಡಿ ಮದುವೆಯಾಗಲು ಅಣಿಯಾದರು. ಕೊನೆಗೆ ತಂದೆ-ತಾಯಿ ಒಪ್ಪಿ ಮದುವೆ ಮಾಡಲು ಸಿದ್ಧರಾಗುವಂಥದ್ದು ಈ ಕತೆಯಲ್ಲಿ ಕಾಣಬಹುದು.

ಸಮಾಜದಲ್ಲಿ ಅಂದಿನಿಂದ ಇಂದಿಗೂ ಅಣ್ಣ-ತಮ್ಮ, ತಂದೆ-ತಾಯಿ, ಅಣ್ಣ-ತಂಗಿ, ಅಕ್ಕ-ತಮ್ಮ ಮುಂತಾದ ಸಂಬಂಧಗಳನ್ನು ಒಪ್ಪಿಕೊಂಡು ಬಂದಿರುವಂಥದ್ದು ಸಾಮಾನ್ಯ. ಆದರೆ ಈ ಕತೆಯಲ್ಲಿ ಅಣ್ಣ-ತಂಗಿಯನ್ನು ಮದುವೆಯಾಗಿ ಮಡದಿ ಮಾಡಿಕೊಳ್ಳಲು ಹೊರಟಿರುವುದು ಸೋಜಿಗದ ಸಂಗತಿ. ಅಣ್ಣ ಬೆಳೆಸಿದ ಗೊಂಡೆಹೂವಿನ ಗಿಡದಲ್ಲಿ ಹೆಣ್ಣು ಹೂವನ್ನು ಏನು ಅರಿಯದ ಬಾಲೆ ಅಣ್ಣನ ಪ್ರತಿಜ್ಞೆ ತನಗೆ ಬಾಧಕವಲ್ಲ ಎಂದು ಭಾವಿಸಿಯೇ ಪ್ರೀತಿಯ ಗೊಂಡೆ ಹೂಗಳನ್ನು ಬಿಂಬಾಲಿ ಕೊಯ್ಯುತ್ತಾಳೆ. ಬಹುಶಃ ಸುಂದರವಾದ ಹೂಗಳು ಎಂದರೆ ಹೆಣ್ಣಿಗೆ ತುಂಬಾ ಇಷ್ಟ. ಹಾಗಾಗಿ ಬಿಂಬಾಲಿ ಅಣ್ಣ ಹಾಕಿದ ಹೂವಿನ ಗಿಡದಲ್ಲಿನ ಹೂಗಳನ್ನು ಕಿತ್ತು ಮುಡಿಯುವುದು ಸಹಜ.

ಈ ಕತೆಯಲ್ಲಿನ ಅಣ್ಣನ ಪಾತ್ರ ವಿಚಿತ್ರವಾದುದು. ಯಾಕೆಂದರೆ ತಾನು ಬೆಳೆಸಿದ ಹೂವಿನ ಗಿಡದಲ್ಲಿನ ಹೂಗಳನ್ನು ಕಿತ್ತು ಯಾರು ಮುಡಿಯುತ್ತಾರೋ ಅಂಥವರನ್ನು ಮದುವೆಯಾಗುವುದಾಗಿ ಮಾಡಿದ ಪ್ರತಿಜ್ಞೆ ಒಂದಾದರೆ, ಹೊಳೆಯಲ್ಲಿ ಮೀನು ಹಿಡಿಯುವಾಗ ತೇಲಿ ಬಂದ ಹೊಳಪಿನ, ಚಿನ್ನದಂತಹ, ನೀಳವಾದ ಕೂದಲಿನ ಎಳೆಗಳನ್ನು ಕಂಡು ಈ ಚಿನ್ನದ ಕೂದಲಿನವಳು ತನ್ನ ಮಡದಿಯಾಗಬೇಕೆಂದು ಇನ್ನೊಂದು ಪ್ರತಿಜ್ಞೆ ಮಾಡುವುದು.

ತಾನು ಬೆಳೆಸಿದ ಗಿಡದ ಹೂವುಗಳನ್ನು ತನ್ನ ತಂಗಿಯೇ ಕೊಯ್ದಿರುವಳು, ಆ ಚಿನ್ನದ ಕೂದಲು ಕೂಡ ತನ್ನ ತಂಗಿಯವೇ ಎಂದು ಗೊತ್ತಾದ ಮೇಲೂ ಕೂಡ 'ಆ ದೈವ ಇವಳೇ ನನ್ನ ಮಡದಿ ಎಂದು ಬರೆದಿರುವಾಗ' ಯಾರು ಏನೂ ಮಾಡದೋ ಎಂದು ತಿಳಿದು ತಂಗಿಯನ್ನೇ ಮದುವೆ ಮಾಡಿಕೊಳ್ಳಲು ಮುಂದಾಗುತ್ತಾನೆ. ತಂದೆ-ತಾಯಿ ನಿನ್ನ ತಂಗಿಯನ್ನು ಮದುವೆ ಮಾಡಿಕೊಳ್ಳಕೂಡದು; ಅದು ಸಮಾಜಕ್ಕೆ ವಿರುದ್ಧವಾದುದು ಎಂದು ಹೇಳಿದರೂ ಒಪ್ಪದ ಮಗ ಹಠ ಮಾಡುತ್ತಾನೆ. ತನ್ನ ತಂಗಿಯನ್ನು ಮದುವೆಯಾಗದೆ ಊಟ ತಿನ್ನೊಲ್ಲ, ನೀರು ಕುಡಿಯಲ್ಲ ಎಂದು ಮಲಗಿದ್ದಾನೆ. ನನ್ನ ಎರಡು ಪ್ರತಿಜ್ಞೆಗಳು ಪೂರೈಸಬೇಕಾದರೆ ನಾನು ತಂಗಿಯನ್ನು ಮದುವೆಯಾಗಲೇಬೇಕು. ಅವಳೊಡನೆ ನೀವು ನನ್ನ ಮದುವೆ ಮಾಡುವವರೆಗೆ ನಾನು ಬಾಯಲ್ಲಿ ತುತ್ತಿಡುವುದಿಲ್ಲ, ಕೈಯಲ್ಲಿ ಕೆಲಸ ಮಾಡುವುದಿಲ್ಲ. ಜೀವವಿಟ್ಟುಕೊಳ್ಳುವುದಿಲ್ಲ ಎನ್ನುತ್ತಾನೆ. ಅವನ ತಂದೆ ಎಷ್ಟೋ ಬುದ್ಧಿಮಾತು ಹೇಳಿದರು ಕೇಳುವುದಿಲ್ಲ.

ತಂದೆ ತಾಯಿಗಳು ವಿಚಾರಿಸಿ ಒಂದು ನಿರ್ಧಾರಕ್ಕೆ ಬಂದರು. "ಇದ್ದೊಬ್ಬ ಮಗ ನಮ್ಮ ಕಣ್ಣು ಮುಂದೆ ಬದುಕಿದರೆ ಸಾಕು. ತಂಗಿಯ ಸಂಗಡವೇ ಮದುವೆ ಮಾಡಿದರಾಯಿತು" ಎಂದು ಹಂದರ, ಹಾಸಿಬಗಲಿ ಹಾಕಿದರು. ಮದುವೆಯ ಸಲಕರಣೆಗಳನ್ನು ಅಣಿಗೊಳಿಸಿದರು. ಮದುವೆಯಾಗುವ ಅಣ್ಣ ತಂಗಿ ಎನ್ನುವ ಮಮಕಾರ ಇಲ್ಲದೆ ಒಡಹುಟ್ಟಿದವಳು ಎನ್ನದೇ ತನ್ನ ಪ್ರತಿಜ್ಞೆಯ ಪ್ರತಿಷ್ಠೆ ಅವನಿಗೆ ಹೆಚ್ಚಾಯಿತೇಹೊರತು ಸಮಾಜಕ್ಕೆ ಹೆದರಲಿಲ್ಲ. ತಂದೆ-ತಾಯಿಯಾದರು ವಾರಸುದಾರನಿಗೆ ಬೆಲೆ ಕೊಟ್ಟರಾದರೂ ಮಗಳಿಗೆ ಒಳ್ಳೆಯ ಬಾಳು ಕೊಡಲಿಲ್ಲ. ಇವರಾದರು ಸಮಾಜಕ್ಕೆ ಹೆದರಲಿಲ್ಲ. ಸಮಾಜಕ್ಕೆ ಸೆಡ್ಡು ಹೊಡೆದು ನಿಂತರು. ಮಗಳಿಗೆ ಅಣ್ಣನ ಜೊತೆ ಹೇಳಲೇ ಇಲ್ಲ. ಪ್ರಾಣಿ-ಪಕ್ಷಿಗಳ ಮೂಲಕ ಅಣ್ಣನ ಜೊತೆ ಮದುವೆ ಎಂದು ತಿಳಿದುಕೊಳ್ಳುತ್ತಾಳೆ. ತಂದೆ-ತಾಯಿ, ಅಣ್ಣ ಪ್ರಾಣಿಗಳಿಗೆ ಇದ್ದ ಕರುಣೆ, ಅನುಕಂಪ ಬಾರದೇ ಹೋಯಿತು. ಕೊನೆಯಲ್ಲಿ ಮದುವೆಯಿಂದ ಪಾರಾಗಿ ಸೂರ್ಯ ದೇವನನ್ನು ಮದುವೆಯಾಗುತ್ತಾಳೆ.

ಸೂರ್ಯದೇವನನ್ನು ಮದುವೆಯಾದ ನಂತರ ಒಂದು ಮಗು ಆಗುತ್ತದೆ. ಕಾಲ ಕಳೆದಂತೆ ತವರುಮನೆ ನೆನಪಾದಾಗ ತನ್ನ ಇಂಗಿತವನ್ನು ವ್ಯಕ್ತಪಡಿಸುತ್ತಾಳೆ. ಸೂರ್ಯದೇವ ಆ ಮನುಷ್ಯರು ಒಳ್ಳೆಯವರಲ್ಲದೇ ಕಾರಣ ನಿದ್ರೆಯಿಂದ ಹೇಳದಂತೆ ಮಾಡುತ್ತಾನೆ. ತವರಿಗೆ ಬಂದ ಪತ್ನಿ ಹಾಗೆ ತನ್ನ ಮಗನ ಕಾಲುಗೆಜ್ಜೆ, ಚಿನ್ನದ ನಾಣ್ಯಗಳನ್ನು ಮಾತ್ರ ಅಲ್ಲಿಯೇ ಇಟ್ಟು ಪುನಃ ದೇವಲೋಕಕ್ಕೆ ಹೋಗುವುದು. ಇಲ್ಲಿ ತವರಿನವರು ಎಷ್ಟೇ ಅನಾಹುತ ಮಾಡಿದರೂ ತವರೂರಿನ ಶ್ರೇಯಸ್ಸು ಬಯಸುವ ಹೆಣ್ಣು ಶ್ರೇಷ್ಠಳಾಗುತ್ತಾಳೆ ಈ ಕಥೆಯಲ್ಲಿ.

ಇದಿಲಕ್ಷ್ಮೀ ಭಾಗ್ಯಲಕ್ಷ್ಮೀ ಕಥೆಯಲ್ಲಿ ತಾಯಿ ಮತ್ತು ಮಗ ಮುಖ್ಯ ಪಾತ್ರಗಳು.

ಮಗ ಸೋಮಾರಿ, ಊಟ ಮಾಡುವುದು, ಮಲಗುವುದು ಕೆಲ್ಸ ಬಿಟ್ಟರೆ ಬೇರೇನೂ ಮಾಡೋಕೆ ಬರ್ತಯಿರಲಿಲ್ಲ. ತಾಯಿ ದುಡಿದು ದುಡಿದು ಹಣ್ಣಾಗಿ ಹೋಗಿದ್ದಳು. ಕೊನೆಗೆ ಬೇಸತ್ತು ತಾಯಿ ಮಗನಿಗೆ ಹೇಳ್ತಾಳೆ, ಯಾವುದಾದರೂ ಸಣ್ಣ ಕೆಲಸ ಮಾಡಿದರೆ ಊಟಕ್ಕೆ ಅಥವಾ ನನಗೆ ಆಸರೆಯಾಗುತ್ತದೆ ಎಂದು ಹೇಳಿ ಕೆಲಸಕ್ಕೆ ಅವನನ್ನು ಅಣಿಗೊಳಿಸಿದಳು. ತಾಯಿಯ ಮಾತಿನಂತೆ ಗೌಡರ ಹೊಲಕ್ಕೆ ಉಳುಮೆ ಮಾಡೋದಕ್ಕೆ ಹೋದ. ಗಳೇ ಹೊಡಿಯ್ಯೋಕೆ ಬರಲಿಲ್ಲ. ಅದಕ್ಕೆ ಅವನನ್ನು ಬೈದು ಕಳುಹಿಸಿದ. ಈ ನೋವು ಸಹಿಸಲಾರದೆ ತೀರ್ಮಾನಿಸಿ ಬೇರೆ ಊರಿಗೆ ಹೋಗಿ ಕೆಲ್ಸ ಮಾಡಿ ಹಣ ತರುವೆ ರೊಟ್ಟಿ ಕಟ್ಟಿಕೊಡು ಎಂದು ಹೇಳಿದನು. ಇದಕ್ಕೆ ತಾಯಿ ಖುಷಿಪಟ್ಟು ಅವನಿಗೆ ಎಲ್ಲಾ ಸಿದ್ಧತೆ ಮಾಡಿ ಕಳುಹಿಸಿಕೊಟ್ಟಳು.

ರಾಮಣ್ಣ ನಡೆದು ನಡೆದು ಕಾಡಲ್ಲಿ ಸುಸ್ತಾಗಿ ಆಲೋಚಿಸುತ್ತಾನೆ. ನನಗಂತೂ ಯಾವ ಕೆಲಸ ಮಾಡೋಕೆ ಬರೋಲ್ಲ, ನನಗೆ ಕೆಲಸ ಕೊಡಲ್ಲ! ಅದಕ್ಕೆ ಮರದ ಮೇಲಿಂದ ಹಾರಿ ಜೀವ ಕಳೆದುಕೊಳ್ಳಬೇಕು ಎಂದು ತೀರ್ಮಾನಿಸಿ ಸಾಯಲು ಸಿದ್ಧನಾದ; ಅದೇ ಸಮಯಕ್ಕೆ ಇದಿರಲಕ್ಷ್ಮಿ ತಡೆದು ಒಂದು ನೂರು ರೂಪಾಯಿ ಹಣದ ಗಂಟು ಕೊಟ್ಟು ಕಳುಹಿಸಿದಳು. ಇದೇ ಖುಷಿಯಲ್ಲಿ ಮೊದಲು ತಾಯಿಗೆ ಈ ಹಣವನ್ನು ಮೊದಲು ಕೊಡಬೇಕು ಎಂದು ಮನೆಗೆ ಓಡಿಬಂದ. ಆದರೆ ತಾಯಿ ಕೂಲಿ ಕೆಲಸಕ್ಕೆ ಗೌಡರ ಹೊಲಕ್ಕೆ ಹೋಗಿದ್ದಳು. ಆ ನೂರು ರೂಪಾಯಿ ಗಂಟನ್ನು ಬೆಂಕಿ ಒಲೆಯಲ್ಲಿ ಇಟ್ಟು ಹೋದ. ಇತ್ತ ಪಕ್ಕದ ಮನೆ ಅಜ್ಜಿ ಬೆಂಕಿಗೆಂದು ಇವರ ಮನೆಗೆ ಬರುವಳು. ಬಂದಾಗ ಮನೆಯಲ್ಲಿ ಯಾರು ಇಲ್ಲದ ಕಾರಣ ತಾನೇ ಬೆಂಕಿ ತೋಡಿಕೊಂಡು ತೆಗೆದ ಹೋಗಲು ಒಲೆ ಕೆದರಿದಳು. ಅದರಲ್ಲಿ ಇದ್ದ ನೂರು ರೂಪಾಯಿ ಗಂಟು ಸಿಕ್ಕಿತ್ತು. ಅದನ್ನು ತೆಗೆದುಕೊಂಡು ಹೋದಳು. ಇತ್ತ ತಾಯಿಯನ್ನು ಅರ್ಧದಿನಕ್ಕೆ ಕೂಲಿ ಬಿಡಿಸಿ ಮನೆಗೆ ಕರೆದುಕೊಂಡು ಬಂದ. ಬಂದು ನೋಡಿದಾಗ ಹಣದ ಗಂಟೇ ಇರಲಿಲ್ಲ. ಆ ಕೋಪಕ್ಕೆ ಬೈದು ಪುನಃ ಕೆಲಸಕ್ಕೆ ಹೋದಳು. ಪುನಃ ಸಾಯಲು ಹೊರಟ. ಮತ್ತೆ ಯಾಕೆ ಸಾಯೋಕೆ ಬಂದಿಯಾ ತಗೋ ಈ ಮುತ್ತಿನ ಸರ ಎಂದು ಕೊಟ್ಟು ಕಳುಹಿಸಿದಳು. ಪುನಃ ಮನೆಗೆ ಬಂದು ರಾಮಣ್ಣ ಈ ಸರವನ್ನು ಗೂಟಕ್ಕೆ ಹಾಕಿ ತಾಯಿನ ಕರಕೊಂಡು ಬಂದ. ಬಂದಾಗ ಆ ಸರ ಇರಲಿಲ್ಲ. ಪುನಃ ಸಾಯಲು ಹೋದಾಗ ಭಾಗ್ಯಲಕ್ಷ್ಮೀ ಎದುರುಗೊಂಡು ಕೇಳಿದಳು. ಸಾಯೋದು ಬೇಡ ಈ ಒಂದು ರೂಪಾಯಿಯಿಂದ ವ್ಯಾಪಾರ ಮಾಡು ಎಂದಳು. ಅದರಂತೆ ವ್ಯಾಪಾರ ಮಾಡಿ ಸುಖ ಜೀವನ ಪ್ರಾರಂಭಿಸಿದ.

ಜನಪದ ಕಥೆಗಳು ಭೌಗೋಳಿಕವಾಗಿ ಬೇರೆ ಬೇರೆಯಾದರೂ ಕೆಲವೊಂದು ಕಥೆಗಳ ವಸ್ತುಗಳ ಆಶಯ ಒಂದೇ ಆಗಿರುವುದನ್ನು ಗಮನಿಸಬಹುದು. ಅಂತಹ ಕಥೆಗಳಲ್ಲಿ ಅದ್ಭುತ ಕಥೆಗಳ ಸಾಲಿನಲ್ಲಿ ಬರುವ 'ನಾಗೇಂದ್ರನ ಉಂಗುರ' ಆರ್ನೆಆಂಟಿ ಮತ್ತು ಸ್ಟಿತ್ ಥಾಮ್ಸನ್ ಅವರ 'The Type of the Folktale' ಗ್ರಂಥದಲ್ಲಿ ಸೂಚಿತವಾಗಿರುವ ವರ್ಗ ೫೬೦ 'The Magic Ring' ಕಥೆಗೆ ಸಂವಾದಿಯಾಗಿದೆ. ಈ ಕಥೆಯನ್ನು ಉತ್ತರ ಕರ್ನಾಟಕ 'ಬೆಳಗಾಂ ಜಿಲ್ಲೆಯ ಜನಪದ ಕಥೆಗಳು' ಸಂಕಲನದಲ್ಲಿರುವ 'ಅದ್ಭುತ

ಉಂಗುರ' ಮತ್ತು 'ಧಾರವಾಡ ಜಿಲ್ಲೆಯ ಜನಪದ ಕಥೆಗಳು' ಸಂಕಲನದಲ್ಲಿರುವ 'ನೀಲದುಂಗುರ ಕಥೆಗಳೊಂದಿಗೆ ಪ್ರಾತಿನಿಧಿಕವಾಗಿ ಹೋಲಿಸಿ ನೋಡಬಹುದು.

'ರಾಯಚೂರು ಜಿಲ್ಲೆಯ ಜನಪದ ಕಥೆಗಳು' ಕೃತಿಯಲ್ಲಿ ಬರುವ 'ನಾಗೇಂದ್ರನ ಉಂಗುರ' ಕಥೆಯಲ್ಲಿ ರಾಜ, ರಾಣಿ, ನಾಲ್ಕು ಗಂಡು ಮಕ್ಕಳು. ಅವರ ಪೈಕಿ ಕಿರಿಯವನು ದಡ್ಡನೆಂದು ಬಿಂಬಿತನಾಗಿದ್ದಾನೆ. ಅವನು ವ್ಯಾಪಾರ ಮಾಡಬೇಕೆಂದು ತಾಯಿಯ ಬಳಿ ಉದ್ದೇಶವನ್ನು ಹೇಳುತ್ತಾನೆ. ತಾಯಿ ತನ್ನ ಮಗನ ಉದ್ದೇಶವನ್ನು ತಂದೆಗೆ ತಿಳಿಸುತ್ತಾಳೆ. ತಂದೆ ಮಗನ ಆಸೆಯಂತೆಯೇ ಮೂರು ಬಾರಿ ಹಣವನ್ನು ಕೊಟ್ಟು ವ್ಯಾಪಾರ ಮಾಡಲು ಹೇಳುತ್ತಾನೆ. ಆದರೆ ಮಗ ಹಣ ಪಡೆದು ವ್ಯಾಪಾರಕ್ಕೆ ಹೋದವನು ಹಾವು ಮತ್ತು ಬೆಕ್ಕನ್ನು ಕೊಂಡುತರುತ್ತಾನೆ. ಇದನ್ನು ಗಮನಿಸಿದ ತಂದೆ ಬೇಸತ್ತು ಇತ್ತ ಶಾಲೆ ಕಲಿಯದೇ ಇವುಗಳ ಸಾಕಾಣಿಕೆ ಮಾಡುತ್ತಾನೆ. ಆದ್ದರಿಂದ ತಂದೆಗೆ ಕೋಪ ಬಂದು ರಾಜ ಮಗನನ್ನು ಮನೆಯಲ್ಲಿ ಏನನ್ನೂ ತೆಗೆದುಕೊಳ್ಳಕೂಡದೆಂದು ಆಜ್ಞೆ ಮಾಡುತ್ತಾನೆ. ಕೊನೆಗೆ ಮನೆಯಿಂದ ಇವನು ಹಾವು ಬೆಕ್ಕಿನೊಡನೆ ಹೊರಟು ಅವುಗಳನ್ನು ಸಾಕಲು ಶಕ್ತಿಯಿಲ್ಲದೆ ಅಂದರೆ ಸ್ವತಃ ದುಡಿಯಲು ಶಕ್ತಿಯಿಲ್ಲದೆ ತನ್ನ ಅಸಹಾಯಕತೆಯನ್ನು ಹಾವಿಗೆ ತಿಳಿಸಿ ಅದನ್ನು ಹುತ್ತದಲ್ಲಿ ಬಿಡುತ್ತಾನೆ. ಉಪಕಾರ ಪಡೆದ ಹಾವು ಇವನನ್ನು ನಾಗಲೋಕಕ್ಕೆ ಕರೆದುಕೊಂಡು ಹೋಗಿ ತನ್ನ ತಂದೆಯಾದ ನಾಗೇಂದ್ರನಿಂದ ಅಮೂಲ್ಯ ಉಂಗುರವನ್ನು ಬಹುಮಾನವಾಗಿ ಕೊಡಿಸುತ್ತದೆ.

ಅಮೂಲ್ಯವಾದ ಉಂಗುರ ಪಡೆದ ರಾಜಕುಮಾರ ಉಂಗುರದ ಮಹಿಮೆಯಿಂದ ತನ್ನ ಆಸೆಗಳನ್ನು ಪೂರೈಸಿಕೊಂಡು ಅದರಿಂದಲೇ ಹೆಣ್ಣನ್ನು ಸೃಷ್ಟಿಸಿ ಮದುವೆಯಾಗಿ ವೈಭವಯುತವಾಗಿ ಜೀವನ ನಡೆಸುತ್ತಾನೆ. ಒಂದು ದಿವಸ ಇವನ ಹೆಂಡತಿ ನದಿಯ ಸ್ನಾನಕ್ಕೆ ಹೋಗಿದ್ದಾಗ ನೀರಿನಲ್ಲಿ ಬಿದ್ದ ಅವಳ ಬಂಗಾರದ ಕೂದಲನ್ನು ನೋಡಿದ ಮತ್ತೊಬ್ಬ ದೊರೆ ಮುದುಕಿಯ ಸಹಾಯದಿಂದ ಉಂಗುರದ ಸಮೇತ ರಾಜಕುಮಾರಿಯನ್ನು ಲಪಟಾಯಿಸುತ್ತಾನೆ. ಮುದುಕಿಗೆ ತನ್ನ ಬಳಿ ಇರುವ ಅರ್ಧ ರಾಜ್ಯವನ್ನು ಕೊಡುವುದಾಗಿ ಆಮಿಷ ಒಡ್ಡಿ ಉಂಗುರ ಮತ್ತು ರಾಜಕುಮಾರಿಯನ್ನು ಪಡೆಯುವ ಹುನ್ನಾರ ನಡೆಸಿರುತ್ತಾನೆ. ಹೀಗೆ ಅಜ್ಜಿಗೆ ಕೊಟ್ಟ ಮಾತಿನಂತೆ ಅರ್ಧ ರಾಜ್ಯವನ್ನು ಕೊಡುತ್ತಾನೆ. ಬೇಟೆಗೆ ಹೋಗಿ ಬರುವುದರಲ್ಲಿ ಇಷ್ಟೆಲ್ಲಾ ನಡೆದಿರುತ್ತದೆ. ಬೇಟೆಯಿಂದ ಬಂದ ರಾಜಕುಮಾರ ತನಗಾದ ಪರಿಸ್ಥಿತಿಯನ್ನು ನೆನೆದು ದುಃಖಿಸುತ್ತಾನೆ. ರಾಜಕುಮಾರನ ಬಳಿಯಿರುವ ಉಂಗುರ ಪಡೆದ ಮತ್ತೊಬ್ಬ ರಾಜ ಮನೆ ಆಸ್ತಿ-ಪಾಸ್ತಿ ಹಾಗೂ ಹೆಂಡತಿ ಯನ್ನು ಅವನಿಂದ ಕಿತ್ತುಕೊಂಡಿರುತ್ತಾನೆ. ಹೀಗಿರುವಾಗ ನಾಗೇಂದ್ರನನ್ನು ಪ್ರಾರ್ಥಿಸಿದಾಗ ನಾಗೇಂದ್ರ ಪ್ರತ್ಯಕ್ಷವಾಗಿ ಇವನಿಗೆ ನಡೆದಿರುವ ಸಂಗತಿ ತಿಳಿಸಿ ಮಾರ್ಗದರ್ಶನ ಮಾಡುತ್ತದೆ. ಬೆಕ್ಕಿನ ಸಹಾಯದಿಂದ ಅವಳಿಗೆ ಚೀಟಿ ಮುಟ್ಟಿಸಿ ಆ ಮೂಲಕ ಉಂಗುರ ಇಟ್ಟಿರುವ ಜಾಗವನ್ನು ತಿಳಿದು ಅದೇ ಬೆಕ್ಕಿನ ಸಹಾಯ ದಿಂದ ಅರಮನೆಯಲ್ಲಿದ್ದ ಉಂಗುರವನ್ನು ವಾಪಸ್ಸು ಪಡೆಯುವುದರೊಂದಿಗೆ ಕೈಬಿಟ್ಟಿದ್ದ ಎಲ್ಲವನ್ನೂ ಪಡೆದು ತನ್ನ ತಂದೆ ತಾಯಿ ಅಣ್ಣ ಅತ್ತಿಗೆಯರನ್ನು ಕೂಡಿಕೊಂಡು ಹೆಂಡತಿಯೊಡನೆ ಸುಖವಾಗಿರುತ್ತಾನೆ.

'ಧಾರವಾಡ ಜಿಲ್ಲೆಯ ಜನಪದ ಕಥೆಗಳು' ಸಂಕಲನದಲ್ಲಿರುವ 'ನೀಲದುಂಗುರ' ಕಥೆಯಲ್ಲಿ ಬರುವ ಪಾತ್ರಗಳು ಮೂರು. ತಾಯಿ, ಇಬ್ಬರು ಗಂಡು ಮಕ್ಕಳು. ಅಣ್ಣ ಮದುವೆಯಾದ ಹೊಸತರಲ್ಲಿ ಬೇರೆಯಾಗುತ್ತಾನೆ. ತನ್ನ ತಾಯಿ ಕಿರಿಯವನಿಗೆ ವ್ಯಾಪಾರ ಮಾಡಲೆಂದು ಹಣವನ್ನು ಕೊಡುತ್ತಾಳೆ. ಆದರೆ ಮಗ ವ್ಯಾಪಾರಕ್ಕಾಗಿ ಬೇಕಾದ ಸರಕುಗಳನ್ನು ತಾರದೇ ಹಾವು, ಗಿಳಿ ಮತ್ತು ಇಲಿಯನ್ನು ಕೊಂಡು ತರುತ್ತಾನೆ. ಇತ್ತ ತಾಯಿ ಮಗ ತಂದ ಹಾವು, ಗಿಳಿ, ಇಲಿಗಳನ್ನು ಬೇಜಾರ ಮಾಡಿಕೊಳ್ಳದೆ ಸಾಕುತ್ತಾಳೆ. ಇವನ ಉಪಕಾರಕ್ಕೆ ಮೆಚ್ಚಿದ ಹಾವು ನಾಗಲೋಕಕ್ಕೆ ಕರೆದುಕೊಂಡು ಹೋಗಿ ದೇವೇಂದ್ರನಿಂದ ನೀಲದುಂಗುರ ಕೊಡಿಸುತ್ತದೆ. ಇತ್ತ ಒಬ್ಬ ದೊರೆ ಒಂದು ರಾತ್ರಿಯಲ್ಲಿಯೇ ಏಳು ಅಂತಸ್ತಿನ ಮನೆ ಕಟ್ಟಿ ಅದಕ್ಕೆ ಚಿನ್ನದ ಕಳಶ ಹಾಕಿದವರಿಗೆ ತನ್ನ ಮಗಳ ಕೊಟ್ಟು ಲಗ್ನ ಮಾಡುವುದಾಗಿ ಡಂಗೂರ ಹೊಡೆಸಿರುತ್ತಾನೆ. ನಾಗೇಂದ್ರನಿಂದ ಪಡೆದ ಉಂಗುರದ ಮಹಿಮೆಯಿಂದ ಅದನ್ನು ಕಾರ್ಯಗತ ಮಾಡಿ ರಾಜಕುಮಾರಿಯನ್ನು ಮದುವೆಯಾಗುತ್ತಾನೆ. ರಾಜಕುಮಾರಿ ಒಮ್ಮೆ ತೌರುಮನೆಗೆ ಹೋಗುವಾಗ ಅವಳು ಮೆಟ್ಟಿದ್ದ ವಜ್ರಖಚಿತವಾದ ಒಂದು ಮೆಟ್ಟು ಹೊಳೆಯಲ್ಲಿ ಬಿದ್ದು ಅದು ಅಂಬಿಗರನಿಗೆ ಸಿಕ್ಕಿ ಅವನು ಹೂಗಾರತಿಗೆ ಮಾರುತ್ತಾನೆ. ಅವಳು ರಾಜನಿಗೆ ಕೊಡುತ್ತಾಳೆ. ಅವನು ಅದನ್ನು ಧರಿಸುವ ಹೆಣ್ಣು ಮಗಳನ್ನೇ ತನ್ನ ವಶ ಮಾಡಿಕೊಳ್ಳಬೇಕೆಂಬ ಹಂಬಲದಿಂದ ಹೂಗಾರತಿಯ ಸಹಾಯ ಪಡೆಯುತ್ತಾನೆ. ಹೂಗಾರತಿ ಅದರಲ್ಲಿ ಯಶಸ್ವಿಯಾಗಿ ರಾಜನಿಂದ ಬಹುಮಾನ ಪಡೆಯುತ್ತಾಳೆ. ಭಿಕಾರಿಯಾದ ಇವನಿಗೆ ಉಪಕಾರ ಸ್ಮರಣೆಯಿಂದ ಗಿಳಿ ಮತ್ತು ಇಲಿ ಸಾಹಸ ಮಾಡಿ ಉಂಗುರ ತಂದುಕೊಡುತ್ತವೆ. ಕೊನೆಗೆ ಅದೇ ಉಂಗುರದ ಸಹಾಯದಿಂದ ಹೆಂಡತಿಯನ್ನು ಪಡೆಯುವುದರಲ್ಲದೆ, ರಾಜನು ನಾಶವಾಗುವಂತೆ ಮಾಡುತ್ತಾನೆ. ಗಂಡ, ಹೆಂಡತಿ ಹಿಂದಿನಂತೆ ಸುಖವಾದ ಜೀವನ ಮಾಡುತ್ತಾರೆ.

'ಬೆಳಗಾಂ ಜಿಲ್ಲೆಯ ಜನಪದ ಕಥೆಗಳು' ಸಂಕಲನದಲ್ಲಿರುವ 'ಅದ್ಭುತ ಉಂಗುರ' ಕಥೆಯಲ್ಲಿ ತಾಯಿ ಕೊಡಿಟ್ಟ ಹಣದಿಂದ ಹಾವು, ಇಲಿ, ಕೋತಿ ಮತ್ತು ನಾಯಿಗಳನ್ನು ಕೊಂಡು ತಂದು ಅವುಗಳ ರಕ್ಷಣೆ ಮಾಡುತ್ತಾನೆ. ಇವನ ಉಪಕಾರಕ್ಕೆ ಮೆಚ್ಚಿದ ಹಾವು ನಾಗಲೋಕಕ್ಕೆ ಕರೆದುಕೊಂಡು ಹೋಗಿ ನಾಗೇಂದ್ರನಿಗೆ ನಡೆದ ವಿಚಾರ ಮತ್ತು ತನಗೆ ಸಹಾಯ ಮಾಡಿದ್ದರ ಬಗ್ಗೆ ಹಾವು ಹೇಳುತ್ತದೆ. ಈ ಉಪಕಾರಕ್ಕೆ ಪರೋಪಕಾರವಾಗಿ ಉಂಗುರ ಕೊಡುತ್ತದೆ. ಅದರ ಮಹಿಮೆಯಿಂದ ಶ್ರೀಮಂತನಾಗಿ ಮದುವೆಯಾಗಿ ಹೆಂಡತಿ ಮತ್ತು ತಾಯಿ ಜೊತೆಯಲ್ಲಿ ಸುಖವಾಗಿರುವಾಗ ಉಂಗುರದ ಅದ್ಭುತ ಶಕ್ತಿಯನ್ನು ತಿಳಿದ ಸಾಧು, ಒಬ್ಬ ಮುದುಕಿಗೆ ಆಸೆ ತೋರಿದ ಅವಳ ಸಹಾಯದಿಂದ ಉಂಗುರವನ್ನು ತಾನು ಪಡೆದು ಈ ಹುಡುಗನನ್ನು ಮತ್ತೆ ಬೀದಿಪಾಲು ಮಾಡಿದಾಗ ಇವನಿಂದ ಸಹಾಯ ಪಡೆದಿದ್ದ ಇಲಿ ಸಾಧುವಿನಿಂದ ಉಂಗುರ ತಂದುಕೊಡುತ್ತದೆ. ಇವನು ಪುನಃ ಉಂಗುರದ ಶಕ್ತಿಯಿಂದ ಕಳೆದುಹೋಗಿದ್ದ ಎಲ್ಲವನ್ನೂ ಪಡೆದು ಕೊನೆಗೆ ಹೆಂಡತಿಯ ಶೀಲದ ಬಗ್ಗೆ ಸಂಶಯಪಟ್ಟು ಅವಳನ್ನು ಪರೀಕ್ಷೆಗೆ ಗುರಿಮಾಡುತ್ತಾನೆ. ಅವಳು ಅದರಲ್ಲಿ ಜಯಶಾಲಿಯಾದಾಗ ಗಂಡ-ಹೆಂಡತಿ ಸುಖವಾಗಿರುತ್ತಾರೆ.

ಈ ಮೇಲಿನ ಮೂರು ಕಥೆಗಳನ್ನು ಹೋಲಿಸಿದಾಗ 'ನೀಲದುಂಗುರ' ಮತ್ತು 'ಅದ್ಭುತ ಉಂಗುರ' ಕಥೆಗಳಿಗಿಂತ ಭಿನ್ನ ರೀತಿಯಲ್ಲಿ 'ನಾಗೇಂದ್ರನ ಉಂಗುರ' ಕಥೆ ಆರಂಭವಾಗುತ್ತದೆ. ಇಲ್ಲಿನ (ಗಂಡು)

ನಾಯಕ ರಾಜಮನೆತನದವನು. ತಂದೆಯ ಉಪೇಕ್ಷೆಗೆ ಗುರಿಯಾಗಿ ಹಾವು, ಬೆಕ್ಕು ಎರಡರ ನೆರವಿನಿಂದಲೇ ಜಯಗಳಿಸಿದವನು. 'ನೀಲದುಂಗುರ'ದಲ್ಲಿ ಬರುವ ವಜ್ರಖಚಿತವಾದ ಮೆಟ್ಟು(ಚಪ್ಪಲಿ) ರಾಜನಿಗೆ ಸಿಕ್ಕಿ ಅವನು ಅದನ್ನು ಧರಿಸುವ ಹೆಣ್ಣನ್ನು ಪಡೆಯಬೇಕೆಂಬ ಆಸೆಯಿಂದ ಒಬ್ಬ ಮುದುಕಿಯ ಸಹಾಯದಿಂದ ಕುತಂತ್ರ ಹೂಡಿ ರಾಜಕುಮಾರಿಯನ್ನು ನೀಲದುಂಗುರ ಸಮೇತ ವಶ ಮಾಡಿಕೊಳ್ಳುತ್ತಾನೆ. 'ನಾಗೇಂದ್ರನ ಉಂಗುರ'ದಲ್ಲಿ ಬಂಗಾರದ ಕೂದಲನ್ನು ನೋಡಿದ ರಾಜ ಅವಳ ವ್ಯಾಮೋಹಗೊಂಡು ಮುದುಕಿಯ ಸಹಾಯದಿಂದ ಅವಳನ್ನು ಪಡೆಯುವುದರೊಂದಿಗೆ ಉಂಗುರವನ್ನು ಸಹ ಪಡೆಯುತ್ತಾನೆ. ಅದರೆ ಅದ್ಭುತ ಉಂಗುರ ಕಥೆಯಲ್ಲಿ ಉಂಗುರದ ಮಹಿಮೆ ತಿಳಿದ ಸಾಧು ಉಂಗುರವನ್ನು ವಶಪಡಿಸಿಕೊಳ್ಳುವುದರ ಮೂಲಕ ಅಲ್ಲಿನ ಹೆಣ್ಣನ್ನು ವಶ ಮಾಡಿಕೊಳ್ಳುವ ಪ್ರಯತ್ನ ಮಾಡುತ್ತಾನೆ. 'ನೀಲದುಂಗುರ'ದಲ್ಲಿ ರಾಜಕುಮಾರಿಯನ್ನು ಮದುವೆಯಾದರೆ 'ಅದ್ಭುತ ಉಂಗುರ'ದಲ್ಲಿ ಸಾಮಾನ್ಯ ಹೆಣ್ಣು ಮಗಳನ್ನು ಮದುವೆಯಾಗುತ್ತಾನೆ. ಆದರೆ 'ನಾಗೇಂದ್ರನ ಉಂಗುರ'ದ ನಾಯಕ ಉಳಿದ ಕಥೆಗಳ ನಾಯಕರಿಗಿಂತ ಬೇರೆಯಾಗಿ ಉಂಗುರದ ಮಹಿಮೆಯಿಂದಲೇ ಹೆಣ್ಣನ್ನು ಸೃಷ್ಟಿಸಿ ಮದುವೆಯಾಗುವುದು ಒಂದು ವಿಶೇಷವಾದ ಸಂಗತಿ. ಮತ್ತು ಇಲ್ಲಿ ಬರುವ ಪ್ರಾಣಿಗಳ ಸಂಖ್ಯೆ ಹಾಗೂ ಅವುಗಳ ಪಾತ್ರ ಪರಿಮಿತಿ ಹೊಂದಿರುವುದನ್ನು ಗಮನಿಸಬಹುದು.

ಕಥೆಗಳು ಕೊನೆಯಲ್ಲಿ ಸುಖಮಯವಾಗಿ ಕೊನೆಗೊಳ್ಳುತ್ತವೆ. ಒಂದೇ ವರ್ಗದ ಕಥೆಗಳು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವನ್ನು ಹೊಂದುತ್ತಾ ಮೂಲಕ್ಕೆ ಧಕ್ಕೆ ಆಗದಂತೆ ರೂಪಾಂತರವನ್ನು ಪಡೆಯುತ್ತವೆ ಎಂಬುದನ್ನು ತಿಳಿಯಬಹುದು.

ಬುದ್ಧಿವಂತಿಕೆಯ ಸಾಲಿನಲ್ಲಿ ಬರುವ 'ಚಿಕ್ಕಸಿದ್ಧ ದೊಡ್ಡಸಿದ್ಧ' ಕಥೆ ಆರಂಭವಾಗುವುದೇ ಒಂದು ವಿಶಿಷ್ಟ ರೀತಿಯಲ್ಲಿ; ರಾಜಕುಮಾರ ಮಂತ್ರಿಕುಮಾರ ಆಪ್ತ ಸ್ನೇಹಿತರು. ಒಂದು ಕ್ಷಣ ಅಗಲುತ್ತಿರಲಿಲ್ಲ. ಈ ರೀತಿಯಾದರೆ ಮದುವೆಯಾದರೆ ಏನು ಮಾಡ್ತಾರೆ? ಈಗಲೇ ಏನಾದರೂ ಮಾಡಿ ಈ ಇಬ್ಬರ ಗೆಳೆತನವನ್ನು ದೂರ ಮಾಡಬೇಕೆಂದು ರಾಜ ಮತ್ತು ಮಂತ್ರಿ ಉಪಾಯ ಮಾಡುತ್ತಾರೆ. ಜೀರ್ ಸಂಗಮ್ಮ ಇವರಿಬ್ಬರನ್ನು ಅಂದರೆ ಗೆಳೆಯರನ್ನು ಬೇರ್ಪಡಿಸುವಲ್ಲಿ ಯಶಸ್ವಿಯಾಗುತ್ತಾಳೆ. ಈ ಸಮಯದಲ್ಲಿ ರಾಜಕುಮಾರ ಮಂತ್ರಿಕುಮಾರನ ಕೊಲೆ ಮಾಡಬೇಕೆಂದು ಪಟ್ಟು ಹಿಡಿದಾಗ ರಾಜ ಮತ್ತು ಮಂತ್ರಿ ಬುದ್ಧಿವಂತಿಕೆಯಿಂದ ಮಂತ್ರಿಕುಮಾರನನ್ನು ರಕ್ಷಿಸಿಡುತ್ತಾರೆ. ಒಂದು ದಿವಸ ರಾಜಕುಮಾರ ಗೌಡನ ಸೊಸೆ ಮಾಡಿದ ಸಂಕೇತಗಳಿಗೆ ಅರ್ಥ ತಿಳಿಯಲಾರದೆ, ಅವಳಿಗಾಗಿ ಆಸೆ ಪಟ್ಟು ಹಾಸಿಗೆ ಹಿಡಿದು ಮತ್ತೆ ಮಂತ್ರಿಕುಮಾರನನ್ನು ನೆನಪು ಮಾಡಿಕೊಳ್ಳುತ್ತಾನೆ. ರಾಜ ಮತ್ತು ಮಂತ್ರಿ ಎಚ್ಚರಿಕೆಯಿಂದ ಇವನನ್ನು ಗಮನಿಸಿ ಅನಂತರ ಮಂತ್ರಿ ಕುಮಾರನನ್ನು ಕರೆದು ತಂದು ಭೇಟಿ ಮಾಡಿಸುತ್ತಾರೆ. ಆಗ ರಾಜಕುಮಾರ ನಡೆದ ಸಂಗತಿ ತಿಳಿಸಿ ಅವಳು ಸೂಚಿಸಿದ ಸಂಕೇತಗಳ ಅರ್ಥಗಳನ್ನು ತಿಳಿದು ಮಂತ್ರಿಕುಮಾರನ ಸಹಾಯದಿಂದ ಅವಳನ್ನು ಭೇಟಿಯಾಗುತ್ತಾನೆ. ರಾಜಕುಮಾರ ಮತ್ತು ಗೌಡನ ಸೊಸೆ ಏಕಾಂತದಲ್ಲಿದ್ದ ಸಮಯದಲ್ಲಿ ಊರಿನ ಒರಿಯರ ಕೈಗೆ ಸಿಕ್ಕಿಬಿದ್ದ ಸಂದರ್ಭದಲ್ಲಿ ಮಂತ್ರಿಕುಮಾರ ಬುದ್ಧಿವಂತಿಕೆಯಿಂದ ಮುಂದೆ ಆಗಬಹುದಾಗಿದ್ದ ದುರಂತವನ್ನು ತಪ್ಪಿಸಿ ಶಾಶ್ವತವಾಗಿ ಗೌಡನ ಸೊಸೆ ರಾಜಕುಮಾರನ ಹೆಂಡತಿಯಾಗಿರುವಂತೆ ಮಂತ್ರಿಕುಮಾರ

ಮಾಡುತ್ತಾನೆ. ತಮ್ಮ ಊರಿಗೆ ಬರುವಾಗ ದಾರಿಯಲ್ಲಿ ಪಕ್ಷಿಗಳು ನುಡಿದ ಭವಿಷ್ಯವನ್ನು ಕೇಳಿಸಿಕೊಂಡ ಮಂತ್ರಿಕುಮಾರ, ರಾಜಕುಮಾರನಿಗೆ ಒದಗಬಹುದಾದ ಅಪಾಯವನ್ನು ತಪ್ಪಿಸುತ್ತಾನೆ. ಈಗ ಮತ್ತೊಮ್ಮೆ ರಾಜಕುಮಾರ ಮಂತ್ರಿಕುಮಾರನ ಮೇಲೆ ಸಂಶಯ ತಳೆದು ಅವನನ್ನು ಕೊಲೆ ಮಾಡಲು ಮುಂದಾದಾಗ ಕತ್ತಿ ಹೂವಿನ ಮಾಲೆಯಾಗುತ್ತದೆ. ರಾಜಕುಮಾರ ಮಂತ್ರಿಕುಮಾರನನ್ನು ಕ್ಷಮೆ ಬೇಡಿ ಅವನನ್ನೇ ಮಂತ್ರಿಯನ್ನಾಗಿ ಮಾಡಿ ಎಲ್ಲರೂ ಸುಖವಾಗಿರುತ್ತಾರೆ.

ಈ ಕಥೆಗೆ ಸಂವಾದಿಯಾದ ಕಥೆ ಬೆಳಗಾಂ ಜಿಲ್ಲೆಯ ಜನಪದ ಕಥೆಗಳು' ಸಂಕಲನದಲ್ಲಿರುವ 'ಅಣ್ಣ ತಮ್ಮ' ಇಲ್ಲಿ ಕಥೆಯ ಆರಂಭ ಉಚಿತ ರೀತಿಯಲ್ಲಿ ಪ್ರಾರಂಭವಾಗಿ ಹಂತ ಹಂತವಾಗಿ ಬೆಳವಣಿಗೆಯನ್ನು ಪಡೆಯುತ್ತಾ ಹೋಗುತ್ತದೆ. ಬಡತನದಲ್ಲಿದ್ದ ಅಣ್ಣ ತಮ್ಮ ಇದ್ದ ಸ್ವಲ್ಪ ಬಂಡವಾಳದಿಂದಲೇ ಕಿರಾಣಿ ಅಂಗಡಿ ಸ್ಥಾಪಿಸಿ ಆ ಮೂಲಕ ಶ್ರೀಮಂತರಾಗಿ ದೇಶ ಸಂಚಾರ ಹೊರಡುತ್ತಾರೆ. ಪ್ರವಾಸದ ಸಂದರ್ಭದಲ್ಲಿ ಆಯಾಸದಿಂದ ಅಣ್ಣ ಮಲಗಿದ. ತಮ್ಮ ಎಚ್ಚರವಾಗಿದ್ದ ಆ ಸಮಯದಲ್ಲಿ ಅದೇ ಹಾದಿಯಲ್ಲಿ ಹಾದು ಹೋಗುತ್ತಿದ್ದ ಪಟ್ಟಣ ಶೆಟ್ಟರ ಸೊಸೆ ಇವನ ರೂಪಕ್ಕೆ ಮನಸೋತು ಸಾಂಕೇತಿಕ ಅರ್ಥದಲ್ಲಿ ಮಾತನಾಡಿ ಹೋಗುತ್ತಾಳೆ. ಅರ್ಥ ತಿಳಿಯದೇ ಯೋಚಿಸುತ್ತಿದ್ದ ತಮ್ಮನ ನೆರವಿಗೆ ಅಣ್ಣ ಬರುತ್ತಾನೆ. ತನ್ನ ಬುದ್ಧಿವಂತಿಕೆ ಯಿಂದ ಆಕೆಯನ್ನು ತಮ್ಮನ ಅಂಕಿತಕ್ಕೆ ಖಾಯಂ ಆಗಿ ಒಳಪಡಿಸಿಕೊಡುತ್ತಾನೆ. ಈ ಮಧ್ಯದಲ್ಲಿ ಅವಳ ಸಹಾಯ ಪಡೆದು ಅವಳ ಗಂಡನನ್ನು ಯಾರಿಗೂ ಸಂಶಯ ಬಾರದಂತೆ ಕೊಲೆ ಮಾಡಿ ತಮ್ಮ ಕಾರ್ಯ ದಲ್ಲಿ ಜಯಶೀಲರಾಗುತ್ತಾರೆ.

ಇವೆರಡು ಕಥೆಗಳನ್ನು ಗಮನಿಸಿದಾಗ ತಾನೊಬ್ಬರ ಮನೆ ಸೊಸೆಯಾಗಿದ್ದು ಆಕಸ್ಮಿಕವಾಗಿ ಮಾರ್ಗ ಮಧ್ಯದಲ್ಲಿ ನೋಡಿದ ಯುವಕನಿಗೆ ಒಲಿಯದ ಹೆಣ್ಣನ್ನೇ ಕುರಿತದ್ದೇ ಆಗಿದ್ದರೂ ನಡೆಯುವ ಘಟನೆಗಳು ವಿಭಿನ್ನ ರೀತಿಯಲ್ಲಿವೆ. 'ಬೆಳಗಾಂ ಜಿಲ್ಲೆಯ ಜನಪದ ಕಥೆಗಳು' ಸಂಕಲನದಲ್ಲಿರುವ 'ಅಣ್ಣ ತಮ್ಮ' ಕಥೆ ಸಾವಾಕಾಶವಾಗಿ ಪ್ರಾರಂಭವಾಗಿ ನಡೆಯುವ ಘಟನೆಗಳು ಒಂದಕ್ಕೊಂದು ಪೂರಕವಾಗಿ ಸಹಜತೆಯನ್ನು ಪಡೆದಿದೆ. ಆದರೆ 'ಚಿಕ್ಕಸಿದ್ಧ ದೊಡ್ಡಸಿದ್ದ' ಕಥೆಯ ಆರಂಭವೇ ವಿಶಿಷ್ಟ ರೀತಿಯಲ್ಲಿದ್ದು ಮಧ್ಯ ಮಧ್ಯ ಇದ್ದಕ್ಕಿದ್ದಂತೆಯೇ ಒಂದೊಂದು ತಿರುವು ಪಡೆದುಕೊಳ್ಳುತ್ತದೆ. ಎರಡೂ ಕಥೆಗಳು ಸುಖಾಂತವಾಗಿ ಮುಕ್ತಾಯವಾದರೂ 'ಅಣ್ಣ ತಮ್ಮ' ಕಥೆಯ ಏಕಾನತೆ 'ಚಿಕ್ಕಸಿದ್ದ ದೊಡ್ಡಸಿದ್ಧ' ಕಥೆಯಲ್ಲಿ ಕಂಡುಬರುವುದಿಲ್ಲ. ಕತ್ತಿ ಹೂಮಾಲೆಯಾಗುವ ಆಶಯ ಮತ್ತು ಪಕ್ಷಿಗಳ ಸಂಭಾಷಣೆಯನ್ನು ಗಮನಿಸಿದಾಗ ಅತಿಮಾನುಷ ಪ್ರಭಾವ ಈ ಕಥೆಯ ಮೇಲಾಗಿರುವುದು ಕಂಡುಬರುತ್ತದೆ.

ಗಂಡ-ಹೆಣ್ತಿ ಕಥೆಯಲ್ಲಿ ಮೂವರು ಅಣ್ಣ ತಮ್ಮಂದಿರು ಒಬ್ಬಳೇ ತಂಗಿ. ತಂಗಿಗೆ ಯಾವುದೇ ತೊಂದರೆ, ಕಷ್ಟವಿಲ್ಲದೆ ಸುಖದ ಸುಪ್ಪತ್ತಿಗೆಯಲ್ಲಿ ಬೆಳೆಸಿದರು. ಒಮ್ಮೆ ವ್ಯಾಪಾರಕ್ಕಾಗಿ ಬೇರೆಡೆಗೆ ಅಣ್ಣತಮ್ಮಂದಿರು ಹೋಗುವ ಸಂಭವ ಬರುತ್ತದೆ. ಅಂತಹ ಸಂದರ್ಭದಲ್ಲಿ ಮನೆಯಲ್ಲಿ ಅತ್ತಿಗೆಯಂದಿರು ಕೊಡಬಾರದ ತೊಂದರೆಗಳನ್ನು ಅವಳಿಗೆ ಕೊಡುವರು. ಮನೆಯ ಎಲ್ಲಾ ಕೆಲಸಗಳನ್ನು ಅವಳ ಕೈಯಲ್ಲಿ ಮಾಡಿಸುವರು.

ಇತ್ತ ತಂದೆ-ತಾಯಿಗಳು ವಯಸ್ಸಾದವರು ತಾನೇ ಅವರೇನು ಮಾಡ್ಯಾರು. ಒಂದು ದಿನ ಅತ್ತಿಗೆಯರು ಅವಳನ್ನು ಮನೆಯಿಂದ ಹೊರಗೆ ಹಾಕುವರು.

ಹೀಗೆ ಹೊರಬಂದ ಅವಳು ದಿಕ್ಕು ತೋಚದೇ ಕಾಲುನಡುಗೆಯಲ್ಲಿ ಕಾಡು-ಮೇಡು ಅನ್ನದೆ ಪರದಾಡುವ ಸಂದರ್ಭದಲ್ಲಿ ಒಂದು ತೋಟ ಸಿಗುತ್ತದೆ. ಅದೇ ತೋಟದಲ್ಲಿ ಮಿಶ್ರಮಿಸಲು ಅಲ್ಲಿಯೇ ಉಳಿಯುತ್ತಾಳೆ. ತೋಟದ ಮಾಲೀಕನಿಗೆ ಒಬ್ಬನೇ ಮಗ. ಮಗ ಸತ್ತು ಮೂರು ದಿನಗಳಾಗಿರುತ್ತವೆ. ಅವಳು ರಾತ್ರಿ ಅಲ್ಲಿಯೇ ಉಳಿಯಬೇಕಾಗುತ್ತದೆ. ಈ ಸತ್ತ ಮನುಷ್ಯ ದೆವ್ವವಾಗಿ ಬಂದು ಮಾತನಾಡಿಸುತ್ತಾನೆ. ಆದರೆ ಅವಳಿಗೆ ಅವನು ದೆವ್ವವೆಂದು ಗೊತ್ತಾಗುವುದಿಲ್ಲ. ಹೀಗೆ ಅವರಿಬ್ಬರ ಸ್ನೇಹ ಪ್ರೀತಿಯಾಗಿ ಮಾರ್ಪಾಡು ಹೊಂದುತ್ತದೆ. ಈ ದೆವ್ವ ಹಗಲೆಲ್ಲಾ ಮರಿಯಾಗಿ ರಾತ್ರಿ ಮಾತ್ರ ಮನುಷ್ಯನಾಗಿ ಜೀವಿಸುತ್ತಿರುತ್ತಾನೆ. ಹೀಗೆ ಅವರಿಬ್ಬರ ಪ್ರೀತಿಯ ಪ್ರತಿಫಲವಾಗಿ ಅವಳು ಗರ್ಭವತಿಯಾಗುತ್ತಾಳೆ. ಇದು ಸಮಾಜದಲ್ಲಿ ನುಂಗಲಾದ ತುತ್ತಾಗುತ್ತದೆ. ಹಾಗೆಯೇ ಅವಳಿಗೆ ಹೆರಿಗೆ ದಿನಗಳು ಸಮೀಪಿಸುತ್ತಿದ್ದಂತೆ ಎಲ್ಲಿ ಹೆರಿಗೆ ಆಗುವುದು ಎಂಬ ಭಯವಾಗುತ್ತದೆ. ಆ ದೆವ್ವ ತನ್ನ ಮನೆ ಇರುವ ಜಾಗ, ತಾಯಿಯ ಪರಿಚಯ ಹೇಳುತ್ತಾನೆ. ನೀನು ನಮ್ಮ ತಾಯಿಯನ್ನು ಕಾಡಿಬೇಡಿಯಾದರೂ ಆಶ್ರಯ ಪಡಿ ಎಂದು ಹೇಳುವನು. ಅವಳು ಅವನು ಹೇಳಿದಂತೆ ಆಶ್ರಯ ಪಡೆಯುವಳು. ಆ ಮುದುಕಿಗಾದರೂ ಯಾರೂ ಇಲ್ಲ. ಹಾಗಾಗಿ ಅವಳಿಗೆ ಆಶ್ರಯ ದೊರೆಯುತ್ತದೆ. ಹೀಗೆ ಒಂದು ದಿನ ಹೆರಿಗೆ ನೋವು ಪ್ರಾರಂಭವಾಗಿ ಮುದ್ದಾದ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಹೀಗೆ ಕಾಲ ಕಳೆಯುವಾಗ ಮುದುಕಿಯ ಮಗ ಅವಳ ಗಂಡ ರಾತ್ರಿ ಸಮಯದಲ್ಲಿ ಬಂದು ಮಗುವನ್ನು ನೋಡಿಕೊಂಡು ಹೋಗುತ್ತಿರುತ್ತಾನೆ. ಒಂದು ದಿನ ಅಜ್ಜಿಗೆ ಸಂಶಯ ಬಂದು ಅವಳಿಗೆ ಕೇಳುತ್ತಾಳೆ. ಅವನು ಯಾರು ರಾತ್ರಿ ಸಮಯದಲ್ಲಿ ಬಂದು ಹೋಗುವುದು. ಆಗ ಅವಳು ನಿನ್ನ ಮಗ ದೆವ್ವ ಆಗಿದ್ದಾನೆ. ಅವನಿಗೆ ಹುಟ್ಟಿರೋ ಮಗುವೇ ಇದು. ಬೇಕಾದರೆ ನಾಳೆ ನಿನ್ನ ಮಗ ಬಂದಾಗ ಹಿಡಿದು ಕೇಳು ಎನ್ನುತ್ತಾಳೆ. ಅದರಂತೆ ಅವಳು ಹಾಗೆ ಮಾಡುವಳು ನಿಜ ಸಂಗತಿ ತಿಳಿಯುತ್ತಾಳೆ.

ಮಗ ತಾಯಿಗೆ ಒಂದು ಮಾತು ಹೇಳುತ್ತಾನೆ. ಮಗನ ನಾಮಕರಣಕ್ಕೆ ದೇವಲೋಕದಿಂದ ದೇವಗಣಕ್ಕೆ, ನಾಗಣ್ಣಕ್ಕಿ, ನಿತಗಣಕ್ಕಿ, ಗಾಳಿಗಣಕ್ಕಿ ಅಂತ ಬರ್ತಾರ. ಅವರನ್ನು ಕಂಡುಹಿಡಿದು ಇಲ್ಲಿಯೇ ಉಳಿಯುವುದಕ್ಕೆ ಕಾಡಿ ಬೇಡಿ ಅವರು ಇಲ್ಲಿ ಉಳಿಯಲು ಸಾಧ್ಯವಿಲ್ಲ. ಹಾಗಾಗಿ ನೀನು ಆವಾಗ ನನ್ನನ್ನು ಬದುಕಿಸುವಂತೆ ಕೇಳು ಖಂಡಿತವಾಗಿ ಅವರು ಬದುಕಿಸುತ್ತಾರೆ ಎಂದನು. ತಾಯಿ ಅದರಂತೆ ಮಾಡುವ ದಿನಗಳು ಹತ್ತಿರ ಬಂದೇ ಬಿಡ್ತು. ನಾಮಕರಣದ ದಿನದಂತೆ ಈ ದೇವಕನ್ಯೆಯರನ್ನು ಗುರುತಿಸಿ ಅವರನ್ನು ಮಗ ಹೇಳಿಕೊಟ್ಟ ಹಾಗೆ ಮಾಡುವಳು. ಅದರಂತೆ ಮಗನನ್ನು ಬದುಕಿಸಿ ನೂರು ವರ್ಷಗಳ ಕಾಲ ಬದುಕುವಂತೆ ಆಶೀರ್ವದಿಸಿ ಹೋಗುತ್ತಾರೆ. ತಾಯಿಗೆ ಇದ್ದ ಒಬ್ಬ ಮಗ ಬದುಕಿ ತನ್ನ ಬಳಿ ಬಂದಿದ್ದು ನೋಡಿ ತನಗಾದ ಸಂತೋಷ ಅಷ್ಟಿಷ್ಟಲ್ಲ. ತನಗೂ ಆಶ್ರಯ ಇಲ್ಲದಿರುವಾಗ ವಂಶೋದ್ಧಾರಕ್ಕೆ ಯಾರು ಇಲ್ಲದಂತಾದಾಗ ಔಷಧಿಯಾಗಿ ಸತ್ತ ಮಗ ಮರಳಿಬಂದಿರುವುದು ತುಂಬಾ ಸಂತೋಷವಾಗುತ್ತದೆ. ಅಂದು ದೆವ್ವವಾಗಿದ್ದಾಗ

ಮಾಡಿಕೊಂಡ ಮದುವೆಗಿಂತ ಇಂದು ವಿಜೃಂಭಣೆಯಿಂದ ಮದುವೆ ಮಾಡಬೇಕು ಎಂದು ಊರಿನ ಸಮಸ್ತ ನಾಗರಿಕರಿಗೆ ಮೃಷ್ಟಾನ್ನ ಭೋಜನ ಹಾಕಿಸಿ ಮದುವೆ ಮಾಡಬೇಕು ಎಂದು ಅದರಂತೆ ಮದುವೆ ಮಾಡುವಳು. ಇತ್ತ ತಾಯಿ ಸೊಸೆ ಮಗ ಮೊಮ್ಮಗ ಒಟ್ಟಾಗಿ ಸುಖವಾಗಿ ಜೀವನ ಮಾಡುವರು.

ಒಟ್ಟಾರೆ ಈ ಕಥೆಯಲ್ಲಿ ದೆವ್ವದೊಂದಿಗೆ ನರ ಹೆಣ್ಣು ಅನೈತಿಕವಾಗಿ ಮಗುವನ್ನು ಪಡೆಯುವುದು ವಿಶೇಷ. ನಂತರ ದೇವರ ಸಹಾಯದಿಂದ ಪುನಃ ಪುನರ್ಜನ್ಮ ಪಡೆದು ಹೆಂಡ್ತಿ, ತಾಯಿಯೊಂದಿಗೆ ಸುಖ ಜೀವನ ಮಾಡುತ್ತಾರೆ.

ಮಾಟಕ್ಕೊಳಗಾದ ಗಂಡ ಎಂಬ ಕಥೆಯಲ್ಲಿ ರಾಜ-ರಾಣಿಯರಿಗೆ ಮಕ್ಕಳಾಗಿರುವುದಿಲ್ಲ. ಒಂದು ದಿನ ಒಬ್ಬ ಸಾಧು ಮನೆಗೆ ಬಂದು ಭಿಕ್ಷೆ ಬೇಡುತ್ತಾನೆ. ರಾಜನ ಹೆಂಡ್ತಿ ಹಿಟ್ಟು ತಂದು ಭಿಕ್ಷೆ ನೀಡುತ್ತಾಳೆ. ಆದರೆ ಸಾಧು ಇಲ್ಲಿಯೇ ಊಟ ಮಾಡುತ್ತೇನೆ ಎಂದು ಹೇಳಿದ. ಅದರಂತೆ ಅಲ್ಲಿಯೇ ಊಟ ಮಾಡುವುದಕ್ಕೆ ಅವಕಾಶ ಮಾಡಿಕೊಡುತ್ತಾಳೆ. ಅದರಂತೆ ಊಟ ಮುಗಿದ ಮೇಲೆ ನಿನಗೆ ಏನು ಬೇಕು ಕೇಳು ಮಗಳೇ ಕೊಡುತ್ತೇನೆ ಎಂದಾಗ ನನಗೆ ಏನೂ ಬೇಡ ಒಂದು ಮಗು ಬೇಕು ಎಂದು ಕೇಳುತ್ತಾಳೆ. ಅದರಂತೆಯೇ ಒಂದು ವರ್ಷದ ಒಳಗಾ ಮಗು ಆಗುತ್ತದೆ. ಹನ್ನೆರಡು ವರ್ಷದ ಮಗ ಬೇಕಾ ಅಥವಾ ಹದಿನಾರು ವರ್ಷದ ಮಗ ಬೇಕಾ ಎಂದು ಕೇಳುತ್ತಾನೆ. ಹನ್ನೆರಡು ವರ್ಷದ ಮಗ ಆದರೆ ತುಂಬಾ ಚುರುಕಾಗಿರುತ್ತಾನೆ. ಹದಿನಾರು ವರ್ಷದ ಹುಡುಗನಾದರೆ ದಡ್ಡನಾಗಿರುತ್ತಾನೆ. ಯಾರು ಬೇಕು ಕೇಳಿಕೋ ಎಂದಾಗ ಹನ್ನೆರಡು ವರ್ಷದ ಮಗನನ್ನು ದಯಪಾಲಿಸಿ ಎಂದು ಬೇಡಿದಳು. ಹೀಗಿರುವಾಗ ಹೆಂಡ್ತಿ(ರಾಣಿ) ಗರ್ಭಿಣಿಯಾಗಿ ಒಂದು ಹುಲಿ ಮಗುವಿಗೆ ಜನ್ಮ ನೀಡಿದಳು. ಇದನ್ನು ನೋಡಿದವರೆಲ್ಲಾ ಆಶ್ಚರ್ಯಪಟ್ಟರು. ರಾಜ ಇದನ್ನು ಕೊಲ್ಲಿಸದೇ ಒಂದು ಪಂಜರದಲ್ಲಿ ಇಟ್ಟು ಸಾಕತೊಡಗಿದ. ಅದು ದೊಡ್ಡದಾಗಿ ಬೆಳೆಯಿತು.

ರಾಜ ಸೇವಕರನ್ನು ಕರೆದು ಹೇಳುತ್ತಾನೆ. ಹುಲಿಗೆ ಏನು ಬೇಕು ಕೇಳು ಅಂತ. ಹಾಗೆ ಕೇಳುತ್ತಾರೆ. ಹುಲಿ ಹೀಗೆ ಹೇಳುತ್ತದೆ. ವಯಸ್ಸಿಗೆ ಬಂದಿದ್ದಾನೆ ಮದುವೆ ಮಾಡೋಕೆ ಹೇಳಿ ಎಂದಾಗ ಆ ಹುಲಿಯ ಆಸೆ ಈಡೇರಿಸಲು ಇಪ್ಪತ್ತೈದು ಸಾವಿರ ಹಣ ಆಮಿಷ ಒಡ್ಡಿ ಹೇಳುವರು. ಆದರೆ ಎಲ್ಲಿಯೂ ಹೆಣ್ಣು ಸಿಕ್ಕೊಲ್ಲ. ಆದರೆ ಒಂದು ಊರಿನಲ್ಲಿ ಗಂಡ-ಹೆಂಡತಿ ಇರುತ್ತಾರೆ. ಎರಡನೇ ಹೆಂಡತಿಗೆ 'ಗಂಗಮ್ಮ' ಎಂಬ ಮಗಳನ್ನು ಕೊಡಲು ಸಿದ್ಧರಾಗುತ್ತಾರೆ. ಅದರಂತೆ ಮದುವೆ ಮಾಡಿಕೊಡುತ್ತಾರೆ. ಆ ಹುಲಿ ತನ್ನ ಹೆಂಡತಿಗೆ ಹೇಳುತ್ತದೆ. ನನ್ನ ಬಾಲವನ್ನು ಹಿಡಿದು ಜಗ್ಗು ಎಂದು. ಹೆಂಡತಿ ಅದು ಹೇಳಿದಹಾಗೆ ಮಾಡುತ್ತಾಳೆ. ಹುಲಿ ಮಾಯವಾದಾಗ ಪುರುಷನಾಗುತ್ತಾನೆ. ನಂತರದಲ್ಲಿ ಗರ್ಭಧರಿಸಿ ಮಗುವಿಗೆ ಜನ್ಮ ನೀಡಿ ಸುಖವಾಗಿ ಇರುತ್ತಾರೆ.

ಅತ್ತಿಗೆ ನಾದಿನಿ ಕಥೆಯಲ್ಲಿ ಅತ್ತಿಗೆ, ನಾದಿನಿ, ಅಣ್ಣನ ಪಾತ್ರಗಳು ಬಹು ಮುಖ್ಯವಾದವು. ಒಂದೂರಲ್ಲಿ ಅತ್ತಿಗೆ ನಾದಿನಿ ಇದ್ರಂತ. ದಿನಾ ಜಗಳ ಆಡಕಂತ ಇರತಿದ್ರು. ಗಂಡಗೇನ ಗೊತ್ತು ತನ್ನ ಹೆಂಡತಿ ಇಂತವಳು ಅಂತ. ನಾಗರ ಅಮವಾಸ್ಯೆ ಬಂತು ನಾದಿನಿಗೆ ಹಬ್ಬಕ್ಕೆ ಸೀರೆ ಇರಲಿಲ್ಲ. ಅದಕ್ಕೆ ಅತ್ತಿಗೆಗೆ ಸೀರೆ ಕೇಳುತ್ತಾಳೆ. ಅವಳಲ್ಲಿ ಎಷ್ಟೇ ಕೋಪವಿದ್ದರೂ ನಕ್ಕಂತ ಉಟ್ಟುಕೊಳ್ಳಲಿಕ್ಕೆ ಸೀರೆ ಕೊಟ್ಟಳು ಅತ್ತಿಗೆ.

ಅತ್ತಿಗೆ ಕೊಟ್ಟ ಸೀರೆ ಉಟುಕೊಂಡು ಗೆಳತಿಯರೊಡನೆ ಜೋಕಾಲಿ ಆಡುತ್ತಿದ್ದಳು. ಗೆಳತಿಯರಲ್ಲಿ ಒಬ್ಬಳು ಕಟ್ಟಿಗೆ ತಗೊಂಡು ತಿವಿದಳು. ಕಟ್ಟಿಗೆ ಸೀರೆಗೆ ಸಿಕ್ಕಿಕೊಂಡು ಹರಿಯಿತು. ಇದನ್ನು ನೋಡಿದ ಅತ್ತಿಗೆ ಇವಳಿಗೆ ಏನಾದರೂ ಮಾಡಬೇಕೆಂದು ಕೋಪ ಮಾಡಿಕೊಂಡು ತನ್ನ ಗಂಡ ಬರುವುದನ್ನೇ ಕಾಯುತ್ತಿದ್ದಳು.

ಕೆಲಸದಿಂದ ಬಂದ ಗಂಡನಿಗೆ ಇಲ್ಲಸಲ್ಲದ ಮಾತು ಹೇಳುತ್ತಾಳೆ. ಇವಳನ್ನು ಗಂಡನ ಮನೆಗೆ ಕರೆದುಕೊಂಡು ಹೋಗುವ ಹಾದಿಯಲ್ಲಿ ಬಾವಿ ಕಂಡರೆ ಬಾವಿಯಲ್ಲಿ ನೂಕಿ ಸಾಯಿಸಿಬಿಡು ಎಂದಳು. ಅದಕ್ಕೆ ಗಂಡ ಕೂಡ ಒಪ್ಪಿಕೊಂಡು ತಂಗಿಗೆ ಹೇಳುತ್ತಾನೆ. ನಡಿಯವ್ವಾ ತಂಗಿ ನಿನ್ನನ್ನು ಗಂಡನ ಮನೆಗೆ ಕಳುಹಿಸಿ ಬರುತ್ತೇನೆ ಎನ್ನುತ್ತಾನೆ. ಈ ಮಾತನ್ನು ಕೇಳಿದ ತಂಗಿ ಕಣ್ಣಲ್ಲಿ ನೀರು ಬರುತ್ತದೆ. ಅಣ್ಣನ ಬಾಯಲ್ಲಿ ಈ ಮಾತು ಬಂದ ಕೂಡಲೇ ತಂಗಿ ಗಂಡನ ಮನೆಗೆ ಹೋಗಲು ತಯಾರಾದಳು. ತಂಗಿ ಅಣ್ಣ ಇಬ್ಬರು ಕೂಡಿ ಹೊರಟರು. ಹೋಗುವಾಗ ಮಧ್ಯಾಹ್ನದ ವೇಳೆ ಆಯ್ತು. ದಣಿದ ದೇಹಗಳಿಗೆ ವಿಶ್ರಮಿಸಲು ಹಾಗೂ ಆಹಾರ ಸೇವಿಸಲು ಸಮಯ ಸ್ಥಳ ಬೇಕಾಗಿತ್ತು. ಅವರು ನಡೆದುಕೊಂಡು ಹೋಗುವ ದಾರಿಯಲ್ಲಿ ಒಂದು ಬಾವಿ ಸಿಕ್ತು. ಅಲ್ಲಿ ತಾವು ಕಟ್ಟಿಕೊಂಡು ಬಂದ ಬುತ್ತಿಯನ್ನು ಬಿಚ್ಚಿ ಊಟ ಮಾಡಿದರು. ತಂಗಿ ನೀರು ಕುಡಿಯಲು ಬಾವಿಗೆ ಬಾಗಿದಾಗ ಅಣ್ಣ ಹಿಂದಿನಿಂದ ನೀರಲ್ಲಿ ದೂಡಿಯೇ ಬಿಟ್ಟ. ನೀರಲ್ಲಿ ಬಿದ್ದ ತಂಗಿ ಮೂರು ಸಾರಿ ನೀರಲ್ಲಿ ತೇಲಿ ಮುಳುಗಿ ಪ್ರಾಣಬಿಟ್ಟಳು. ಇತ್ತ ಮನೆಗೆ ವಾಪಾಸ್ಸಾದ ಗಂಡನನ್ನು ಹೆಂಡ್ತಿ ಕೇಳುತ್ತಾಳೆ. ಅವಳನ್ನು ಬಾಯಿಗೆ ದೂಡಿದರೇನ್ರಿ ಎಂದಾಗ ಹೂಂ ದೂಡಿ ಬಂದೆ ಎಂದು ನೇರವಾಗಿ ಹೇಳಿದ ಪಾಪಿ.

ನಾದಿನಿ ಗಂಡನ ಕಡೆಯವರು ಸೊಸೆಯನ್ನು ಕರೆತರಲು ಅವರ ಊರಿಗೆ ಬರುವ ಹಾದಿಯಲ್ಲಿ ಬಾವಿ ಕಂಡಿತು. ನೀರು ಕುಡಿದು ಹೋಗೋಣ ಸ್ವಲ್ಪ ವಿಶ್ರಮಿಸೋಣ ಎಂದು ಬಂದರು. ಬಿಸಲಲ್ಲಿ ದಣಿವರಿದಿದ್ದ ಅವರು ಬಾವಿಯ ನೀರು ಕುಡಿಯಲು ಬಾವಿ ಹತ್ತಿರ ಬಂದರು. ಬಾವಿಯಲ್ಲಿ ಸುಂದರವಾದ ಕಮಲದ ಹೂ ಇತ್ತು. ಇದನ್ನು ಕಿತ್ತುಕೊಂಡು ಸೊಸೆಗೆ ಕೊಟ್ಟರೆ ತುಂಬಾ ಖುಷಿಪಡುತ್ತಾಳೆ ಎಂದು ಕೀಳಲಿಕ್ಕೆ ಹೋದರೆ ಆ ಹೂವು "ಮುಟ್ಟಬ್ಯಾಡ ಅತ್ತಿ ಮುಟ್ಟಿದರೆ ಕೆಟ್ಟೇನು. ಜರದ ಸೀರಿ ಸಲುವಾಗಿ ಜೀವ ಕೊಟ್ಟೇನೆ"[೭೯] ಅಂತ. ಈ ಮಾತನ್ನು ಕಿವಿಗೆ ಹಾಕಿಕೊಳ್ಳಲಾರದೆ ಸೊಸೆ ಮನೆಗೆ ಬಂದರು. ಕಾಲು ಮುಖ ತೊಳೆಯಲು ನೀರು ಕೊಟ್ಟರು. ತೊಳೆದುಕೊಂಡು ಮನೇಲಿ ಕೂತುಕೊಂಡರು. ನಂತರ ನಮ್ಮ ಸೊಸೆ ಎಲ್ಲಿ ಎಂದು ಕೇಳಿದಾಗ ಅಣ್ಣನಿಗೆ ಜೀವ ಹೋಗಿ ಬಂದಂತಾಯ್ತು. ಈಗಾಗಲೇ ನಿಮ್ಮ ಊರಿಗೆ ಕಳುಹಿಸಿದ್ದೇವೆ. ಎಂದು ಹೇಳಿದ ತಕ್ಷಣ ಅನುಮಾನವಾಯ್ತು. ಅಲ್ಲಿಂದ ವಾಪಸ್ಸು ಬಾವಿ ಹತ್ತಿರ ಬಂದರು. ಬಾವಿಯಲ್ಲಿನ ಕಮಲದ ಹೂವು ಫಳಫಳನೆ ಹೊಳೆಯಲಾರಂಭಿಸಿತು. ಇದನ್ನು ಕೀಳಲು ದೊಡ್ಡಣ್ಣ ಕೈ ಹಾಕಿದಾಗ ಆ ಹೂವು "ಮುಟ್ಟಬ್ಯಾಡಣ್ಣ, ಮುಟ್ಟಿದರೆ ಕೆಟ್ಟೇನು. ಜರದ ಸೀರಿ ಸಲುವಾಗಿ ಜೀವ ಕೊಟ್ಟೇನು"[೮೦] ಅಂತು. ಹೂವು ಹೀಗೆ ಹೇಳಿದ ಕೂಡಲೇ ದಿಗ್ಭ್ರಮೆಯಾದರು. ನಂತರ ಸಣ್ಣ ಅಣ್ಣ ತಂಗಿಯನ್ನು ಬಾವಿಗೆ ತಳ್ಳಿದವನು ಕೀಳಲಿಕ್ಕೆ ಹೋಗುತ್ತಾನೆ. "ಮುಟ್ಟಬ್ಯಾಡ ಹೊಲಿಯ, ಮುಟ್ಟಿದರೆ ಕೆಟ್ಟೇನು, ಒಂದು ಸೀರಿ ಸಲುವಾಗಿನೆ ಜೀವ ಹೊಡಿದೆ"[೮೧] ಅಂತು. ಇದರ ಮಾತು ಕೇಳಿದ ಅಲ್ಲಿನವರು ಇವನೇ ಕೊಲೆ ಮಾಡಿದ್ದಾನೆ

ಎಂದು ಮನವರಿಕೆಯಾಯ್ತು. ಹೆಂಡತಿ ಮಾತು ಕೇಳಿ ಒಡಹುಟ್ಟಿದವಳನ್ನೇ ಕೊಲೆ ಮಾಡಿದ ಪಾಪಿ ಎಂದು ಎಲ್ಲರೂ ಛೀಮಾರಿ ಹಾಕಿ ಉಗುಳಿ ಹೋದರು. ಇತ್ತ ಅತ್ತೆ ಮಾವನವರು ತಮ್ಮ ಊರಿಗೆ ಬಂದು ಮಗನಿಗೆ ಇನ್ನೊಂದು ಮದುವೆ ಮಾಡಿದ್ರು, ಕೆಟ್ಟ ಗುಣದ ಸೊಸೆ ಇದ್ದರೆ ಇಂತಹ ಅನಾಹುತಗಳು ಆಗುತ್ತಾವೆ. ಈ ಕಥೆಯಲ್ಲಿ ಹೆಣ್ಣು ಹೆಣ್ಣಿಗೆ ಶತ್ರು ಎಂದು ಬಿಂಬಿತವಾಗಿದೆ. ಗಂಡಸ್ಸಾದವನು (ಅಣ್ಣ) ಹೆಂಡತಿ ಮಾತನ್ನು ಕೇಳಿದ್ದಕ್ಕೆ ಅಥವಾ ಸ್ವಂತ ನಿರ್ಧಾರ ತೆಗೆದುಕೊಳ್ಳಲಾಗದೆ ಇಂತಹ ಅನಾಹುತಗಳು ಸಂಭವಿಸುತ್ತವೆ.

ಹೆತ್ತಂಡೆ ಬೇರುಂಡೆ ಕಥೆಯಲ್ಲಿ ಮುಖ್ಯವಾಗಿ ಸಂಗಯ್ಯ, ರಾಜನ ಮಗನ ಪಾತ್ರಗಳು ಮುಖ್ಯವೆನಿಸುತ್ತವೆ. ರಾಜಕುಮಾರನಿಗೆ ಚಿಕ್ಕ ವಯಸ್ಸಿನಲ್ಲಿಯೇ ಮದುವೆಯಾಗಿರುತ್ತದೆ. ಸೊಸೆ ಚಿಕ್ಕವಳೆಂದು ತವರೂರಲ್ಲಿ ಬಿಟ್ಟಿರುತ್ತಾರೆ. ಒಬ್ಬ ಕ್ಷೌರಿಕನ ಮಗನನ್ನು ತಂದು ಸಾಕಿಕೊಂಡಿರುತ್ತಾರೆ. ಕಾರಣ ತಂದೆ-ತಾಯಿಗಳು ಯಾರು ಇರುವುದಿಲ್ಲ. ರಾಜಕುಮಾರ ಜೊತೆಯಲ್ಲಿಯೇ ಇವನಿಗೂ ವಿದ್ಯಾಭ್ಯಾಸ ಮುಗಿಯುತ್ತದೆ.

ರಾಜಕುಮಾರನ ತಂದೆ ತಾಯಿಗಳಿಗೆ ವಯಸ್ಸಾದ್ದರಿಂದ ಅವರಲ್ಲಿ ಮಾತಾಡಿಕೊಂಡು ಕೊನೆ ಗಳಿಗೆಯಲ್ಲಿ ಸೊಸೆಯನ್ನು ಕರೆತರಬೇಕು. ಈಗಾಗಲೇ ಸೊಸೆ ದೊಡ್ಡವಳಾಗಿದ್ದಾಳೆ. ಎಂದು ತೀರ್ಮಾನಿಸಿ ಕರೆತರುವುದಕ್ಕೆ ಮಗನಿಗೆ ಹೇಳುತ್ತಾರೆ. ರಾಜಕುಮಾರ ತನ್ನ ತಂದೆ ತಾಯಿಯರ ಮಾತಿನಂತೆ ಸೊಸೆ(ಹೆಂಡತಿ)ಯನ್ನು ಕರೆತರಲು ಹೊರಡುತ್ತಾನೆ. ಜೊತೆಯಲ್ಲಿ ಕ್ಷೌರಿಕನ ಮಗನನ್ನು ಜೊತೆ ಮಾಡಿಕೊಂಡು ಹೋಗುತ್ತಾನೆ. ದಾರಿ ಮಧ್ಯದಲ್ಲಿ ಕ್ಷೌರಿಕನ ಮಗನು ಹೀಗೆ ಕೇಳುತ್ತಾನೆ. ರಾಜಕುಮಾರ ನಿನ್ನ ರಾಜಕುಮಾರನ ವೇಷ ವನ್ನು ನಾನು ಹಾಕಿಕೊಳ್ಳುತ್ತೇನೆ. ಅತ್ತೆ ಮಾವರ ಮನೆ ಸಮೀಪಿಸುತ್ತಿದ್ದಂತೆ ವಾಪಸ್ಸು ಕೊಡುತ್ತೇನೆ ಎಂದು ಹೇಳಿ ಇಬ್ಬರು ಅದಲುಬದಲು ಉಡುಪು ಧರಿಸಿದರು. ಕ್ಷೌರಿಕನ ಮಗನು ರಾಜಕುಮಾರನ ಉಡುಪು ಧರಿಸಿದ ಕೂಡಲೇ ಕುದುರೆ ಏರಿದವನೇ ರಾಜಕುಮಾರನನ್ನು ಬಿಟ್ಟು ಅತ್ತೆ ಮಾವರ ಮನೆಗೆ ಹೊರಟೇಬಿಟ್ಟನು. ಇತ್ತ ಅತ್ತೆ, ಮಾವ, ಹೆಂಡತಿ ಕಾಯತೊಡಗಿದರು. ಕ್ಷೌರಿಕ ಹುಡುಗನನ್ನೇ ಅಳಿಯ ಎಂದು ತಿಳಿದು ಅತಿಥಿ ಸತ್ಕಾರ ಜೋರಾಗಿ ಮಾಡುತ್ತಾರೆ. ರಾಜಕುಮಾರ ನಿಧಾನವಾಗಿ ಬಂದು ಮನೆ ತಲುಪಿದ. ಆದರೆ ಇವನಿಗೆ ಅಂಬಲಿ ಕೊಟ್ಟು ದನದ ಕೊಟ್ಟಿಗೆಯಲ್ಲಿರುವಂತೆ ಸೂಚಿಸಿದರು. ಕ್ಷೌರಿಕ ಹುಡುಗ ಕೈಕಾಲು ತೊಳೆದವನೇ ಬೇಗನೆ ಊಟಕ್ಕೆ ಕೂತನು. ಧ್ಯಾನ-ಪೂಜೆ ಏನೂ ಮಾಡದಿದ್ದ ಕಾರಣ ಹೆಂಡತಿಗೆ ಅನುಮಾನ ಬಂದು ಕುದುರೆ ಸವಾರನೇ ನನ್ನ ಗಂಡ ಇವನಲ್ಲ ಎಂದು ಸಂಶಯ ಮೂಡುತ್ತದೆ.

ಕ್ಷೌರದ ಹುಡುಗ ರಾಜಕುಮಾರನಿಗೆ ಅನೇಕ ತೊಂದರೆಗಳನ್ನು ಕೊಡುವುದಕ್ಕೆ ಅನೇಕ ಸಂಚುಗಳನ್ನು ಹೂಡುತ್ತಾನೆ. ಅತ್ತೆ ಮಾವನವರಿಗೆ ಈ ನಮ್ಮ ಕುದುರೆ ಸವಾರ ಕಟ್ಟಿಗೆ ತರುವುದರಲ್ಲಿ ನಿಪುಣ. ಅವನನ್ನು ಮನೆಯಲ್ಲಿ ಸುಮ್ಮನೆ ಕೂರಿಸುವುದು ಬೇಡ ಎಂದು ಅತ್ತೆ-ಮಾವರಿಗೆ ಚಾಡಿ ಹೇಳಿ ಸೌದೆ ತರುವುದಕ್ಕೆ ಹೇಳುತ್ತಾನೆ. "ಮಾವನಾರ ನಮ್ಮ ಕುದುರೆ ಸವಾರ ಮಹಾ ದೊಡ್ಡ ಹೊರೆ ಕಟ್ಟಿಗೆ ತರತಾನ ಅವನು ದೊಡ್ಡ ಕಟ್ಟಿಗೆ ಹೊರೆ ತಂದ ಸರಿಹೋಯ್ತು ಇಲ್ಲದಿದ್ದರೆ ಅವನ ತಲೆ ಹೊಡೆಯುತ್ತೇನೆ ಅಂತಾ ಅನ್ನೀರಿ"[೭೨] ಅಂತ ರಾಜಕುಮಾರನ ಮಾವಗ ಸಂಗಯ್ಯ ಕಲಿಸಿಕೊಟ್ಟ.

ಅವನಿಗೆ ಒಂದು ತುತ್ತು ಕೂಳ ಹಾಕರಪ. ಅವನಿಗೊಂದ ಹರಕ ಗೋರೆಚೀಲ ಕೊಡ್ರಿ ಅಂತ ತನ್ನ ಕಾರಭಾರಿಗೆ ಅರಸ ಹೇಳಿದ. ರಾಜಕುಮಾರ ಊಟ ಮಾಡಿದ ಜಾಗ ಬಿಟ್ಟು ಎದ್ದು ಅವಾಗ ರಾಜಕುಮಾರನ ಮಾವ ಏ ಕುದುರಿ ಸವಾರ ಇಂದಿನಿಂದ ನೀನು ಕೊಡಲಿಯಿಂದ ಕಟ್ಟಿಗೆ ಕಡಿಯಬಾರದು, ಕಟ್ಟಿಗೆ ಹೊರೆಯನ್ನು ತರಬೇಕು ಇಲ್ಲದಿದ್ದರೆ ನೀರಿಲ್ಲದ ಜಾಗದಾಗ ನಿನ್ನ ತಲಿ ಹೊಡಸುತ್ತೀನಿ ಅಂದ. ರಾಜಕುಮಾರ ತನ್ನನ್ನು ಸಾಯಬಡಿಯಲಿಕ್ಕೆ ಕ್ಷೌರದ ಸಂಗಯ್ಯ ಮಾಡಿದ ಸಂಚು ಅಂತ ತಿಳಿಕೊಂಡ. ಅರಸನೂ ಕೊಡಲಿ ಕೊಡಲಿಲ್ಲ. ಹಗ್ಗವನ್ನು ಕೊಡಲಿಲ್ಲ. ಯಾವ ರೀತಿ ಕಟ್ಟಿಗೆ ತರಬೇಕು ಎಂದು ಆಲೋಚಿಸಿ ಅಡವಿಗೆ ಬಂದ.

ರಾಜಕುಮಾರ ಇಂತಹ ಕೆಲಸ ಎಂದೂ ಮಾಡಿದವನಲ್ಲ. ಅಡವಿಯಲ್ಲಿ ಕೂತು ಭಗವಂತಾ ಭಗವಂತಾ ಎಂದು ಕೂಗುತ್ತಿದ್ದ ಧ್ವನಿ ಶಿವಪಾರ್ವತಿಗೆ ಕೇಳಿಸಿತು. ಇಬ್ಬರು ಪ್ರತ್ಯಕ್ಷವಾದರು. ರಾಜಕುಮಾರ ನಡೆದ ಸತ್ಯ ಘಟನೆಯನ್ನು ಹೇಳಿದ. ಇವನ ಕಥೆ ಕೇಳಿದ ಶಿವಪಾರ್ವತಿಯರು ಮರಗುತ್ತಾರೆ. ನಂತರ ಮಂತ್ರವನ್ನು ಕಲಿಸಿಕೊಡುತ್ತಾರೆ. ಕಟ್ಟಿಗೆಯಲ್ಲ ಕೂಡಿಸಿ ಒಟ್ಟಿಗೆ ಹೊಂದಿಸಿದು. ಹತ್ತಂಡೆ ಎಂದು ಅನ್ನು. ಕಟ್ಟಿಗೆಲ್ಲಾ ಒಂದಕೊಂಡ ಕೂಡಿಕೊಳ್ತಾವ. ಕಟ್ಟಿಗೆಯ ತೆಗೆಯಬೇಕಾದರೆ ಬೇರುಂಡೆ ಎಂದು ಅನ್ನು. ಅಂದರೆ ಕಟ್ಟಿಗೆಯಲ್ಲಿ ಬಿಚ್ಚಿ ಬೀಳತಾವ. ಮತ್ತು ಏಳು ಮಾಯಾದ ಹಳ್ಳ ಕೊಡತೀನಿ, ಒಂದಂದು ಸರತಿಗೆ ಈ ಒಂದೊಂದು ಹಳ್ಳ ಬಗೆದು ಹತ್ತಂಡೆ ಚೀರುಂಡೆ ಅಂತ ಅನಬೇಕು ಅಂತ ಕಲಸಿ ಏಳು ಮಾಯಾದ ಹಳ್ಳವನ್ನು ಕೊಟ್ಟು ಹೋದರು.

ದೇವರ ಅನುಗ್ರಹದಂತೆ ಕಟ್ಟಿಗೆ ತುಂಡುಗಳನ್ನು ಕೂಡಿಸಿ ಮಾಯಾದ ಹರಳು ಒಗೆದು ಹತ್ತಂಡೆ ಅಂದ. ಕಟ್ಟಿಗೆ ತುಂಡೆಲ್ಲಾ ಒಟ್ಟಾಗಿ ಕೂಡಿದವು. ತಲೆಯ ಮೇಲೆ ಗೋಣಿಯನ್ನು ಹಾಕಿ ಹೊತ್ತನು. ದೇವರು ಹೇಳಿದಂತೆ ಮಾಡಿ ಕಟ್ಟಿಗೆ ಹೊರೆಯನ್ನು ಅರಸನ ಮನೆಗೆ ತಂದು ಹಾಕಿದ. ಬೇರುಂಡೆ ಅಂತ ಅಂದ ಕಟ್ಟಿದ ಕಟ್ಟಿಗೆಗಳು ಬಿಚ್ಚಿದವು. ಹೀಗೆ ಬಿಚ್ಚಿದ ಕಟ್ಟಿಗೆಗಳು ಅರಸನ ಮನೆಯ ಮುಕ್ಕಾಲು ಭಾಗ ಎತ್ತರವಾಯಿತು. ಇದನ್ನು ನೋಡಿದ ಅರಸ ಬೆಚ್ಚಿ ಬೆರಗಾದನು.

ರಾಜಕುಮಾರನ ಹೆಂಡತಿ ರಾಜಕುಮಾರ ಸಲಿಗೆಯಿಂದ ಇರುವುದನ್ನು ಅಜ್ಜಿ ಮನಗೊಂಡು ಸಂಶಯ ವ್ಯಕ್ತಪಡಿಸಿದಳು. ಆದರೂ ಸಹ ದಾಸಿಯರ ಕೈಯಲ್ಲಿ ಸೀಗೆಕಾಯಿಪುಡಿ, ಎಣ್ಣೆ ಕೊಟ್ಟು ಸ್ನಾನ ಮಾಡಿಸೋಕೆ ಹೇಳಿದಳು. ಆದರೆ ರಾಜಕುಮಾರ ಇದನ್ನು ತಿರಸ್ಕರಿಸಿ ಹೊಳೆಯಲ್ಲಿ ಸ್ನಾನ ಮಾಡಿಕೊಂಡು ಬಂದ. ಇತ್ತ ಸಂಗಯ್ಯ ದೀಪ ಆರಿಸದೇ ರಾಜಕುಮಾರನ ಹೆಂಡತಿಯನ್ನು ಎತ್ತಿಗೊಂಡ ಮಂಚಕ ತಗೊಂಡಹ್ವಾದ. ಮಂಚದ ಮೇಲೆ ಮಲಗಿಸಿಕೊಂಡ. ರಾಜಕುಮಾರಿ ಸಂಗ್ಯಾನ ಕಡೆ ಬೆನ್ನು ಮಾಡಿ ಕಿಡಕಿ ಕಡೆ ಮಾರಿ ಮಾಡಿಬಿಟ್ಟಳು. ಹೀಗೆ ಮಲಗಿದಾಗ ಶಿವಪಾರ್ವತಿಯವರು ಮಂತ್ರಿಸಿಕೊಟ್ಟ ಹರಳನ್ನು ಹತ್ತಂಡೆ ಎಂದು ಒಗೆದನು. ಮಂಚದಲ್ಲಿ ಮಲಗಿದ್ದ ಅವರು ಹಾಗೆ ಅಂಟಿಕೊಂಡರು. ನಂತರದಲ್ಲಿ ಎಲ್ಲರೂ ಗಮನಿಸಿದ ಈ ಸನ್ನಿವೇಶ ನೋಡಿ ದೆವ್ವ ಭೂತ ಅಂಟಿಕೊಂಡಿರಬೇಕು ಎಂದು ಭೂತ ಓಡಿಸುವವರನ್ನು ಕರೆಯಿಸಿದರು ಆದರೆ ಸಾಧ್ಯವಾಗಲಿಲ್ಲ. ಭೂತ ಬಿಡಿಸುವವನ ಹೆಂಡತಿಗೂ ಕೆಲವೊಂದು

ಜಲಾಕ್ ತೋರಿಸಿದ. ನಂತರ ಎಲ್ಲಾ ಸಂಗತಿಗಳನ್ನು ತಿಳಿದ ಅತ್ತೆ-ಮಾವಂದಿರು ಚಾರದ ಸಂಗಯ್ಯನನ್ನು ಕೊಲ್ಲಿಸಿ ಮಗಳನ್ನು ರಾಜಕುಮಾರನ ಜೋಡಿ ಕಳುಹಿಸಿಕೊಟ್ಟರು. ಈ ಕಥೆಯಲ್ಲಿ ಗೆಳೆಯ ಗೆಳೆಯನಿಗೆ ಮೋಸ ಮಾಡುವುದು ಎದ್ದು ಕಾಣುತ್ತದೆ. ಅಲ್ಲದೆ ದೈವ ಬಲದಿಂದ ಬಂದ ಅಪಾಯಗಳನ್ನು ಬಗೆಹರಿಸಿಕೊಂಡು ದುಷ್ಟರಿಗೆ ತಕ್ಕ ಪಾಠ ಕಲಿಸುತ್ತಾನೆ.

ಮಾತಾಡುವ ಗಿಣಿಗಳು ಜಾನಪದ ಕಥೆಗಳಲ್ಲಿ ಬರುವ ಒಂದು ಸುಂದರ ರೂಪಕ. ಮನುಷ್ಯನಿರ್ಮಿತ ಸಂಸ್ಕೃತಿ ಮನುಷ್ಯನನ್ನು ದಟ್ಟ ಅಸಹಾಯಕ ಸ್ಥಿತಿಗೆ ತಳ್ಳಿದಾಗ, ಪ್ರಕೃತಿಯೇ ಅವನಿಗೆ ದಾರಿ ತೋರಿಸುತ್ತದೆ. ಒಂದು ಹೆಣ್ಣು ಪಕ್ಷಿ ಒಂದು ಗಂಡು ಪಕ್ಷಿ (ಇವು ಗಿಣಿಗಳು ಅಥವಾ ಗಂಡ ಭೇರುಂಡ- ಹೆಣ್ಣು ಭೇರುಂಡ, ಇಲ್ಲವೆ ನಾಗಾನಕ್ಕೆ-ಜೋಗಾನಕ್ಕೆ ಆಗಬಹುದು) ಮನುಷ್ಯನನ್ನು ಕುರಿತು ಮಾತಾಡಿಕೊಳ್ಳುತ್ತವೆ; ಅವನ ಬದುಕಿನಲ್ಲಿ ಹಿಂದೆ ನಡೆದದ್ದು ಹಾಗೂ ಮುಂದೆ ಸಂಭವಿಸಬಹುದಾದ್ದರ ಬಗ್ಗೆ ಸಂಭಾಷಣೆ ನಡೆಸುತ್ತವೆ. ಇದರಿಂದ ಎಚ್ಚೆತ್ತ ಮನುಷ್ಯ ತನಗೆದುರಾದ ಕೇಡು-ಕಂಟಕ, ವಿಪತ್ತುಗಳಿಂದ ಪಾರಾಗಲು ಇವು ಸಹಾಯಕ ಶಕ್ತಿಗಳಾಗುತ್ತವೆ. ಹಾಗೆಯೆ, ಬೇರ್ಪಟ್ಟ ಗಂಡ-ಹೆಂಡತಿಯರನ್ನು ಅಥವಾ ಅಣ್ಣತಮ್ಮಂದಿರನ್ನು ಒಂದುಗೂಡಿಸುವ ದರ್ಶಕಗಳೂ ಆಗುತ್ತವೆ. ಶಕುನದ ಹಕ್ಕಿ ಕುರಿತ ಜನಪದ ಮಿಥ್ ಕೂಡ ಇಂಥ ಕಲ್ಪನಾ ಸೃಷ್ಟಿಯೆ. ಈ ಹಕ್ಕಿಗಳು ಅಪ್ರಿಯವಾದ ಕಟುಸತ್ಯವನ್ನು ಉಲಿಯುತ್ತವೆ ಎಂದೇ ಬೇಂದ್ರೆಯವರು ಶುಭನುಡಿಯೆ.... ಎಂದು ಆಹ್ವಾನಿಸುತ್ತಾರೆ.[೨೩] ಈ ರೂಪಕ ಇನ್ನೂ ಆಳವಾದ ತಾತ್ವಿಕ ಅರ್ಥನಿರ್ಮಿತಿಯನ್ನು ಒಳಗೊಂಡಿದೆ. ಮನುಷ್ಯನ ಸುಪ್ತಪ್ರಜ್ಞೆಯ ಆಳದಲ್ಲಿ ವಿಸ್ಮೃತಿಗೊಳಗಾದ ಚರಿತ್ರೆ ಮತ್ತು ಭವಿಷ್ಯತ್ತುಗಳ ಪರಿವೆಯನ್ನು ಅರಿವಿಗೆ ತಂದು, ವರ್ತಮಾನವನ್ನು ಉದ್ದೀಪಿಸುವ ಪ್ರತಿಭಾ ಶಕ್ತಿಯಾಗಿ ಈ ರೂಪಕ ಸೃಷ್ಟಿಗೊಂಡಿದೆ; ಮತ್ತು ಕೇಡು/ವಿಧಿಯನ್ನು ಗೆಲ್ಲಲು ಮನುಷ್ಯ ರೂಪಿಸಿಕೊಂಡ ತಂತ್ರೋಪಾಯದ ಮಾಂತ್ರಿಕ ಶಕ್ತಿಯಾಗಿ ಪರಿಣಮಿಸಿದೆ ಎನ್ನಿಸುತ್ತದೆ. ವಾಸ್ತವದ ಗೋಚರಣೆಯಲ್ಲಿ ಕಾಣಿಸದ/ಹೊಳೆಯದ ಸತ್ಯದ ಒಳನೋಟ ಫ್ಯಾಂಟಸಿಯ ನೆಲೆಯಲ್ಲಿ ಪಕ್ಕನೆ ಮಿಂಚಿ ಬೆಳಗುತ್ತದೆ. ಮಾಂತ್ರಿಕ ವಾಸ್ತವತೆಯ ಪ್ರತಿಭಾವಿಲಾಸವೇ ಅಂಥಾದ್ದು. ಮಹಿಳೆಯರು ಸೃಷ್ಟಿಸುವ ಕಥಾಲೋಕಕ್ಕೆ ನೋಡೋದಾದರೆ ಎದೆಯಾಳದಿಂದ ಹುಟ್ಟಿ ಬಂದ ಕಥನಗಳಲ್ಲಿ ಮಹಿಳೆ ಚಾರಿತ್ರಿಕವಾಗಿ ಅನುಭವಿಸಿದ ನೋವು-ಸಂಕಟ ಯಾತನೆಗಳು ಹೇಗೆ ವಿನ್ಯಾಸಗೊಂಡಿವೆ, ಪುರುಷನಿದ್ದ ಸಂಸ್ಕೃತಿ ರೂಪಿಸಿದ ವೈರುದ್ಯಗಳನ್ನು ದ್ವಂದ್ವ ಸಂಬಂಧಗಳನ್ನು ಹೇಗೆ ಎದುರಿಸಿದ್ದಾಳೆ ಮತ್ತು ದಾಟಿದ್ದಾಳೆ? ಹಾಗೆಯೇ ಮಹಿಳೆಯದ್ದೇ ಆದ ಒಂದು ಒಳಲೋಕವನ್ನು ಹೇಗೆ ಕಟ್ಟಿಕೊಡುತ್ತವೆ? ಎಂಬ ಪ್ರಶ್ನೆಗಳು ಸ್ತ್ರೀಜನ್ಯ ಕಥನಗಳ ಅಧ್ಯಯನದಲ್ಲಿ ಎದುರು ನಿಲ್ಲುವ ಮುಖ್ಯ ಸವಾಲುಗಳು.

ಚಾಪಿ ಕಡಿಲೊ ಬಾನಿ ಒಡಿಲೊ? ಕಥೆಯಲ್ಲಿ ಹೆಂಡಂದಿರು ಹಾದರ ಸಂಬಂಧ ಮಾಡುವುದನ್ನು ಕಂಡು ಗಂಡಂದಿರು ಅನ್ಯ ಪುರುಷನನ್ನು ಸಾಯಿಸುತ್ತಾರೆ. ಹೆಂಡಂದಿರು ಕದ್ದುಮುಚ್ಚಿ ನಡೆಸುವ ಹಾದರವನ್ನು ಬಯಲು ಮಾಡುವ ಪ್ರಸಂಗಗಳು ಹಾಗೂ ಕ್ಷುಲ್ಲಕ ಕ್ರಿಯೆಗಳೇ ಗಂಡಂದಿರ ಚತುರೋಪಾಯಗಳಾಗಿ ಪರಿಣಮಿಸುವ ಸನ್ನಿವೇಶಗಳು ಹಾಸ್ಯಮಯವಾಗಿವೆ. ಹಾದರ ಹೇಗೆ ಗುಪ್ತ ಸಂಬಂಧವೋ, ಹಾಗೆಯೇ

ಅನ್ಯ ಪುರುಷರ ಕೊಲೆ ಕೂಡ ಇಲ್ಲಿ ಮುಸುಕಿನ ಅನ್ಯೋಕ್ತಿತಂತ್ರದಲ್ಲಿ ಜರುಗುತ್ತದೆ. ಕೇವಲ ಒಂದು ಸುತ್ತಲ್ಪಟ್ಟ ಮತ್ತು ಮುಚ್ಚಲ್ಪಟ್ಟ ಬಾನಿಯೊಂದನ್ನು ತುಂಡರಿಸುವುದು ಅತಿ ಕ್ಷುಲ್ಲಕ ಕ್ರಿಯೆಗಳಾಗಿ ಮೇಲ್ನೋಟಕ್ಕೆ ಕಾಣಿಸಿದರೆ, ಇಲ್ಲಿ ಅವುಗಳನ್ನು ತುಂಡರಿಸುವ ಮೂಲಕ ಅವುಗಳ ಒಳಗೆ ಅವಿತುಕೊಂಡವರನ್ನು ನಿರ್ನಾಮ ಮಾಡುವುದೇ ಇಲ್ಲಿನ ಚತುರ ತಂತ್ರವಾಗಿದೆ. ಕಥೆಯಲ್ಲಿನ ಹಾಸ್ಯ ಧಾಟಿ ಮುಸುಕು ತಂತ್ರಗಾರಿಕೆ ಯನ್ನು ಯಶಸ್ವಿಯಾಗಿ ನಿರ್ವಹಿಸಿದೆ. ಹಾಗಾಗಿ ಇಲ್ಲಿನ ಗಂಡಂದಿರು ಕೊಲೆಗಡುಕರಾಗಿ ಕಾಣದೆ, ವಿವಾಹೇತರ/ಅನೈತಿಕ ಸಂಬಂಧಗಳನ್ನು ಕೊನೆಗಾಣಿಸಿದ ಧೀರರಂತೆ ಚಿತ್ರಿಸಲ್ಪಟ್ಟಿದ್ದಾರೆ. ಅನ್ಯ ಪುರುಷರನ್ನಷ್ಟೇ ಇಲ್ಲಿ ಯಾಕೆ ನಾಶಪಡಿಸಲಾಗಿದೆ? ಎಂಬ ಪ್ರಶ್ನೆ ಉದ್ಭವಿಸಬಹುದು. ಇದಕ್ಕೆ ಉತ್ತರವೆಂದರೆ ತನಗೆ ಸೇರಿದ ಹೆಣ್ಣು ಅರ್ಥಾತ್ ಖಾಸಗೀ ಆಸ್ತಿಯನ್ನು[೭೪] ಮತ್ತೊಬ್ಬನು ಅನುಭೋಗಿಸುವುದು ಏಕ ವಿವಾಹ ಪದ್ಧತಿಯಲ್ಲಿ ನಿಷಿದ್ಧವಾದ್ದರಿಂದಲೇ ಗಂಡನಾದವನು ಅನ್ಯಪುರುಷನನ್ನು ನಾಶಪಡಿಸುತ್ತಾನೆ. ಕಥೆಯ ಕೊನೆಯಲ್ಲಿ ಹಾದರಕ್ಕಿಳಿಸಿದ ಹೆಂಡಂದಿರನ್ನು ತೊರೆದು ಅವರು ಬೇರೆ ಮದುವೆಯಾಗುತ್ತಾರೆ. ಜಾರಿಣಿಯರನ್ನು ದಾಂಪತ್ಯ ಬದುಕಿನಿಂದ ಅನರ್ಹಗೊಳಿಸುವ ಮೂಲಕ ವಿವಾಹ ಸಂಸ್ಥೆಯ ಪಾವಿತ್ರ್ಯವನ್ನು ಇಲ್ಲಿ ಮರು ಸ್ಥಾಪಿಸಲಾಗಿದೆ.

ಹೆಣ್ಣಿನ ವಿವಾಹೇತರ, ಹಾದರ ಸಂಬಂಧವನ್ನು ಪುರುಷ ಖಂಡಿಸುವುದಕ್ಕೂ ಮತ್ತು ಸ್ತ್ರೀಜನ್ಯ ಕಥನಗಳು ಖಂಡಿಸುವುದಕ್ಕೂ ಇರುವ ಸೂಕ್ಷ್ಮ ಅಂತರವನ್ನು ಇಲ್ಲಿ ಗಮನಿಸಬೇಕಾಗಿದೆ. ಹಾದರ ಎಂಬುದು ವಿವಾಹ ಸಂಸ್ಥೆಯೊಳಗಿನ ಒಂದು ಕಳ್ಳಕಿಂಡಿಯಾದ್ದರಿಂದಲೇ ಪುರುಷ ಅದನ್ನು ಭದ್ರವಾಗಿ ಮುಚ್ಚಲು ಸದಾ ಹೆಣಗುತ್ತಾನೆ. ಹೆಣ್ಣಿನ ಹಾದರ ಸಂಬಂಧವನ್ನು ಖಂಡಿಸುವ ನೆಲೆಯಲ್ಲಿ ಪುರುಷನ ಲೈಂಗಿಕ ರಾಜಕಾರಣದ ಹುನ್ನಾರ ಅಡಗಿರುವುದನ್ನು ಮರೆಯುವಂತಿಲ್ಲ. ಹೆಣ್ಣಿನ ಶೀಲವನ್ನು ಪುರುಷ ತನ್ನ ಸಹಸ್ರ ಕಣ್ಣುಗಳಿಂದ ಕಾಪಾಡುವ ಕಟಿಬದ್ಧ ಕಾವಲುಗಾರನಾಗುತ್ತಾನೆ. ಪಾತಿವ್ರತ್ಯ ಪರಿಕಲ್ಪನೆಯ ಮುಖೇನ ಹೆಣ್ಣನ್ನು ಪುರುಷ ನಿರ್ಬಂಧಿಸುವ/ನಿಗ್ರಹಿಸುವ ತಂತ್ರೋಪಾಯದ ಉಪ ಉತ್ಪನ್ನವೇ ಹಾದರದ ದಮನ. ಹಾಗಾಗಿ ಹಾದರ ಸಂಬಂಧವನ್ನು ಪುರುಷ ಅತ್ಯಂತ ಉನ್ಮತ್ತವಾಗಿ ಖಂಡಿಸಿದರೆ ಸ್ತ್ರೀಜನ್ಯ ಕಥನಗಳಲ್ಲಿ ಇದು ದಾಂಪತ್ಯದ ಕೌಟುಂಬಿಕ ಸ್ವಾಸ್ಥ್ಯದ ನೆಲೆಯಿಂದ ಮಾತ್ರವೆ ಖಂಡನೆಗೊಳಗಾಗುತ್ತದೆ. ಉದಾ. ಪುರುಷ ಹೇಳಿದ 'ಬುದ್ಧಿ ಕಲಿಸಿದ ಗಂಡ'[೭೫] ಎಂಬ ಕಥೆಯಲ್ಲಿ ಹಾದರಕ್ಕೆಳೆಸಿದ ಅನ್ಯಪುರುಷನ ಜತೆಗೆ ಹೆಂಡತಿಯನ್ನು ಸುಟ್ಟು ಹಾಕುವ ಪುರುಷಾಧಿಕಾರದ ಉನ್ಮತ್ತತೆ ಇದ್ದರೆ, ಮಹಿಳೆ ಹೇಳಿದ ಇಲ್ಲಿನ 'ಚಾಪಿ ಕಡಿಲೋ ಖಾನಿ ಒಡಿಲೋ' ಕಥೆಯಲ್ಲಿ ಅನ್ಯಪುರುಷರನ್ನಷ್ಟೇ ನಾಶಪಡಿಸಲಾಗಿದೆಯೇ ಹೊರತು ಹೆಂಡಂದಿರನ್ನು ಕೊಲ್ಲುವುದಿಲ್ಲ; ಬದಲಿಗೆ ದಾಂಪತ್ಯದ ಚೌಕಟ್ಟಿನಿಂದ ಅವರನ್ನು ಪದಚ್ಯುತಿಗೊಳಿಸಲಾಗಿದೆ.

ಇಲ್ಲಿ ಮಾಸ್ತಿಯವರ ವೆಂಕಟಿಗನ ಹೆಂಡತಿ ಕಥೆಯನ್ನು ನೆನಪಿಸಿಕೊಳ್ಳಬಹುದು. ಶ್ರೀಮಂತನೊಂದಿಗೆ ಓಡಿಹೋಗಿದ್ದ ಹೆಂಡತಿಯನ್ನು ಮತ್ತೆ ಸ್ವೀಕರಿಸುವ ವೆಂಕಟಿಗ ತುಂಬ ಉದಾತ್ತ ವ್ಯಕ್ತಿಯಾಗಿ ಕಾಣುತ್ತಾನೆ. ಹೆಣ್ಣಿನ ಶೀಲ-ನಡತೆ, ನಿಯತ್ತಿನ ಪ್ರಶ್ನೆಗಳಿಗಿಂತ ಪುರುಷನ ಔದಾರ್ಯಕ್ಕೆ ಇಲ್ಲಿ ಹೆಚ್ಚಿನ ಒತ್ತು ಕೊಡಲಾಗಿದೆ. ಲೇಖಕರು ಮಾನವೀಯ ಅಂತಃಕರಣ ಸಂಸ್ಕೃತಿಯ ಎಲ್ಲೆ ಕಟ್ಟನ್ನು ಮೀರಿ ಉದ್ದೀಪ್ತಗೊಂಡರೆ, ಜಾನಪದ

ಕಥೆಯಲ್ಲಿ ವೈವಾಹಿಕ ಚೌಕಟ್ಟಿನ ಪಾವಿತ್ರ್ಯವೇ ನಿರ್ಣಾಯಕವಾಗುತ್ತದೆ. ಮಾಸ್ತಿಯವರಲ್ಲಿ ವ್ಯಕ್ತಿಗಳ ನಡುವಣ ಆಂತರಿಕ ಭಾವಶೀಲತೆ ಮುಖ್ಯವಾದರೆ, ಜಾನಪದ ಕಥೆಯಲ್ಲಿ ನೈತಿಕಶೀಲತೆಗೆ ಪ್ರಾಶಸ್ತ್ಯ. ಮಾಸ್ತಿಯವರಲ್ಲಿ ವ್ಯಭಿಚಾರ ಕ್ಷಮಾರ್ಹವಾದರೆ, ಇಲ್ಲಿ ಇದು ಶಿಕ್ಷಾರ್ಹ. ಹಾಗಾದರೆ ಮಾಸ್ತಿಯವರ ಈ ಭಾವಶೀಲ ಔದಾರ್ಯವು ಸಮಾಜದಲ್ಲಿ ಸ್ವೀಕೃತಗೊಳ್ಳಬಹುದಾದ ಮೌಲ್ಯವೆ? ಎಂಬ ಪ್ರಶ್ನೆ ಏಳುತ್ತದೆ. ಅದು ಸ್ವೀಕೃತ ಮೌಲ್ಯವಾಗಬೇಕು ಎಂಬುದು ಲೇಖಕರ ಆಶಯ.

ಶಿವಗೊನ್ನಿ ಕಥೆ ವ್ಯಭಿಚಾರ ನಿಮಿತ್ತ ಹುಟ್ಟುವ ಹಿಂಸೆ ಮತ್ತು ಪ್ರತಿಹಿಂಸೆಗಳ ಉಗ್ರ ಸ್ವರೂಪವನ್ನು ಚಿತ್ರಿಸುತ್ತದೆ. ಜಾನಪದ ಕಥೆಗಳಲ್ಲಿ ಮಲತಾಯಿಯನ್ನು ರಾಕ್ಷಸಿಯಂತೆ ಮತ್ತು ಮಲತಂದೆಯನ್ನು ರಾಕ್ಷಸನಂತೆ ಪ್ರತಿಬಿಂಬಿಸುವುದು ಸಾಮಾನ್ಯ. ತನ್ನ ತಂದೆಯನ್ನು ಕುತಂತ್ರದಿಂದ ಸಾಯಿಸಿದ ಮಲತಂದೆ ಕಥೆಯಲ್ಲಿಯು ರಾಕ್ಷಸನಾಗಿ ಮಗನಿಗೆ ಕಾಣುತ್ತಾನೆ. ಹೆತ್ತ ಮಗನನ್ನು ಕೊಚ್ಚಿಹಾಕಿದ ಶಿವಗೊನ್ನಿ ನೀಚ ತಾಯಿಯಾಗಿದ್ದಾಳೆ. ಅಂತಹ ತಾಯಿಯನ್ನು ಮತ್ತು ಅವಳು ಇಟ್ಟುಕೊಂಡಿದ್ದ ರಾಕ್ಷಸನನ್ನು ಸಂಜೀವಿನಿಯಿಂದ ಪುನರ್‌ಜೀವ ಪಡೆದ ಮಗ ಕಡಿದು ಹಾಕುತ್ತಾನೆ. ಮತ್ತು ನಿಜವಾದ ತಂದೆಗೆ ಜೀವ ಬರಿಸಿ, ಮತ್ತೆ ಮದುವೆಯಾಗುತ್ತಾರೆ. ವಿಧ್ವಸ್ತಗೊಂಡಿದ್ದ ಪಿತೃಕುಟುಂಬ ಪುನಾರಚಿತಗೊಳ್ಳುತ್ತದೆ.

ಗ್ರೀಕ್ ನಾಟಕಕಾರ ಈಸ್ಕಿಲಸ್‌ನ (ಕ್ರಿ.ಪೂ. ೫೨೫) 'ಒರೆಸ್ಟೇಯ' ಎಂಬ ರುದ್ರನಾಟಕದ ವಸ್ತು ಶಿವಗೊನ್ನಿ ಕಥೆಯನ್ನು ಸ್ವಲ್ಪಮಟ್ಟಿಗೆ ಹೋಲುವಂಥದ್ದು. ತಂದೆ ಅಗಮೆಮ್ನಾನ್‌ನ್ನು ಕೊಂದ ವ್ಯಭಿಚಾರಿಣಿ ತಾಯಿಯನ್ನು ಹಾಗೂ ಮಲತಂದೆಯನ್ನು ಮಗ ಕೊಂದುಹಾಕುತ್ತಾನೆ. ಘೋರಪಾತಕ ಎನಿಸಿದ ಮಾತೃಹತ್ಯೆ ನಿಂದನೆಗೆ ಗುರಿಯಾದರೂ ತಾನು ಪಿತೃಋಣ ತೀರಿಸಿದ್ದಕ್ಕೆ ಒರೇಸ್ಟಸ್ ನ್ಯಾಯ ಬೇಡುತ್ತಾನೆ. ಅಥೆನ್ಸ್‌ನ ನ್ಯಾಯದೇವತೆ ಅವನ ಕೃತ್ಯವನ್ನು ಎತ್ತಿ ಹಿಡಿಯುತ್ತದೆ. ಇದು ಮಾತೃಪ್ರಧಾನ ವ್ಯವಸ್ಥೆಯ ನ್ಯಾಯಬದ್ಧತೆ ಕ್ಷೀಣಿಸುತ್ತಿದ್ದುದನ್ನು ಮತ್ತು ಪಿತೃನಿಷ್ಠ ಅಧಿಕಾರಬದ್ಧತೆ ಮೇಲುಗೈ ಪಡೆಯುತ್ತಿದ್ದುದನ್ನೂ ಸೂಚಿಸುತ್ತದೆ. ಷೇಕ್ಸ್‌ಪಿಯರ್‌ನ ಹ್ಯಾಮ್ಲೆಟ್ ಕೂಡ ತಾಯಿಯ ವ್ಯಭಿಚಾರ ಹಾಗೂ ಪಿತೃಋಣ ಕುರಿತ ದುರಂತ ನಾಟಕ ಹಾಗೆಯೇ ದೈಹಿಕ ವ್ಯಭಿಚಾರಕ್ಕೆ ಅಹಲ್ಯೆ ಕಲ್ಲಾದರೆ, ಮಾನಸಿಕ ವ್ಯಭಿಚಾರಕ್ಕೆ ಜಮದಗ್ನಿಯ ರೇಣುಕೆ ಮಗನ ಕೈಯಿಂದಲೇ ಹತಳಾಗುತ್ತಾಳೆ. ಇದರ ಅತಿರೇಕದ ಪರಾಕಾಷ್ಠೆ ಎಂದರೆ ಕೇವಲ ಲೋಕೋಪವಾದದ ಗಾಳಿಮಾತೇ ಘೋರ ಕಳಂಕವಾಗಿ ಅಗ್ನಿಪಾಲಾದ ಸೀತೆಯದು. ವ್ಯಭಿಚಾರ ಕುರಿತಂತೆ ಪುರುಷಾಧಿಕಾರದ ಹಿಂಸೆ ಕ್ರೌರ್ಯದ ವಿರಾಡ್ರೂಪವನ್ನು ಈ ಉದಾಹರಣೆಗಳು ಬಯಲು ಮಾಡುತ್ತವೆ.

ಪ್ರಸ್ತುತ ಶಿವಗೊನ್ನಿ ಕಥೆಯಲ್ಲಿ ಹೆಣ್ಣು ಎರಡು ಘೋರ ಅಪರಾಧಗಳನ್ನು ಎಸಗಿದ್ದಾಳೆ. ಒಂದು ವ್ಯಭಿಚಾರ, ಇನ್ನೊಂದು ಹೆತ್ತ ಮಗನನ್ನೇ ಕೊಂದದ್ದು. ಪರಪುರುಷನ (ರಾಕ್ಷಸ) ಮಾತು ಕೇಳಿ ಸ್ವಂತ ಮಗನನ್ನು ಕೊಂದ ಶಿವಗೊನ್ನಿ ತಾಯಿ ಕರುಳಿಲ್ಲದ ನೀಚ ಹೆಣ್ಣಾಗಿದ್ದಾಳೆ. ಅದಕ್ಕೆ ತಕ್ಕ ಶಿಕ್ಷೆಯನ್ನು ಕಥೆ ವಿಧಿಸಿದೆ. ಆದರೆ ವ್ಯಭಿಚಾರ ಕುರಿತಂತೆ ಕಥೆಯ ಒಳಸಂರಚನೆಯಲ್ಲಿ 'ಅರ್ಥಸಂದಿಗ್ಧತೆ' ಗೂಡು ಕಟ್ಟಿರುವುದರತ್ತ ವಿಶೇಷ ಗಮನ ಸೆಳೆಯಬೇಕಾಗಿದೆ. ನೀರು ತರಲೆಂದು ಹೋದ ಗಂಡ ಮರಳಿ ಬಾರದಿದ್ದಂತಹ ಸನ್ನಿವೇಶದಲ್ಲಿ ಪರಪುರುಷನ ಪ್ರವೇಶವಾಗುತ್ತದೆ. ಈ ಪರಪುರುಷ(ರಾಕ್ಷಸ) ಅವಳ

ಗಂಡನ ರೂಪದ ಬರುತ್ತಿದ್ದ ಎಂಬಲ್ಲಿಯೆ ಕಣ್ಕಟ್ಟಿನಂತಹ ಅರ್ಥ ಸಂದಿಗ್ಧತೆ ಏರ್ಪಡುತ್ತದೆ. ಶಿವಗೊನ್ನಿಗೆ ಅವನು ಅನ್ಯಪುರುಷನಾಗಿ ಕಾಣುವುದಿಲ್ಲವಾದ್ದರಿಂದ ಸ್ವಂತ ಗಂಡನೆಂದೇ ಬಗೆಯುತ್ತಾಳೆ. ಅಹಲ್ಯೆಯಂತೆ; ಹಾಗಾಗಿ ಇದನ್ನು ವ್ಯಭಿಚಾರ/ ಅಪರಾಧ ಎಂದು ಹೇಗೆ ಪರಿಗಣಿಸುವುದು? ಎಂಬ ಸಂದಿಗ್ಧತೆ ಇಲ್ಲಿ ಎದುರಾಗುತ್ತದೆ. ಈ ಅರ್ಥಸಂದಿಗ್ಧತೆಯ ಪರಿಣಾಮ ಕಥೆ ಅತ್ಯಂತಿಕವಾಗಿ ಮುಂದಿಡುವ ಮೌಲ್ಯನಿರ್ಣಯದ ನೆಲೆಯನ್ನೂ ಸಹ ಸಂದಿಗ್ಧಗೊಳಿಸಿಬಿಡುತ್ತದೆ.

ಸ್ತ್ರೀಜನ್ಯ ಕಥನಗಳು ಹಾದರವನ್ನು ಸಮರ್ಥಿಸುತ್ತವೆಯೇ? ಎಂಬ ಪ್ರಶ್ನೆ ಸಹಜವಾಗಿ ಇಲ್ಲಿ ಏಳುತ್ತದೆ. ಹಾದರ-ವ್ಯಭಿಚಾರವನ್ನು ಯಾರೂ ಸಮರ್ಥಿಸಲಾರರು. ಆದರೆ ಹೆಣ್ಣಿನ ಹಾದರ ಒಂದು ಘೋರ ಅಪರಾಧ ಎಂಬುದು ಪುರುಷನಿಂದ ನಿರೂಪಿಸಲ್ಪಟ್ಟ ನ್ಯಾಯಕಲ್ಪನೆಯಾಗಿದೆ ಎಂಬುದನ್ನು ಮರೆಯುವಂತಿಲ್ಲ. ಸ್ತ್ರೀಜನ್ಯ ಕಥನಗಳು ಹೆಣ್ಣಿನ ಹಾದರ ಕುರಿತಂತೆ ಆಳದಲ್ಲಿ ಪುರುಷ ಕೇಂದ್ರಿತ ಪರಿಕಲ್ಪನೆಗೆ ವಿಭಿನ್ನವಾದ ಸೂಕ್ಷ್ಮ ನಿಲುವು ತಳೆಯುತ್ತವೆ. ಈ ನಿಲುವು ಮೂರು ಪ್ರತ್ಯೇಕ ನೆಲೆಗಳಲ್ಲಿ ಬೇರೆ ಬೇರೆಯಾಗೇ ಪ್ರಕಟಗೊಳ್ಳುವುದನ್ನು ಕಾಣುತ್ತೇವೆ.

೧. ಗಂಡ ಬದುಕಿದ್ದಾಗ ಮಾಡುವ ಹಾದರ;

೨. ಗಂಡ ಸತ್ತಾಗ ನಡೆಸುವ ಹಾದರ ಮತ್ತು

೩. ಗಂಡನಿದ್ದರೂ ಗಂಡನ ಸುಖದಿಂದ ವಂಚಿತಗೊಂಡಾಗ ನಡೆಸುವ ಹಾದರ;

ಈ ಮೂರು ನೆಲೆಗಳ ನಡುವಿನ ಸೂಕ್ಷ್ಮಾಂತರವೇ ಸ್ತ್ರೀಜನ್ಯ ಕಥನಗಳು ವ್ಯಭಿಚಾರದ ಬಗೆಗೆ ತಳೆಯುವ ವಿಭಿನ್ನ ಒಳನೋಟವನ್ನು ಕಟ್ಟಿಕೊಡುತ್ತವೆ. ಅಂದರೆ, ಪುರುಷ ನ್ಯಾಯ ಕಲ್ಪನೆಗೆ ಹೆಣ್ಣಿನ ಹಾದರ ಎನ್ನುವುದು ಏಕರೂಪಿಯಾಗಿ ಕಂಡರೆ, ಸ್ತ್ರೀ ನ್ಯಾಯಕಲ್ಪನೆ ಇದನ್ನು ಭೇದಿಸಿ ಪೃಥಕ್ಕರಿಸಿ ನೋಡುತ್ತದೆ. ಇದನ್ನು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಲು ಪ್ರಯತ್ನಿಸಬಹುದು.

ಚಾಪಿ ಕಡಿಲೋ ಬಾನಿ ಒಡಿಲೋ? ಕಥೆ ಹೆಂಡಂದಿರ ಹಾದರ ಸಂಬಂಧವನ್ನು ನಿಷ್ಠುರವಾಗಿ ಖಂಡಿಸುತ್ತದೆ. ಗಂಡಂದಿರು ಇದ್ದಾಗಲೇ ನಡೆಸುವ ವ್ಯಭಿಚಾರ ಶಿಕ್ಷಾರ್ಹ ಮತ್ತು ದಾಂಪತ್ಯದ ನೆಲೆಯಲ್ಲಿ ಇದು ಅಕ್ಷಮ್ಯ ಎಂಬ ಸೂಚನೆ ಇಲ್ಲಿ ಸ್ಪಷ್ಟವಾಗಿದೆ. ಶಿವಗೊನ್ನಿ ಕಥೆಯಲ್ಲಿ ಪತಿವ್ರತಾ ಧರ್ಮವನ್ನು ಉಲ್ಲಂಘಿಸಿ ಆಕೆ ಪತಿದ್ರೋಹಿಯೂ, ವ್ಯಭಿಚಾರಿಣಿಯೂ ಆಗಿದ್ದಾಳೆಂದೇ ಆಕೆಯನ್ನು ಮಗ ಕಡಿದು ಹಾಕುತ್ತಾನೆ. ಆದರೆ ಕಥೆಯ ಒಳಸಂರಚನೆಯಲ್ಲಿ ವ್ಯಭಿಚಾರ ಕುರಿತಂತೆ ಅರ್ಥಸಂದಿಗ್ಧತೆಯನ್ನು ನಾಟಕೀಯವಾಗಿ ಸೃಷ್ಟಿಸಲಾಗಿದೆ. ಮತ್ತು ಈ ಮೂಲಕ ಮೌಲ್ಯನಿರ್ಣಯದ ನೆಲೆಯಲ್ಲಿ ಸೂಕ್ಷ್ಮ ಅರ್ಥಾಂತರವನ್ನು ಅಂತಸ್ಥಗೊಳಿಸಲಾಗಿದೆ. ಇದು ನಿರುದ್ದಿಶ್ಯವಾದ ವಿನಾಕಾರಣ ಸೃಷ್ಟಿ ಎನ್ನಿಸುವುದಿಲ್ಲ. ಗಂಡನನ್ನು ಕಳೆದುಕೊಂಡ ಹೆಣ್ಣು ಅರ್ಥಾತ್ ವಿಧವೆಯೊಬ್ಬಳು ಲೈಂಗಿಕ ಸುಖ ಬಯಸುವುದು ಅಪರಾಧವೇ ಎಂಬ ಗುಪ್ತ ಧ್ವನಿಯ ಪ್ರಶ್ನೆಯನ್ನು ಇದು ಮುಂದೊತ್ತುತ್ತದೆ. ಈ ಸಂದರ್ಭದಲ್ಲಿ ಸಮಾಜದ ಕೆಳಜಾತಿಗಳಲ್ಲಿ ಪ್ರಚಲಿತದಲ್ಲಿರುವ 'ಕೂಡಿಕೆ ಪದ್ಧತಿ' ಬಗ್ಗೆ ಚರ್ಚಿಸುವುದು ಇಲ್ಲಿ ಅಗತ್ಯ. ಶೂದ್ರ ಜಾತಿಗಳಲ್ಲಿ ಗಂಡ ಸತ್ತ ಹೆಣ್ಣು ಇನ್ನೊಬ್ಬ

ಗಂಡಸಿನೊಂದಿಗೆ ಅಧಿಕೃತವಾಗಿ ದಾಂಪತ್ಯ ನಡೆಸುವುದನ್ನು ಕೂಡಿಕೆ/ಕೂಡಾವಳಿ ಅಥವಾ 'ಸೀರುಡಿಕೆ ಸಂಬಂಧ' ಎನ್ನಲಾಗುತ್ತದೆ. ಆದರೆ ಮೇಲ್ಜಾತಿಗಳಲ್ಲಿ ಮಾತ್ರ ಗಂಡ ಸತ್ತ ಹೆಣ್ಣು ಜೀವನ ಪರ್ಯಂತ ವಿಧವೆಯಾಗೇ ತೀರಬೇಕಾಗುತ್ತದೆ. ಶೂದ್ರ ಜಾತಿಗಳಲ್ಲಿರುವ ಈ ಲೈಂಗಿಕ-ದಾಂಪತ್ಯಕ ಸ್ವಾತಂತ್ರ್ಯ ಮೇಲ್ಜಾತಿಗಳಲ್ಲಿ ಅದು ನಿಷಿದ್ಧ ಹಾಗೂ ಅಪರಾಧವಾಗಿ ಪರಿಣಮಿಸುತ್ತದೆ. ಗಂಡ ಬದುಕಿದ್ದಾಗ ಪತಿವ್ರತೆಯಾಗಿರಬೇಕು ಸರಿ; ಆದರೆ ಗಂಡ ಸತ್ತ ನಂತರವೂ ಹಾಗೇ ಇರಬೇಕೆಂಬುದು ಅಮಾನವೀಯ ಹಾಗೂ ಜೀವ ವಿರೋಧಿ ನ್ಯಾಯ ಕಲ್ಪನೆಯಾಗುತ್ತದೆ.

ಪುರುಷ ಪ್ರಧಾನ ಸಂಸ್ಕೃತಿಯಲ್ಲಿ, ಅದರಲ್ಲೂ ವಿಶೇಷವಾಗಿ ಮೇಲ್ಜಾತಿಗಳಲ್ಲಿ ವಿಧವೆಯ ಲೈಂಗಿಕ ಸುಖಾಪೇಕ್ಷೆ ಅಕ್ಷಮ್ಯ ಹಾಗ ಶಿಕ್ಷಾರ್ಹವಾದರೆ, ಸ್ತ್ರೀಜನ್ಯ ಕಥನಗಳಲ್ಲಿ ಅದು ಜೀವಪರ ಆಪೇಕ್ಷೆಯಾಗುತ್ತದೆ; ಅದು ನೈಸರ್ಗಿಕ ಎಂಬಂತೆ ಗಂಡನ ರೂಪದೊಂದಿಗೆ ಗಂಡನ ಸುಖವನ್ನೇ ಅನುಭವಿಸುವಂತಹ ವಿನ್ಯಾಸವಾಗಿ ಬರುತ್ತದೆ. ತಟ್ಟಿಮಲ್ಲೀ ಕಥೆಯಲ್ಲಿ ಈ ಸ್ತ್ರೀ ಸಂವೇದನೆ ಇನ್ನೂ ಒಂದು ಹೆಜ್ಜೆ ಮುಂದಿಡುತ್ತದೆ. ಶಿವಗೊನ್ನಿ ಗಂಡನನ್ನು ಕಳೆದುಕೊಂಡ ವಿಧವೆಯಾಗಿ ಅನ್ಯ ಪುರುಷನ ಸಂಗಕ್ಕೆ ಒಳಗಾದರೆ, ತಟ್ಟಿಮಲ್ಲಿಯ ಸಂಕಟ ಇನ್ನೂ ತೀವ್ರವಾದದ್ದು. ಗಂಡನಿದ್ದೂ ಗಂಡನ ಸುಖದಿಂದ ವಂಚಿತಳಾದ ಹೆಣ್ಣು ಇವಳು. ಗಂಡ ಸೂಳೆ ಸಂಗಕ್ಕೆ ಬಿದ್ದು ಹೆಂಡತಿಯನ್ನು ಸಂಪೂರ್ಣ ನಿರ್ಲಕ್ಷಿಸಿದಾಗ, 'ಹಾವು' ಈಕೆಯ ಗಂಡನ ರೂಪು ಧರಿಸಿ' ಬಂದು ಅವಳ ಮನೋಕಾಮನೆಗಳನ್ನು ಪೂರೈಸುತ್ತದೆ. ಕಥೆಯಲ್ಲಿ ಬರುವ ಹಾವು ಪರಪುರುಷನ ಪ್ರತೀಕವಲ್ಲವೆ? ಇದು ವ್ಯಭಿಚಾರವಲ್ಲವೆ? ಎಂಬ ಪ್ರಶ್ನೆ ಅನುಮಾನಗಳು ಕಥಾಭಿತ್ತಿಯಲ್ಲಿ ಸುಳಿಯದಂತೆ ಕಥನವನ್ನು ಕಟ್ಟಿರುವ ರೀತಿ ಅನನ್ಯವಾಗಿದೆ. (ಇಲ್ಲಿ ಗಿರೀಶ್ ಕಾರ್ನಾಡರ ನಾಗಮಂಡಲ ನಾಟಕ ನೆನಪಾಗುತ್ತದೆ) ಸಾಮಾನ್ಯವಾಗಿ ಜಾನಪದ ಕಥೆಗಳಲ್ಲಿ ಪರಪುರುಷನನ್ನು ವಿಧ್ವಂಸಕನೆಂದು ಬಗೆದು ನಾಶಪಡಿಸಿದರೆ, ಇದಕ್ಕೆ ತದ್ವಿರುದ್ಧವಾಗಿ ಇಲ್ಲಿ ಹಾವಿನ ಗಂಡನೇ ಆದರ್ಶ ಪತಿಯಾಗುತ್ತಾನೆ; ನಿಜವಾದ ಗಂಡ ಇಲ್ಲಿ ತಪ್ಪಿತಸ್ಥನಂತೆ ಹಾಗೂ ಅವನ ಸೂಳೆ ಮೂಗಿಗೆ ಕವಡೆ ಕಟ್ಟಿಕೊಂಡು ತಟ್ಟಿಮಲ್ಲಿಯ ಚಾಕರಿ ಮಾಡುವಂತಾಗುತ್ತಾಳೆ. ಇದು ಗಂಡಸಿನ ವಿರುದ್ಧದ ಸೇಡಿನ ಅಭಿವ್ಯಕ್ತಿ ಕ್ರಮ ಎಂದು ಇಲ್ಲಿ ಆರೋಪಿಸಬಹುದು. ಆದರೆ ಇದನ್ನು ಪುರುಷನೊಂದಿಗಿನ ಸೇಡು, ಸಂಘರ್ಷ ಎಂದು ಗ್ರಹಿಸುವ ಬದಲು ಪುರುಷನ ಸೂಳೆಗಾರಿಕೆ ವಿರುದ್ಧದ ಪ್ರತಿಭಟನಾತ್ಮಕ ವಿನ್ಯಾಸ ಎಂದೇ ಗ್ರಹಿಸಬೇಕಾಗುತ್ತದೆ. ಹಾಗೆಯೇ ಇದು ಗಂಡನ ಸುಖದಿಂದ ವಂಚಿತಳಾದ ಹೆಣ್ಣೊಬ್ಬಳ ಕೇವಲ ಹಗಲುಗನಸು, ಕಲ್ಪನಾಲಹರಿ ಹಾಗೂ ಕಟ್ಟುಕಥೆ ಎಂದು ಪ್ರಾಯ್ಡ್‌ವಾದಿಗಳು ಜರಿಯಬಹುದು. ಆದರೆ ನೊಂದ ಹೆಣ್ಣಿನ ಪರ ವಹಿಸುವ ಇಲ್ಲಿನ ವಿದ್ರೋಹಾತ್ಮಕ ಕಲ್ಪನಾಸೃಷ್ಟಿಯೇ ಸಾಂಸ್ಕೃತಿಕವಾಗಿ ಮಹತ್ವದ್ದು. ಪುರುಷನಿಷ್ಠ ಸಂಸ್ಕೃತಿ ನಿರೂಪಿಸಿದ ಹಾದರದ ಕಲ್ಪನೆ ಇಲ್ಲಿ ಬುಡಮೇಲಾಗುವುದರ ಜತೆಗೆ ಅದು ಅದೃಶ್ಯವೂ ಆಗುತ್ತದೆ. ಪ್ರಧಾನ ಸಂಸ್ಕೃತಿ ನೆಲೆಯಲ್ಲಿ ಯಾವುದು ತುಚ್ಛವೋ, ಹೀನಾಯವೋ, ಅಪರಾಧವೋ ಅದು ಇಲ್ಲಿ ಪರ್ಯಾಯ ದಾಂಪತ್ಯದ ಮಾದರಿಯಾಗಿ ವಿನ್ಯಾಸಗೊಳ್ಳುತ್ತದೆ. ಆಳದಲ್ಲಿ ಇದು ಪ್ರತಿ ಸಂಸ್ಕೃತಿ ನಿರ್ಮಾಣವೇ ಆಗಿದೆ.

ಗೃಹಿಣಿಯ ಶೀಲ–ನಡತೆ–ನಿಷ್ಠೆ ಬಗ್ಗೆ ಪುರುಷ ಸಂಸ್ಕೃತಿ ಕಟ್ಟೆಚ್ಚರ ವಹಿಸುತ್ತದೆಯೆ ವಿನಃ ಗೃಹಸ್ಥನ ಶೀಲ ಮಾತ್ರ ಪ್ರಶ್ನಾರ್ಹವಾಗಲಿಲ್ಲ. ವಿವಾಹ ಸಂಸ್ಥೆಯಲ್ಲಿನ ಈ ವೈರುಧ್ಯದ ಉತ್ಪನ್ನವೇ ಹೆಣ್ಣಿನ ಮೂರನೆಯ ಮಾದರಿ ಎನ್ನಿಸಿದ ಸೂಳೆಗಾರಿಕೆ. ಸೂಳೆಗೆ ಲೈಂಗಿಕ ಸ್ವಾತಂತ್ರ್ಯವಿದ್ದರೂ ಆಕೆ ಗೃಹಿಣಿಯಾಗಲು ಸಾಧ್ಯವಿಲ್ಲ. ಆದರೆ ಪುರುಷನ ಲೈಂಗಿಕ ರಾಜಕಾರಣದ ಪರಿಣಾಮವಾಗಿ ಗೃಹಿಣಿಯ ದಾಂಪತ್ಯ ಸುಖಕ್ಕೆ ಸೂಳೆ ಅಡ್ಡಗಾಲಾಗಿ ನಿಲ್ಲುತ್ತಾಳೆ. ಆದ್ದರಿಂದಲೆ ಈ ಪುರುಷ ನಿರ್ಮಿತ ಸೂಳೆಗಾರಿಕೆ(ಸಂಸ್ಥೆ)ಯನ್ನು ಸ್ತ್ರೀಜನ್ಯ ಕಥನಗಳು ತೀಕ್ಷ್ಣವಾಗಿ ಪ್ರತಿಭಟಿಸುತ್ತವೆ. ಇಲ್ಲಿನ ವೈದೃಶ್ಯವನ್ನು ಎರಡು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಬಹುದು. ಸುಮ್‌ಸುಮ್ಕೆ ಬಸಯ್ಯ ಎಂಬ ಜನ್ಯ ಕಥೆಯಲ್ಲಿ ಸೂಳೆಗಾರಿಕೆಯನ್ನು ವಿಜೃಂಭಿಸುವ ಕಲ್ಪನಾಲಹರಿ ಇದ್ದರೆ, ಸ್ತ್ರೀಜನ್ಯ ಕಥನ ತಟ್ಟಿಮಲ್ಲೀ ಕಥೆಯಲ್ಲಿ ಗಂಡ ಇಟ್ಟುಕೊಂಡ ಸೂಳೆಯನ್ನೇ ನಾಶಪಡಿಸುವ ಆಶಯ ಹಾವಿನ ಪ್ರತೀಕದಲ್ಲಿ ಪ್ರಕಟಗೊಳ್ಳುತ್ತದೆ. ಹಾಗೆಯೆ ಇಲಿಯೆ ಇಲಿಯೆ ಇರ್ತಾವ್ ಸೂಳೆ ಎಂಬ ಕಥೆಯಲ್ಲಿ ಈ ಆಶಯ ಬೆಕ್ಕಿನ ರೂಪದಲ್ಲಿ ಸ್ಫೋಟಗೊಳ್ಳುತ್ತದೆ. ಬುಗುರಿ ಆಡಾಕೆ ಹೋಗಿ ಬುಗುರಿ ಹೊಡ್ತ ಪಾಡಾಗಿಬಿತ್ತು. ಹೊಡ್ತ ಬೀಳತ್ಲು ಬೈಯ್ದ್ರ ಜನ "ಇಂಥ ಸೂಳೆಮಗ ಆಗತ್ತಿಗೆ ಅಪ್ಪ ಅವ್ವ ಇಲ್ಲಂಗಾಗಿರೋದು" ಅಂತ. ಹುಡುಗ ಅಜ್ಜನತಾಕೆ ಬಂದು ಅಜ್ಜನ್ನ ಕೇಳಿದ; ಅಜ್ಜ ನಮ್ಮ ಅಪ್ಪ ಅವ್ವ ಎಲ್ಲದರೆ ಹೇಳು ಅಂತ. ಅಜ್ಜ ಹಿಂಗ್ಯಾಕಂತೀಯಾ? ಯಾಕ್ಹಂಗೆ ಮಾಡ್ತೀಯೋ? ಅಂದು ಕೇಳಿದ. ನನಿಗೆ ಹೆಂಗೆಂಗೂ ಬೈಯ್ದ್ರು ಅಲ್ಲಿ ಜನ ಅಂದ. ಈ ಸಂದ್ಯಾಗೇಸಿ ಹೋಗು ಅಲ್ಲಿ ಕಾಣಕ್ಕೆ ನಿಮ್ ಅವ್ವ ಅಂದು ತೋರಿಸಿದ ಅಜ್ಜ.

ಸುರಂಗದಾಗೇಸಿ ಹೋಗತ್ಲು ಅವ್ವಗೆ ಅವಾ ಅಂತಾನೆ ನನಿಗೆ ನಿಮ್ಮವ್ವಾಂತ ಯಾರು ಹೇಳಿದ್ರು ಅಂತ ಕೇಳಿದ್ಲು, ಅವರವ್ವ. ಸುರಂಗದಾಗೇಸಿ ಹೋಗು. ಹೋಗಿ ಕಾಣಕ್ಕೇ ನಿಮ್ಮವ್ವ ಅಂತ ಹೇಳಿದ ಅಜ್ಜ ಅಂದ. "ಹ್ಞೂ ನಾ ನಿಮ್ಮ ಅವ್ವಾನೆ" ಅಂತ ಹೇಳಿದ್ಲು ಮತೆ, ಅಪ್ಪ ಎಲ್ಲೈದಾನೆ ಹೇಳು? ಅಂತ ಅವ್ವನ್ನ ಕೇಳಿದ. "ಮತೇ ನೀ ನನ್ ಮಾತ ನಡೆಸಿಕೊಡೋದಾದ್ರೆ ಹೇಳ್ತೀನಿ" ಅಂದ್ಲು, "ನನ್ನಂಥ ಮಗ ಇದ್ದೂ, ನಿನಿಗೆ ನಿನ್‌ಮಾತ್ ಬಿಡ್ತಾನಾ? ನಡೆಸಿಕೊಡ್ತನಿ" ಅಂದ ಇವನು. ಹಿಂದೆ ಸ್ಯರತ್ತು ಹಾಕ್ಕಂದಿದ್ರಲ ಅದ್ನೆಲ್ಲ ಹೇಳಿದ್ಲು. ಹೇಳತ್ಲು "ನೀನು ನಿಮ್ಮಪ್ಪಗೇ ಹುಟ್ಟಿದಿ. ದೊಂಬಿ, ಜೊತೆಗೆ ಆಡಾಕೆ ಹೋದಾಗ ರಾಜ ನನ್ ಜೊತೆ ಇದ್ದ. ನೀನು ನಿಮ್ಮಪ್ಪನ್ನ ಹೆಡಮುರಿಗೆ ಕಟ್ಟಬೇಕು"[೭೬] ಅಂದ್ಲು, ಮತ್ತೆ, ಮಾಡ್ತನಿ ಅಂದು ಊರಾಗೆ ಹೋದ.

ಮೈಮೇಲೆ ಬಟ್ಟೆ ಇದ್ದಿಲ್ಲ. ಬಟ್ಟೆ ಅಂಗಡಿಗೆ ಹೋದ. ಬೇಕಾದ್ದೆ ಬಟ್ಟೆ ಹೊಲಿಸಿದ್ದ ತಗಂದ. ಒಳ್ಳೆ ಬಟ್ಟೇನೆ ತಗಂದು ಎಷ್ಟಾತು ದುಡ್ಡು? ಅಂದ. ಎರಡುನೂರು ರೂಪಾಯಿ ಅಂದ. ಈ ಹುಡುಗನ್ನ ಹತ್ತಿರ ಹಣ ಕಳುಹಿಸಿ ಕೊಡ್ತೀನಿ ಅಂದ. ಆ ಹುಡುಗನ್ನ ಕರಗಂಡು ಬಂದ. ಬಂದು ಬಂಗಾರದ ಅಂಗಡಿ ಕಾಣ್ತು. ಬಂಗಾರದ ಅಂಗಡಿಗೆ ಬಂದ. ಬಂದು ಉಂಗುರ, ವಾಚು, ಚೈನು ಸರ ತೆಗೆದುಕೊಂಡು ದುಡ್ಡು ಎಷ್ಟಾಯಿತು? ಅಂತ ಕೇಳಿದ. ಅಂಗಡಿಯವರು ಒಂದು ನೂರು ರೂಪಾಯಿ ಅದರ ಬೆಲೆ ಅಂದರು. ಬಟ್ಟೆ ಅಂಗಡಿ ಹುಡುಗನನ್ನು ಕರೆದುಕೊಂಡು ಬಂದಿದ್ನಲ್ಲ ಈ ಹುಡುಗನ್ನ ಇಟಗಳ್ರಿ ನಿಮ್ ಹುಡುಗನ್ನ ಕಳುಹಿಸಿರಿ ಅಂದ. ಅವರು ಆತು ಹೋಗಿ ಬಾಪಾ ಅಂತ ಕಳುಹಿಸಿದರು. ಕಳಸತ್ಲು ಮುಂದೆ ಬೂಟು

ಹ್ಯಾಟು ಇರೋ ಅಂಗಡಿಗೆ ಬಂದ. ಬಂದು ಬೂಟು ಹ್ಯಾಟು ತಗಂದು ಎಷ್ಟಾತ್ರಿ ಅಂದ. ಅವರು ಐವತ್ತು ರೂಪಾಯಿ ಆಯ್ತಿ ರೀ ಅಂದ್ರು. ದುಡ್ಡು ತರ್ತೀನಿ ಅಂತಂದು ಹುಡ್ಗನ್ನ ಅಲ್ಲೇ ಇರಿಸಿ ಅಡುಗೋಲಜ್ಜಿ ಮನಿಗೆ ಹೋಗಿ ಕುಂತ.

ಆ ಮೇಲೆ ಬಟ್ಟೆ ಅಂಗಡಿ ಹುಡುಗನ್ನ ಬಂಗಾರದಂಗ್ಡೇರು ಕೇಳಿದ್ರು. ನಿಮ್ ಅಣ್ಣೋ ನಿಮ್ ಅಪ್ಪೋ ದುಡ್ ತಗಂದು ಬರ್ಲಿಲ್ಲಲ್ಲ? ಅಂತ. ಆ ಹುಡುಗ ಹೇಳಿದ. "ನಮ್ಮ ಅಪ್ಪ ಅಲ್ಲ ಅಣ್ಣ ಅಲ್ಲ. ದುಡ್ ಕೊಡ್ತೀನಿ ಅಂತ ನಮ್ಮ ಬಟ್ಟೆ ಅಂಗಡಿಯಿಂದ ಕರಕಂದು ಬಂದು ಕುದ್ರಿಸಿ ಹೋಗಿದಾನೆ" ಅಂದ. ಬೂಟಿನ ಅಂಗಡಿಯವರು ಬಂಗಾರದ ಅಂಗಡಿ ಹುಡುಗನ್ನ ಕೇಳಿದ್ರು. ಏನ್ ತಮ್ಮ ಏನಾಗಬೇಕು ಅವನು? ಬರ್ಲಿಲ್ಲ ಅಂತ. ಈ ಹುಡುಗ ನಾನೂವ, ಬಂಗಾರದ ದುಡ್ಡು ಕೊಡಬೇಕಾಗಿತ್ತು. ಕೊಡ್ತೀನಿ ಅಂತ ಕರಕಂದ್ ಬಂದು ಇಲ್ಲಿ ಬಿಟ್ಟು ಹೋಗಿದಾನೆ ಅಂದ. ಅವಾಗ ಅವರು ನಮ್ ಗಂಟು ಹೋತು ಅಂತ ಕಳ್ಳನೇ ಅವನು. ಬಾರೀ ಕಳ್ಳಾಂದ್ರೆ ಕಳ್ಳ. ಕಳ್ಳನ್ನ ಹಿಡಿಬೇಕು, ಊರ ರಾಜನಿಗೆ ಹೇಳಬೇಕು ಅಂತ ಎಲ್ರು ಮಾತಾಡಿಕಂಡ್ರು. ಮಾತಾಡಿಕಂಡು ರಾಜನ ಕುಟಾಗೆ ಹೇಳಿದ್ರು ರಾಜ ಅವನ್ನ ಹಿಡಕೊಟ್ರೆ ಅರ್ಧರಾಜ್ಯ ಕೊಡ್ತೀನಿ ಅಂತ ಹಲಗೆ ಸಾರಿಸಿದ.

ಆ ಊರಿನ ಅಗಸ ನಾನು ಹಿಡಕೊಂಡು ಬಂದು ಕೊಡ್ತೀನಿ ಅಂತ ಒಪ್ಪಿಗೆ ಪಡೆದ. ಅಡಗೋಲಜ್ಜಿ ಮನೆಯಾಗಿದ್ನಲ್ಲ ಅವನು "ಏನಜ್ಜಿ ಹಲಗೆ ಸಾರ್ತಾರೆ ಅಂತ ಕೇಳಿದ. "ಯ್ಯಾ ಯಾರೋ ಏನೋ ಬಂಗಾರದ ಅಂಗಡಿಯಲ್ಲಿ ಬಟ್ಟೆ ಅಂಗಡಿನಲ್ಲಿ ಬೂಟಿನ ಅಂಗಡಿನಲ್ಲಿ ದುಡ್ಡು ಕೊಡ್ತೀನಿ ಅಂತ ಬಾರಿ ಕದ್ದುಗಂಡು ಹೋಗಿದಾನಂತೆ. ಅವನ್ನ ಹಿಡಿಕೊಡಾಕೆ ನಮ್ಮೂರ ಅಗಸ ಒಪ್ಪಿಗಂಡಾನಂತೆ. ಈ ಊರ ರಾಜ ಹಿಡಕೊಟ್ಟರಿಗೆ ಅರ್ಧ ರಾಜ್ಯ ಕೊಡ್ತೀನಿ ಅಂತ ಹಲಗೆ ಸಾರಿಸ್ತಾರೆ ತಮ್ಮಾ" ಅಂತ ಅಜ್ಜಿ ಎಲ್ಲಾ ಹೇಳಿದ್ಲು. ಅವಗ ಇವನೂ ಯೋಚನೆ ಮಾಡಿದ. ಅಗಸಗೆ ಒಬ್ಬಳೆ ಮಗಳು ಅದಾಳೆ. ಮದುವೆ ಮಾಡಿದಾನೆ. ಅಳಿಯ ಯಾಕೋ ಗುದ್ದಾಡಿಕೊಂಡು ಮಗಳನ್ನು ಬಿಟ್ಟು ಹೋಗಿದಾನೆ. ಈಗ ಆರು ತಿಂಗಳಾಯಿತು. ಹೆಂಡತಿ ಮನೆಗೆ ಬರುತ್ತಿಲ್ಲ. ಇವನೇ ಕಾಳು ನೀರು ಕೊಡ್ತಾನೆ ಅಂತ ಅಜ್ಜಿ ಅಗಸನ ಇಚಾರನಾನೂ ಹೇಳಿದ್ಲು. "ಯಾರಕಿ ಹಿಡಕೊಡ್ಲಿ ಬಿಡಜ್ಜಿ ಸುಮ್ನೆ ಮಕ್ಕೋ" ಅಂದ ಮುದುಕಿ ಸುಮ್ಮನೆ ಮಲಗಿಕೊಂಡಳು.

ಇವನು ಮುದುಕಿ ಮಲಗಿದ ಕೂಡಲೇ ಅಗಸನ ಮನೆಗೆ ಹೋದ. ಅವನ ಅಳಿಯಾನಂಗೆ ಉಡುಪು ಧರಿಸಿಕೊಂಡು ಹೋಗಿ "ಅತೇ ಚಂಬ್ ತುಂಬಾ" ಅಂದ ಚಂಬು ಕೊಟ್ರು. ತೊಳಕಂದ್ ಹೋಗಿ ಕುಂತಗಂದ "ಉಣ್‌ಬಾ" ಅಂತ ಕರದ್ರು, "ನಾ ಒಲ್ಲೆ, ಈಗ ಊಟ ಮಾಡಿಕಂಡು ಬಂದಿನಿ ಅಂದ. ಅದರ ಮಾವ ಬಂದ್‌ಗಿಂದು ಪೇಟ ಕಟ್ಟಿಕೊಂಡು ಗಸ್ತಿ ಮಾಡ್ತೀನಿ ಅಂತ ಊರ ಮುಂದಕ್ಕೆ ಹೊಂಟ. ಅವಗ ಅವನು ಎಲ್ಲಿಗ್ಹೋಕಿ ಮಾವಾ? ಅಂತ ಕೇಳಿದ. "ಯ್ಯಾ ಹಿಂಗೆ ಬಟ್ಟೆ ಅಂಗಡಿ ಬಂಗಾರದ ಅಂಗಡಿ, ಬೂಟಿನ ಅಂಗಡಿಗಂತೆ ಅವರ ಸಾಮಾನು ತೆಗೆದುಕೊಂಡು ಹಣ ಕೊಡದೇ ಹೋಗಿದಾನಂತೆ, ಒಬ್ಬ ಕಳ್ಳ ಅವನ್ನ ಹಿಡಿಯೋಕೆ ಹೋಗುತ್ತೀನಿ ಅಂದ ಮಾವ. "ಹಂಗಾರೆ ನಾನೂ ಬರ್ತಿನಿ ನಡಿಮಾವ"

ಅಂದ. ನೀನು ಈಗ ಬಂದಿ ತಮ್ಮ. ಬ್ಯಾಡ ಇಲ್ಲೆ ಇರು ಅಂತ ಮಾವ ಅನ್ನತ್ಲು ಅದ್ಹೆಂಗ್ ಕಾಯ್ತಿಯೋ ನಾ ನೋಡಿ ಬರ್ತಿನಿ ಅಂತ ಅಂದ. ಇಬ್ರೂ ಹೋದ್ರು.

ಆ ಮೂರು ಅಗಸೆ ಬಾಗಲ ತಿರಗಣಿ. ಕಳ್ಳ ಬಂದ್ರೆ ತಿರಗಣ್ಣಾಗೆ ಕಳ್ಳನ ಚಂಡು ಹೆಟ್ಟ ಬೀಗ ಹಾಕ್ಹಂಗೆ ಇತ್ತು. ಕಳ್ಳನ್ನ ಹೆಂಗೆ ಹಿಡಿತೀರಿ, ಮಾವ? ಅಂದ. ಇವನು ಇದೆ ಇಲ್ಲಿ ಬೀಗ ಹಾಕೋದು ತೆಗೆಯೋದು ಐತಿನೋಡು, ಬೀಗ ಹಾಕಿದ್ರೆ ಬೆಳತಂಕ ಕಳ್ಳ ಇಲ್ಲಿ ಇರಬೇಕು ಅಂದ ಮಾವ. ಇವನು "ಮಾವ, ಎಲಿ ನಿತ್ಗೋನೋಡಾನ, ನನಿಗೆ ಹಾಕಾಕೆ ಬರ್ತತೇನೋ" ಅಂದ. ಮಾವ ಚಂಡು ಹೆಟ್ಟಿಗಂದು ನಿಂತಗಂಡ. ಇವನು ಹಂಗೆ ಇಟ್ಟು ನೋಡ್ತೀನಿ ಅಂದೋನು ಬೀಗ ಕುಂದ್ರಿಸೇಬಿಟ್ಟ. ಮಾವ "ಒಯ್ ತಮ! ಬೀಗ ಕುಂದ್ರಿಸೇ ಬಿಟ್ಟಾ! ಬೀಗ ಮನಿಯಾಗೈತೆ. ನಿಮ್ಮ ಅತ್ತೆ ಕೂಡೆ ಇಸಗಂಬೋಗು" ಅಂದು ಕಳುಹಿಸಿದ. ಅವಗ ಅವನು ಮನಿಗೆ ಬಂದು ಅತೇ ಕಳ್ರು ಬಾಳಜನ ಬಂದು ಕುಂತುಬಿಟ್ಟಿದ್ದಾರೆ ಅಲ್ಲಿ. ಊರು ಉಳಿಯೋದಿಲ್ಲ, ಬಗ್ಗಂಗಿಲ್ಲ. ಅವರ್ನೇನು ಚಿನ್ನದ ಸರ, ಬಳೆ ಅದಾವೆ ನೋಡು ಅವನ್ನೆಲ್ಲ ಗಂಟುಕಟ್ಟಿ ಕೊಡ್ಬೇಕಂತೆ ಅಂದ. ಅವರತ್ತೆ "ನಮ್ಮನಿಯಾಗೇನು ತೀರು ಇಲ್ಲ.... ಸ್ವಲ್ಪ ಐತಿ, ಏನೂ ಬ್ಯಾಡ ಹೋಗು. ನಾ ಬೆಳತಂಕ ಇದ್ಕಂಡು ಕಾಯ್ತಿನಿ ಅಂದ್ಲು. ಅವನು ಮತ್ತೆ "ಮಾವ ಗಾಡ ಹೇಳಿದಾನೆ ತಕ್ಕೊಡು ಅಂದ. ಅಗಸೆ ಬಾಕ್ಲು ಅವರ ಮನಿಗೆ ಹತ್ರಾನೆ ಇಸ್ತು ನೋಡು, ಅವಗ ಅತ್ತೆ ಕೊಡುವಲ್ಲು" ಅಂತ ಜೋರಾಗಿ ಕೂಗಿಕಂಡ. ಮಾವ ಕೊಡೇ ಅಂದ. ಅನ್ನತ್ಲು ಮನೆಯಾಗಿರೋ ಒಳ್ಳೊಳ್ಳೆ ಸೀರೆ, ಒಡವೆ ವಷ್ಟು ಗಂಟು ಕಟ್ಟಿ ಅವನ ಕೈಗೆ ಕೊಟ್ಲು. ಇವನು ತಗಂಡ್ ಹೋಗಿ ಅಡುಗೋಲಜ್ಜಿ ಮನೆಯಾಗೆ ಕುಂತ.

ಬೆಳಿಗ್ಗೆ ಎದ್ದು ಜನ ನೋಡಾಕೆ ಹೋದ್ರು, ಇದೇನ್ ಹೀಗೆ ಅಗಸುನ್ನೆ ಕೂಡಿ ಹೋಗಿದಾರಲ? ಅಂದ್ರು. ಅವಗ ಅಗಸ ಹೇಳಿದ. "ಅಯ್ಯಾ ನಮ್ಮಪ್ಪಾ! ಅವನು ಮಿಕ್ಕಿದ ಕಳ್ಳ! ನನ್‌ಕೈಲಿ ಹಿಡಿಯಾದಾಗಲ್ಲ" ಅಂತ. ಹಂಗೆ ಹೇಳತ್ಲು ಊರೆಲ್ಲ ನಾನು ಒಲ್ಲೆ ನೀನೂ ಒಲ್ಲೆ ಅಂದ್ರು. ರಾಜ ಮತ್ತೆ ಊರಾಗೆ ಡಂಗೂರ ಹೊಡೆಸಿದ. "ಕಳ್ಳನ್ನ ಹಿಡಕೊಟ್ಟೋರಿಗೆ ಅರ್ಧರಾಜ್ಯ ಕೊಡ್ತೀನಿ" ಅಂತ. ಅವಾಗ ಆ ಊರು ಪರದಾನಿ" ಕಳ್ಳನ್ನ ನಾನು ಹಿಡುದುಕೊಡ್ತೀನಿ ಅಂತ ಒಪ್ಪಿಗಂಡ. ಅಡುಗೋಲಜ್ಜಿ ಮನೆಯಾಗೆ ಇದ್ನಲ ಇವನು, ಇಲ್ಲಿ ಅಜ್ಜಿ ಕೇಳಿದ. ಏನಜ್ಜಿ, ಇವತ್ತೂ ಹಿಂಗೆ ಮಾಡ್ತಾರಲ? ಅಂತ ಏನೋ ಬಿಡಪಾ. ಆ ಕಳ್ಳ ಅಗಸನ್ನ ಕೂಡಿ ಹೋಗಿದಾನಂತೆ. ಇವತ್ತು ಕಳ್ಳನ ಹಿಡಕೊಡಕೆ ಪರದಾನೀನೆ ಒಪ್ಪಿಗಂದ್ನಂತೆ ಅಂದ್ಲು ಅಜ್ಜಿ. ಯಾರ್ಯಾರೆ ಹಿಡಕೊಡ್ಲಿ, ಮಕ್ಕಳಜ್ಜಿ ಅಂದ. ಮಕ್ಕಂದ್ಲು. ಊರ ಅಗಸನ ಮನಿಗೆ ಹೋದ. ಹೋಗಿ ಅವರ ಒತ್ಲಾಗೆ ಒಂದು ಬಾನಿ ಇತ್ತಂತೆ. ಬಾನಿ ತಗಂದ. ಮತ್ತೆ ಹಿತ್ಲಾಗೊಂದ್ ಸೀರೆ ಇಟ್ಟಿದ್ನ ತಗಂದು ಹೊಂಟ. ಊರ ಹೊರಗೆ ಒಂದು ಕೆರೆ ಇತ್ತಂತೆ. ಕೆರಿಗೆ ಹೋದ. ಆ ಬಾನೀನ ಅಲ್ಲಿ ತಳಾಗೆ ಇಟ್ಟು ಒಂದ್ ಸೀರಿತ್ತಲ್ಲ, ಅದನ್ನ ತಗಂದು ಪಟಪಟಾ ಅಂತ ಸೆಳೆಯಾಕೆ ಹಚ್ಚಿದ. ಪರದಾನಿ ಹೋಕುದ್ನಲ್ಲ, ಕಳ್ಳನ ಒಡಿತಿನ ಅಂತ ಸೆಳೆಯದು ಇವನಿಗೆ ಕೇಳ್ತು. ಅಲ್ಲಿ ಯಾವೋನೋ ಪಟಾ ಪಟಾ ಮಾಡ್ತಾನೆ, ಅವನೆ ಕಳ್ಳಿರಬೇಕು ಅಂತ ಅವನ್ಯಾಕೆ ಹೋದ. "ಏನೋ ಹಿಂಗೆ ಸೆಳೀತಿ? ಅಂತ ಹೋಗಿ ಕೇಳಿದ. ಇವನು"

ಯ್ಯಾ ಇಲ್ಲಿ ನೀರಾಗೆ ಕಳ್ಳಿದ್ದ. ಸೀರೆ ಒಗಿಯೋ ನಾ ಬರ್ತನಿ ಅಂತ ಅಂದ. ಏ ಮಾತೆ, ಎಲ್ಲದಾನೆ ಕರಕಂದು ಬಾರೋ ಅಂದ, ಮತ್ತೆ ಪರದಾನಿ. ಅವನು ನೀನು ಇದ್ರೆ ಬರಲ್ಲ, ಮರಿಗಿದ್ರೆ ಬರ್ತಾನೆ ನೋಡು" ಅಂದ ಅವನು. ಅವಗ "ಆಗಲಿ, ನಾ ಇಲ್ಲೆಲ್ಲರ ಮರಿಗೆ ಹೊಕ್ಕಂತನಿ" ಅಂದ ಪರದಾನಿ ಅವನು ಹಂಗ್ ಬ್ಯಾಡಾ ಬಾನಿ ಐತೆ ಬಾ ಇಲ್ಲೆ ಮುಚ್ಚುತಿನಿ. ಈಗ ತಗಿಯತ್ಲು ಬರಂತೆ" ಅಂದ. ಅವನು ಬಾನಿ ಆಡೇಲಿ ಕುಂತಗಂಡ. ಇವನು ಬಾನಿ ಮುಚ್ಚಿ ಮ್ಯಾಲೊಂದ್ ದೊಡ್ಡದೊಂದು ಕಲ್ಲಿಟ್ಟ. ಸೀರೆ ಒಯ್ದು ಅಗಸನ ಮನಿಗೆ ಹಾಕಿ ಅಡಗೋಲಜ್ಜಿ ಮನಿಗೆ ಬಂದು ಕುಂತ. ಅವನು ಬೆಳತಂಕ ಬಾನ್ಯಾಗಾದ.

ಕೊನೆಗೆ ರಾಜನನ್ನು ಬಿಡಲಿಲ್ಲ; ಚಾಪೆಯಲ್ಲಿ ಸುತ್ತಿ ಕಳ್ಳ ಕಳ್ಳ ಸಿಕ್ಕ ಎಂದು ಕೂಗಿ ಕರೆದು ಅವನನ್ನು ಹಿಡಿಸಿದ. ರಾಜನ ಮನೆ ಹತ್ತಿರ ತೆಗೆದುಕೊಂಡು ಹೋಗಿ ಬಿಚ್ಚುತ್ತಾರೆ. ರಾಜನೇ ಆಗಿರುತ್ತಾನೆ. ಆಗ ಅವನನ್ನೇ ಇವನೇ ಕಳ್ಳ ಎಂದಾಗ ಔದು ಎನ್ನುತ್ತಾನೆ. ಯಾವ ಊರು ಎಂದಾಗ ಇದೇ ಊರುನಂದು ಅನ್ನುತ್ತಾನೆ ಕಳ್ಳ. ಯಾರ ಮಗ ಅಂದಾಗ ನಿನ್ನ ಮಗ ಅನ್ನುತ್ತಾನೆ. ಹೆಂಡತಿಯರನ್ನೆ ಕರೆಸು ನಾ ಹೇಳುತ್ತೀನಿ ಅಂತ ಅಂದ. ಎಲ್ಲರೂ ಬಂದಾಗ ತಾಯಿಯನ್ನು ತೋರಿಸಿ ಇವಳೇ ನನ್ನ ತಾಯಿ ನೀವೇ ನನ್ನ ತಂದೆ ಎಂದ. ಅರಗಿನ ಮನೆಯಲ್ಲಿ ಇಟ್ಟಿದ್ದ ಇವಳನ್ನು ಅರಮನೆಗೆ ಕರೆತಂದು ಹೀಗೆ ಜಾನಪದ ಕಥೆಗಳಲ್ಲಿ ಗಂಡು ಹೆಣ್ಣಿನ ಸ್ವರೂಪವನ್ನು ಗುರುತಿಸಬಹುದು.

**ರಮ್ಯ ಕಥೆಗಳಲ್ಲಿ ಹೆಣ್ಣು–ಗಂಡಿನ ಸ್ವರೂಪ**

ಕಾಶಿಪುರ ಪಟ್ಟಣದಲ್ಲಿ ಕಾಶಿಪುರ ರಾಜ ಇದ್ದ. ಇವನಿಗೆ ಮಕ್ಕಳಾಗಿರಲಿಲ್ಲ. ಹಾಗಾಗಿ ಎಲ್ಲಾ ದೇವರ ಮೊರೆಹೋದರೂ ಬಂಜೆ ಎನ್ನುವ ಸೊಲ್ಲು ತಪ್ಪಲಿಲ್ಲ. ಆ ಕಾರಣಕ್ಕೆ ಊರ ಹೊರಗೆ ಸುಂದರವಾದ ತೋಟ ನಿರ್ಮಾಣ ಮಾಡಿ ಹಣ್ಣು–ಹೂವು ಹಂಪಲು ತಿನ್ನುವವರಿಗೆ ಅನುವು ಮಾಡಿಕೊಟ್ಟ. ತಿಂದವರು ಏನು ಮಾತಾಡಿಕೋತಾರೆ ಎಂದು ತಿಳಿಯಲು ಎರಡು ಆಳು ಬಿಟ್ಟಿದ್ದ. ಒಮ್ಮೆ ಶಿವ–ಪಾರ್ವತಿ ವೇಷಧಾರಿಯಾಗಿ ತೋಟಕ್ಕೆ ಬಂದರು. ಆದರೆ ತೋಟದಲ್ಲಿನ ಹಣ್ಣು, ಹೂವು ತಿನ್ನಲಿಲ್ಲ, ಮುಡಿಯಲಿಲ್ಲ. ಅದರ ಬದಲಾಗಿ ಈ ತೋಟದ ಹಣ್ಣು ತಿಂದರೆ ಹೂ ಮುಡಿದರೆ ಬಂಜೆಯಾಗುತ್ತಾರೆ ಎಂದು ಅಂದರು. ಈ ವಿಚಾರ ಮಹರಾಜನಿಗೆ ತಿಳಿಯಿತು. ಏನು ಮಾಡಿದರೂ 'ಬಂಜೆ' ಎಂಬ ಸೊಲ್ಲು ತೀರಲಿಲ್ಲ. ಆ ಕಾರಣಕ್ಕೆ ಪುತ್ರ ವಶವನ್ನು ಪಡೆಯಲೇಬೇಕೆಂದು ತಯಾರಿಮಾಡಿಕೊಂಡು ಕಾಡಿಗೆ ಹೊರಟು ಹೋದ. ಮೂರು ತಿಂಗಳಾದರೂ ದೇವರ ಗುಡಿಗಳು ಸಿಗಲಿಲ್ಲ.

ಕೊನೆಯಲ್ಲಿ ಬನ್ನಿ ಮರದ ಕೆಳಗೆ ಕೂಸು ಬನ್ನಿ ಮಹಾಂಕಾಳಿಗೆ ಪೂಜೆ ನೈವೇದ್ಯ ಮಾಡಿ ತಮ್ಮ ಊರಿಗೆ ಹೊರಡುವುದು ಎಂದು ತೀರ್ಮಾನಿಸಿ ಸ್ನಾನಕ್ಕೆ ಹೊರಟ. ನಂತರ ಪೂಜೆಗೈದು ಭಕ್ತಿಯಿಂದ ಕಣ್ಣುಮುಚ್ಚಿ ದೇವಿಯನ್ನು ಪ್ರಾರ್ಥಿಸಿದ; ದೇವಿ ಪ್ರತ್ಯಕ್ಷಳಾಗಿ ಏನು ಬೇಕು ಕೇಳಿಕೋ ಎಂದಾಗ ಬೆಳಿಗ್ಗೆ ಹುಟ್ಟು ಸಾಯಂಕಾಲ ಸಾಯಬೇಕಾದರೆ 'ಬಂಜೆ' ಎಂಬ ಸೊಲ್ಲು ತೊಲಗಲಿ ಎಂದು ಕೇಳಿದ. ತಾಯಿ ಬೇಡಪ್ಪ ಪುತ್ರಸಂತಾನ ಅಂದರೂ ಬಿಡಲಿಲ್ಲ. ವರ ಪಡೆದು ಮನೆಗೆ ಹೊರಟು ಹೋದ. ಇತ್ತ ತನ್ನ

ಹೆಂಡತಿ ಬಂಗಾರದ ಚರಿಗೆಯಲ್ಲಿ ನೀರು ಆರತಿಯೊಂದಿಗೆ ಬರಮಾಡಿಕೊಳ್ಳಲು ಆತುರ-ಕಾತುರದಿಂದ ಕಾಯುತ್ತಾ ಇದ್ದಳು. ರಾಜ ಬಂದ ನಂತರ ಬರಮಾಡಿಕೊಂಡು ದೇವಿ ನೀಡಿದ ಬಾಳೆ ಹಣ್ಣನ್ನು ಗಂಡ-ಹೆಂಡತಿ ಸೇವಿಸಿದರು. ಕಾಲಾಂತರದಲ್ಲಿ ಗರ್ಭವತಿಯಾಗಿ ನಂತರ ಗಂಡು ಮಗುವಿಗೆ ಜನ್ಮವಿತ್ತಳು. ಇದನ್ನು ನೋಡಲು ಪಕ್ಕದ ರಾಜ್ಯದಿಂದಲೂ ಜನ ನೆರೆದಿದ್ದರು. ಮೂರು ತಿಂಗಳು, ಐದು ಹೀಗೆ ಒಂದು ವರ್ಷವಾಯಿತು. ಮಗನ ಜಾತಕ ತೆಗೆಸಲು ಹೋದಾಗ ಜ್ಯೋತಿಷ್ಯನು ಹೀಗೆ ಹೇಳಿದ. ಈ ಮಗುವಿನ ಜನನದಿಂದ ಮೂರು ತಿಂಗಳಲ್ಲಿ ಎರಡು ಕಣ್ಣು ಕಳೆದುಕೊಳ್ಳುವಳು, ನಂತರ ತಂದೆ ಕಾಲು ಕಳೆದುಕೊಳ್ಳುವನು. ಅಲ್ಲದೇ ಮೂವತ್ಮೂರು ಹಳ್ಳಿಗಳು ಸರ್ವನಾಶ ಆಗುವವು ಎಂದು ಹೇಳಿದನು. ಇದನ್ನು ತಿಳಿದ ಅರಸ ರಾಜ್ಯದ ಜನ ಹಾಳಾಗುತ್ತಾರೆ ಅಂದರೆ ಬೇಡವೇ ಬೇಡ ಮಗನನ್ನೇ ಕೊಲ್ಲಿಸಿದರಾಯಿತು ಎಂದು ಹೇಳಿದ. ಆದರೆ ಮಾನವೀಯತೆ ತೋರ್ಪಡಿಸಿದ ಜ್ಯೋತಿಷಿ. ಅವನನ್ನು ಕೊಲ್ಲುವುದು ಬೇಡ ತೊಟ್ಟಿಲಲ್ಲಿ ಮಲಗಿಸಿ ಸಮುದ್ರಕ್ಕೆ ಬಿಟ್ಟುಬಿಡಿ ಎಂದಾಗ ರಾಜ ಅದರಂತೆ ಮಾಡಿದ.

ರಾಜ ಮತ್ತು ರಾಣಿಗೆ ಮಕ್ಕಳಾಗದೇ ಇರುವುದು ಲೇಸಿತ್ತು. ಆದರೆ ಮಗು ಆಗಿ ಇಂತಹ ಅನಾಹುತ ಆಗುತ್ತದೆ ಎಂದು ಭಾವಿಸಿರಲಿಲ್ಲ. ಕಾರಣ ತಂದೆ ತಾಯಿ ಕಾಲು, ಕಣ್ಣು ಕಳೆದುಕೊಳ್ಳುವುದರ ಜೊತೆಗೆ ಮೂವತ್ಮೂರು ಹಳ್ಳಿಗಳು ತನ್ನ ರಾಜ್ಯದಲ್ಲಿ ನಾಶ ಹೊಂದುವುದು ಸರಿಯಲ್ಲ. ಒಬ್ಬ ರಾಜ್ಯಪತಿಯಾಗಿ ತನ್ನ ಸ್ವಾರ್ಥವನ್ನು ನೋಡಿಕೊಳ್ಳದೇ ಜನಪರ ಒಳಿತಿಗಾಗಿ ತನ್ನ ಕರುಳ ಬಳ್ಳಿಯನ್ನು ಕಿತ್ತೆಸೆಯುವುದಕ್ಕೆ ಮುಂದಾಗಿರುವುದು ವಿಸ್ಮಯವೇ ಸರಿ.

ಸಮುದ್ರಕ್ಕೆ ಬಿಟ್ಟ ಮಗು ಒಂದೂವರೆ ದಿನ ಆದ ನಂತರ ನಡು ಸಮುದ್ರದ ಗಡ್ಡೆಯಲ್ಲಿ ನಿಂತಿತು. ಇಲ್ಲಿಗೆ ದೇವಕಿಯರು ಸ್ನಾನಕ್ಕೆಂದು ಬಂದಾಗ ಮಗುವನ್ನು ಕಂಡು ಎಂತಹ ಪಾಪಿಗಳು ಇಂತಹ ಮಗುವನ್ನು ಬಿಟ್ಟು ಹೋಗಿರುವರು ಎಂದು ತಿಳಿದು ಲಾಲನೆ ಪಾಲನೆ ಪೋಷಣೆಯನ್ನು ಶಿವನ ಅನುಗ್ರಹದಿಂದ ಮಾಡಲಾರಂಭಿಸಿದರು. ಆಟಿಕೆಗಾಗಿ ಶಿವನ ಬಿಲ್ಲನ್ನು ತಂದಾಗ ಆ ಬಿಲ್ಲಿನಿಂದ ಜೀವರಾಶಿಗಳನ್ನು ಕೊಲೆಗೈದದ್ದರಿಂದ ಮನೆಯಿಂದ ಹೊರಗುಳಿಯಬೇಕಾಯಿತು ಆ ಮಗು. ಮುಂದೆ ದಿಕ್ಕು ತೋಚದೇ ಇರುವಾಗ ಸಮುದ್ರದಲ್ಲಿ ಸ್ವರೂಪ ಹೊಂದಿದ ಹೆಣದ ಚರ್ಮವನ್ನು ಹೊದ್ದ ಬಿಲ್ಲಿನ ಸಹಾಯದಿಂದ ದಡ ಸೇರಿದ.

ಹೀಗೆ ದಡ ಸೇರಿದ ಆ ಮಗು ಚರ್ಮ ಹೊದ್ದಿದ್ದರಿಂದ ನೊಣಗಳು ಮುತ್ತಿದ್ದರಿಂದ ನೊಣ ಮುತ್ತಗ ಎಂದು ಹೆಸರು ಪಡೆದು ಊಟಕ್ಕಾಗಿ ತೋಟದ ಕೆಲಸ ಮಾಡಲಾರಂಭಿಸಿದ. ಇದೇ ನಾಡಿನಲ್ಲಿ ನಾಗರಪಂಚಮಿ ಹಬ್ಬ ಸಂಭ್ರಮದಿಂದ ಆಚರಿಸುತ್ತಿದ್ದರು. ಈ ನಾಡಿನ ರಾಜನಿಗೆ ಐದು ಜನ ಹೆಣ್ಣು ಮಕ್ಕಳು ಇದ್ದರು. ಐದು ಗಂಡುಮಕ್ಕಳಿರುವ ಮನೆಗೆ ಕೊಡಬೇಕೆಂದು ತೀರ್ಮಾನಿಸಿ ಅವರಿಗೆ ಐದು ಮನೆ ಕಟ್ಟಿಸಿ ಇಟ್ಟಿದ್ದ. ಹಬ್ಬಕ್ಕೆ ೫ ಕುಂಪಕಿ ಹೂ ಕೊಡಬೇಕಿತ್ತು. ಇತ್ತ ನೊಣಮುತ್ತುಗ ಹುತ್ತದ ಮಣ್ಣು ತಂದು ಸಣ್ಣ ಒಡಿದು ಜರಡಿ ಹಿಡಿದು ಮಣ್ಣಿಗೆ ಎಂದು ದಿವಸ ಹುಚ್ಚೆ ಹೊಯ್ದು ನೆನೆಹಾಕಿದ. ಹುಲಿಗಣ್ಣ ಮತ್ತು ಹುಲಿಗೆಮ್ಮ ನೋಡ್ತಾರೆ. ಈ ನೆನೆಸಿದ ಮಣ್ಣಿನಿಂದ ಕುಡಿಕೆಗಳನ್ನು ಬಹಳ ಚಂದವಾಗಿ ಮಾಡಿದ್ದ. ಇದನ್ನು

ರಾಜನಿಗೆ ಕೊಟ್ಟರು. ಅದರಲ್ಲಿ ಹಾಲು ತುಂಬಿಕೊಂಡು ನಾಗದೇವತೆಗೆ ಐದು ಜನ ಹೆಣ್ಣುಮಕ್ಕಳು ಹಾಲೆರೆದರು. ಹಾಲೆರೆದು ಉಳಿದ ಹಾಲನ್ನು ಏನು ಮಾಡಬೇಕು ಎಂದು ತಂದೆಗೆ ಕೇಳಿದಾಗ ಉಳಿದ ಹಾಲನ್ನು ನೀವೇ ಕುಡಿಯಿರಿ ಎಂದಾಗ ಅವರು ಕುಡಿದರು. ಕಾಲಾಂತರದಲ್ಲಿ ಅವರು ಗರ್ಭವತಿಯಾದರು. ಸಮಾಜದಲ್ಲಿ ಪುರುಷನಿಲ್ಲದೆ (ಗಂಡನಿಲ್ಲದೆ) ಗರ್ಭವತಿಯಾಗುವುದು ಸಮಾಜವನ್ನೇ ಎದುರು ಹಾಕಿಕೊಂಡ ಹಾಗೆ. ಹೀಗೆ ರಾಜನಿಗೆ ಕೋಪ ಬಂದು ಮಕ್ಕಳೆನ್ನದೇ ಅವರನ್ನು ಕೊಲೆಗೈಯುವ ಕೆಲಸಕ್ಕೆ ಮುಂದಾದರು. ಇವರನ್ನು ಕೊಲ್ಲುವುದು ಬೇಡ ಮಕ್ಕಳಾದ ಮೇಲೆ ಕಣ್ಣು ಕಟ್ಟಿ ಕಾಡಲ್ಲಿ ಬಿಟ್ಟು ಬಂದರಾಯಿತು ಎಂದು ತೀರ್ಮಾನಿಸಿದರು. ಐದು ಜನ ಹೆಣ್ಣು ಮಕ್ಕಳಿಗೂ ಐದು ಗಂಡು ಮಕ್ಕಳಾದವು. ಮುಂದೆ ಇಡಿ ಊರಿಗೆ ಅನ್ನಸಂತರ್ಪಣೆ ಮಾಡಿಸೋಕೆ ಊರಿನವರಿಗೆಲ್ಲಾ ಊಟಕ್ಕೆ ಕರೆದರು. ಆದರೆ ನೊಣಮುತ್ತುಗ ಬರಲಿಲ್ಲ. ಪುನಃ ಅವನನ್ನು ಕರೆತಂದು ಊಟಕ್ಕೆ ಹಾಕಿಸಿದರು. ಈ ಮಕ್ಕಳು ಯಾರ ಊಟದ ತಟ್ಟೆಯಲ್ಲಿ ಕೂತು ಊಟ ಮಾಡ್ತಾವೋ ಅವರಿಗೆ ಈ ಹೆಣ್ಣುಮಕ್ಕಳು ಕೊಟ್ಟು ಮದುವೆ ಮಾಡಿದರಾಯ್ತು ಎಂದು ತೀರ್ಮಾನಿಸಿದರು. ಊಟದ ಪಂಕ್ತಿ ನಡೆಯುತ್ತಿರುವಾಗ ಐದು ಮಕ್ಕಳು ನೊಣಮುತ್ತುಗನ ತಟ್ಟೆಯಲ್ಲಿ ಕೂತು ಊಟ ಮಾಡಲಾರಂಭಿಸಿದವು. ಅನಿವಾರ್ಯವಾಗಿ ಅವನಿಗೆ ಕೊಟ್ಟು ಮದುವೆ ಮಾಡಿಸಿದರು.

ಈ ಐದು ಜನ ಹೆಣ್ಣುಮಕ್ಕಳು ಅನಿವಾರ್ಯವಾಗಿ ಅವನನ್ನೇ ಗಂಡ ಎಂದು ಒಪ್ಪಿಕೊಳ್ಳಬೇಕಾಯಿತು. ಅದರಂತೆಯೇ ಸೋಬನ ಕೂಡ ದಿನಕ್ಕೆ ಒಬ್ಬೊಬ್ಬರ ಜೊತೆ ನಡೆಯಿತು. ಕೊನೆಯವಳು ಬಹಳ ಚೆನ್ನಾಗಿ ನೊಣಮುತ್ತುಗನನ್ನು ನೋಡಿಕೊಂಡಿದ್ದರಿಂದ ಅವಳ ಮನೆಯಲ್ಲಿ ಹೆಚ್ಚಾಗಿ ಕಾಲ ಕಳೆಯತೊಡಗಿದ. ನಂತರದಲ್ಲಿ ಅವನ ನಿಜ ಸ್ವರೂಪ ತಿಳಿಯಿತು. ಬಂಗಾರದ ಮೈ ಬಣ್ಣ ಹೊಂದಿದ್ದ. ಕಾಶಿಪಟ್ಟಣ ಅರಸ ಕಪ್ಪ ಕೊಡಲಿಲ್ಲ. ಅದನ್ನು ಅಳಿಯನಿಗೆ ವಹಿಸಿದಾಗ ಅಳಿಯಾ ನಾನೇ ಹೋಗಿ ವಸೂಲಿ ಮಾಡಿಕೊಂಡು ಬರುವೆನೆಂದು ತೀರ್ಮಾನಿಸಿ ಹೊರಟುಹೋದ. ಕಾಶಿರಾಜನ ಬಳಿ ಏನು ಇರಲಿಲ್ಲ. ತಾಯಿಗೆ ಮಗ ಬಂದಿರುವುದು ಖಚಿತವಾಗಿ ಅವಳ ಮೊಲೆಯಲ್ಲಿ ಹಾಲು ಬರುತ್ತಿದ್ದದ್ದವು. ನನ್ನ ಮಗನೇ ಆಗಿದ್ದರೆ ಪರದೆ ಹಿಂದಿರುವ ಮಗನ ಬಾಯಿಗೆ ಹಾಲು ಬೀಳಲಿ ಎಂದಾಗ ಅದರಂತೆ ನೊಣಮುತ್ತುಗನ ಬಾಯಲ್ಲಿ ಹಾಲು ಬಿದ್ದವು. ಅವನಿಗೂ ತಾಯಿ ಎಂದು ಗೊತ್ತಾಗಿ ಅವರೊಡನೆ ಸೊಸೆಂದಿರ ಜೊತೆ ಸುಖ ಜೀವನ ಮಾಡಿದರು.

### ೩.೮. ಕೌಟುಂಬಿಕ ಸಂಬಂಧಗಳು

ಸಮಾಜದಲ್ಲಿ 'ಕುಟುಂಬ' ಒಂದು ಚಿಕ್ಕ ಘಟಕ. ಕುಟುಂಬದ ಮೂಲಕವೇ ವ್ಯಕ್ತಿ ಇತರ ಜನಗಳ ಜೊತೆಯಲ್ಲಿ ಸಂಪರ್ಕ ಮತ್ತು ಸಂಬಂಧಗಳನ್ನು ಬೆಳೆಸಲು ಸಾಧ್ಯವಾಗುವುದು. ಒಂದು ಸಮಾಜದಲ್ಲಿ ಹಲವು ಉಪಸಮಾಜಗಳಿರುವಂತೆ ಈ ಉಪಸಮಾಜಗಳಲ್ಲಿ ಹಲವಾರು ಕುಟುಂಬಗಳನ್ನು ಒಳಗೊಂಡಿರುತ್ತದೆ. ಹೀಗಾಗಿ ಸಮಾಜದ ಪರಿಕಲ್ಪನೆಯಲ್ಲಿ ಕುಟುಂಬವೇ ಮೂಲಭೂತವಾದ ಘಟಕವಾಗಿದೆ. ಈ ಕುಟುಂಬದ ಮೂಲಕವೇ ವ್ಯಕ್ತಿ ಸಂಬಂಧಗಳು ಮತ್ತು ಸಾಮಾಜಿಕ ಸಂಬಂಧಗಳು ಹುಟ್ಟಿಕೊಳ್ಳುತ್ತವೆ. ಕುಟುಂಬದಲ್ಲಿ ಮೊದಲನೆಯ ಸಂಬಂಧವೇ ರಕ್ತಸಂಬಂಧ. ಇದನ್ನು ಜನಪದರು ಕಳ್ಳುಬಳ್ಳಿ ಸಂಬಂಧವೆಂದು ಕರೆದಿದ್ದಾರೆ. ಇದಾದ ನಂತರ ಮದುವೆಯ ಮೂಲಕ ಎರಡು ಕುಟುಂಬಗಳ ನಡುವೆ ಏರ್ಪಡುವ ಸಂಬಂಧ

ನೆಂಟಸ್ತಿಕೆಯ ಸಂಬಂಧವೆನಿಸುತ್ತದೆ. ಈ ನೆಂಟಸ್ತಿಕೆ ವಿಸ್ತಾರವಾದಂತೆಲ್ಲಾ ಬಂಧು ಬಳಗಗಳು ಹೆಚ್ಚುತ್ತಾ ಹೋಗುತ್ತವೆ. ಹುಟ್ಟುವಾಗ ಪ್ರಾಣಿಗಿಂತ ಭಿನ್ನವಾಗಿರದ ಮನುಷ್ಯ ಮನುಷ್ಯತ್ವವನ್ನು ಮೈಗೂಡಿಸಿಕೊಳ್ಳುವಲ್ಲಿ ಕುಟುಂಬದ ಪಾತ್ರವೇ ದೊಡ್ಡದು. ಭಾವನೆ ಮತ್ತು ವಿಚಾರಗಳ ಸಂಪರ್ಕವಾಗುವುದು ಕುಟುಂಬದಿಂದಲೇ.

ಜಾನಪದ ಕುಟುಂಬವು ಪುರುಷ ಪ್ರಧಾನವಾದದ್ದು. ಕುಟುಂಬದಲ್ಲಿ, ಸಮಾಜದಲ್ಲಿ ಪುರುಷನ ಪಾತ್ರ, ಸ್ಥಾನಮಾನ ಸ್ತ್ರೀಯರಿಗಿಂತ ಹೆಚ್ಚಿನದು, ಉತ್ತಮವಾದದ್ದು. ಈ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀ ತನ್ನ ತವರು ಮನೆಯನ್ನು ತೊರೆದು ಬಾಳುವೆ ಮಾಡಲು ಗಂಡನ ಮನೆಗೆ ಬರುತ್ತಾಳಾದ್ದರಿಂದ ಪುರುಷನ ಆಶ್ರಯದಲ್ಲಿ ಇರಬೇಕಾಗುತ್ತದೆ. ಜಾನಪದ ಸಮಾಜದ ರಚನೆಯ ದೃಷ್ಟಿಯಿಂದ ಸಾಮಾನ್ಯವಾಗಿ ಗಂಡ ತನ್ನ ಹೆಂಡತಿಯ ತವರುಮನೆಯಲ್ಲಿ, ಊರಲ್ಲಿ ವಾಸಮಾಡಲು, ನೆಲೆಸಲು ಬರುವುದಿಲ್ಲ. ಅನಿವಾರ್ಯ ಕಾರಣಗಳಿಂದ ಪರವೂರಲ್ಲಿ ನಿಂತರೆ ಅವನಿಗೆ ಅಲ್ಲಿ ಸೂಕ್ತ ಗೌರವ, ಮನ್ನಣೆ, ಸ್ಥಾನ ಮಾನ ಹಾಗೂ ಗ್ರಾಮ ಮಟ್ಟದ ಸಾರ್ವಜನಿಕ ಚಟುವಟಿಕೆಗಳಲ್ಲಿ ಸೂಕ್ತ ಪಾತ್ರಗಳು ಸಿಗುವುದಿಲ್ಲ. "ನಮ್ಮ ಊರ ಬಿಟ್ಟು ಇನ್ನೊಂದು ಊರಾಗ ನಿಂತರೆ, ಅಲ್ಲಿ ನಮಗೆ ಕರಕಟ್ಟೋ ಗೂಟದ ಬೆಲೆಯೂ ಇರಲ್ಲ" ಎಂಬ ಗಾದೆಯ ಮಾತೇ ಅವರಲ್ಲಿದೆ. ಜನಪದರ ಜೀವನದಲ್ಲಿ ಕೌಟುಂಬಿಕ ಸಂಬಂಧಗಳಿಗೆ ಇಂತಹ ಮಹತ್ವವಿರುವುದರಿಂದಲೇ ಅವರ ಎಲ್ಲ ಅಭಿವ್ಯಕ್ತಿಗಳಲ್ಲಿ ಕೌಟುಂಬಿಕ ಜೀವನ ಮುಖ್ಯವಾಗಿ ಬಂದಿದೆ. ಜನಪದ ಗೀತೆ, ಕಥೆ, ಆಟ–ಪಾಠಗಳಲ್ಲಿ ಈ ಕುಟುಂಬ ಜೀವನಕ್ಕಾದ ನೋವುಗಳು ಅಭಿವ್ಯಕ್ತಿ ಪಡೆದಿವೆ. ರಾಮಾಯಣ, ಮಹಾಭಾರತ ಕಾವ್ಯಗಳು ಇಂದಿಗೂ ಜೀವಂತವಾಗಿರಲು ಅವುಗಳಲ್ಲಿ ಅಡಕವಾಗಿರುವ ಕುಟುಂಬ ಜೀವನವೇ ಹಾಸು ಹೊಕ್ಕಾಗಿದೆ. ಕೌಟುಂಬಿಕ ಸಂಬಂಧಗಳು ಅಲ್ಲಿನ ರೀತಿ–ನೀತಿ ಮತ್ತು ವೈವಾಹಿಕ ಸಂಬಂಧಗಳನ್ನು ಬೆಳೆಸುವಾಗ ಅನುಸರಿಸಲಾಗುವ ಸಂಪ್ರದಾಯ ಪದ್ಧತಿಗಳು, ಕುಟುಂಬದ ನೆಲೆಯಲ್ಲಿ ತಂದೆ–ತಾಯಿ ಮಕ್ಕಳು ಅಣ್ಣ–ತಮ್ಮಂದಿರು ಅಕ್ಕ–ತಂಗಿಯರು ಪರಸ್ಪರ ಹೊಂದಿರುವ ನಂಬಿಕೆ ಮತ್ತಿತರ ಸಂಬಂಧಗಳು ಪುರಾಣ ಪಾತ್ರಗಳಿಗೆ ಅನ್ವಯವಾಗಿ ಬಂದಿವೆ. ಇವುಗಳ ಜೊತೆಯಲ್ಲಿ ಕುಟುಂಬ–ಕುಟುಂಬಗಳ ನಡುವೆ ಏರ್ಪಡುವ ಬಂಧುತ್ವ ಮತ್ತು ನೆಂಟಸ್ತಿಕೆ, ಕುಟುಂಬಗಳಲ್ಲಿ ಆಗಾಗ ತಲೆದೋರುವ ಸಂಘರ್ಷಗಳು ಅವುಗಳ ಪರಿಣಾಮ ಇವೆಲ್ಲವೂ ಬಯಲಾಟ ಕಥೆಗಳಲ್ಲಿ ಜೀವಂತ ಸನ್ನಿವೇಶಗಳೊಂದಿಗೆ ಚಿತ್ರಣಗೊಂಡಿವೆ. ಈ ದೃಷ್ಟಿಯಿಂದ ಬಯಲಾಟದ ಕಥೆಗಳನ್ನು ಸಾಮಾಜಿಕ ನೆಲೆಯಲ್ಲಿ ಅಧ್ಯಯನ ಮಾಡುವುದರಿಂದ ಜನಪದರು ಬದುಕಿದ ಒಂದು ಕಾಲದ ಕೌಟುಂಬಿಕ ಜೀವನವನ್ನು ಅರಿಯಲು ಸಾಧ್ಯವಾಗಿದೆ. ದೈನಂದಿನ ಜೀವನದಲ್ಲಿ ಅಭೂತ ಪೂರ್ವವಾದುದ್ದನ್ನು ಸಾಧಿಸಿದ ವ್ಯಕ್ತಿಯನ್ನು ಕಂಡಾಗ ಅವನ ಬಗೆಗೆ ಸಮಾಜ ಒಪ್ಪಿಕೊಂಡ ಮೌಲ್ಯಗಳನ್ನು ರಕ್ಷಿಸುವ ಜನಗಳು ನೈತಿಕ ವೀರರಾಗಿ ಮತ್ತು ಸಾಂಸ್ಕೃತಿಕ ವೀರರಾಗಿ ಗುರುತಿಸಲ್ಪಡುತ್ತಾರೆ. ನಮ್ಮ ಹಿಂದಿನ ಪುರಾಣ ಕಾವ್ಯಗಳಲ್ಲಿ ಚಿತ್ರಣಗೊಂಡಿರುವ ನಾಯಕರುಗಳೆಲ್ಲ ಒಂದಿಲ್ಲೊಂದು ಬಗೆಯ ಸಾಧನೆ ಮಾಡಿದ ಮಹಾಪುರುಷರೇ ಆಗಿದ್ದರು. ಈ ಹಿನ್ನೆಲೆಯಲ್ಲಿ ಜನಪದ ಕಥೆಗಳಲ್ಲಿ ಬರುವ ಕೌಟುಂಬಿಕ ಸಂಬಂಧಗಳನ್ನು ಇಲ್ಲಿ ಒಂದೊಂದಾಗಿ ವಿವರಿಸಲಾಗಿದೆ.

**ತಂದೆ–ತಾಯಿ ಮತ್ತು ಮಕ್ಕಳ ಸಂಬಂಧ:** ಕುಟುಂಬ ಜೀವನ ಅಸ್ತಿತ್ವಕ್ಕೆ ಬರುವುದೇ ತಂದೆ–ತಾಯಿಗಳ ಮೂಲಕ. ಜನಪದ ಕಥೆಗಳಲ್ಲಿ ಈ ಸಂಬಂಧಗಳು ಕಣ್ಮುಂದೆ ಕಟ್ಟಿದಂತೆ ಚಿತ್ರಣಗೊಂಡಿವೆ. ಜನಪದ

ಕಥೆಗಳಲ್ಲಿ ಅನೇಕ ದಂಪತಿಗಳು ತಮಗೆ ಮಕ್ಕಳಾಗಲಿಲ್ಲ ಎಂಬ ಕೊರಗಿನಲ್ಲಿರುತ್ತಾರೆ. ಎಂತಹ ಮಗುವಾದರೂ ಸರಿ ಅದನ್ನು ಪಡೆಯಲು ಹಾತೊರೆಯುತ್ತಾರೆ. ಅದರಂತೆ ಕೇವಲ ಗಂಡುಮಕ್ಕಳಾದರೆ ಸಾಲದು, ಹೆಣ್ಣು ಮಕ್ಕಳು ಒಬ್ಬ ತಾಯಿಗೆ ಬೇಕೆ ಬೇಕು. ಇನ್ನು ಅನೇಕ ಕಥೆಗಳಲ್ಲಿ ತಮಗೆ ದಡ್ಡ ಮಕ್ಕಳಿದ್ದರೆ ತಾಯಂದಿರು ಮೊದಲಿಗೆ ಅವರ ಬಗ್ಗೆ ಬೇಸರ ಪಟ್ಟುಕೊಳ್ಳುತ್ತಾರೆ. ಆದರೆ ಅವರನ್ನು ಅತಿಯಾದ ವಾತ್ಸಲ್ಯದಿಂದ ಕಾಣುತ್ತಾರೆ. ತನ್ನಿಂದ ಹಣ ಪಡೆದು ನಾಯಿ, ಬೆಕ್ಕು, ಹಾವನ್ನು ಕೊಂದು ತಂದಾಗ ಬೇಸರ ಪಟ್ಟ ತಾಯಿ ಮಗ ಮಾಟದ ಉಂಗುರದೊಂದಿಗೆ ಮನೆಗೆ ಬಂದಾಗ ಬಹು ಸಂತೋಷದಿಂದ ಬರಮಾಡಿಕೊಳ್ಳುತ್ತಾಳೆ. ಹುಡುಗನ ಸಾಹಸ ಎಂಬ ಕಥೆಯಲ್ಲಿ ತಾಯಿ ಕೂಲಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಳು. ದಡ್ಡಮಗ ಪರಮಾತ್ಮನನ್ನು ನೋಡಲೇಬೇಕೆಂದು, ತಾಯಿಗೆ ಹೇಳದೆ ಕೇಳದೆ ಹೊರಟು ಹೋಗುತ್ತಾನೆ. ಹುಡುಗನಿಗೆ ಬೇಡದೆಯೇ ರಾಜನು ಮಗಳನ್ನು ಕೊಟ್ಟು ಮದುವೆ ಮಾಡಿಕೊಡುವುದು ಮತ್ತು ಅವನ ಬಡತನ ನಿವಾರಣೆಗೆ ಬೇಡದೆಯೇ ನಾಗೇಂದ್ರ ತನ್ನ ಸಂಪತ್ತನ್ನು ದಾನ ಮಾಡುವುದು. ಅವನ ಮುಗ್ಧ ಮನಸ್ಸು ಒಳ್ಳೆಯ ಬುದ್ಧಿಗೆ ಕಾರಣವಾಗುತ್ತದೆ. ತಾಯಿ ಇದನ್ನೆಲ್ಲಾ ನೋಡಿ ತುಂಬಾ ಸಂತೋಷಪಡುವಳು. ಅಡವಿ ಮನುಷ್ಯ ಕಥೆಯಲ್ಲಿ ಹೆಣ್ಣಿನ ಮೋಹಕ್ಕೆ ಸಿಲುಕಿ ಕುರುಡನಾಗಿರುವ ತಂದೆಯನ್ನು ಜ್ಞಾನದ ಬೆಳಕಿನ ಕಡೆಗೆ ತರುವುದು ಮತ್ತು ಎಂದಿಗೂ ಬಿಡಿಸದ ಸಂಬಂಧ ತಂದೆ ತಾಯಿ ಮಕ್ಕಳ ಸಂಬಂಧ ಎಂಬುದನ್ನು ನಿರೂಪಿಸಲಾಗಿದೆ. ಇನ್ನೊಂದು ಕಥೆಯಲ್ಲಿ ಒಬ್ಬ ತಾಯಿ ಇದ್ದೊಬ್ಬ ಮಗನಿಗೆ ಸಣ್ಣವನಿರುವಾಗಲೇ ಮದುವೆ ಮಾಡಿರುತ್ತಾಳೆ. ದಡ್ಡನಾಗಿ ಬೆಳೆದ ಆತ ತನ್ನ ಹೆಂಡತಿಯನ್ನು ನೋಡಲು ಬಯಸಿದಾಗ ಸಂದರ್ಭಕ್ಕೆ ತಕ್ಕಂತೆ ಹೇಗೆ ನಡೆದುಕೊಳ್ಳಬೇಕೆಂದು ಮೊದಲೇ ಹೇಳಿ ಬೀಗರ ಮನೆಗೆ ಕಳುಹಿಸುತ್ತಾಳೆ. ತಾಯಿಯಾದವಳು ತನ್ನ ಮಕ್ಕಳ ಆಸೆಯನ್ನು ಏನಾದರೂ ಮಾಡಿ ಪೂರೈಸಲು ಬಯಸುತ್ತಾಳೆ. ತನ್ನ ಕುರುಡ ಮಗ ರಾಜ್ಯಸಭೆಯಲ್ಲಿ ಕೂಡಲು ಬಯಸಿದಾಗ, ತಾಯಿ ಅರಸನ ಅಪ್ಪಣೆ ಪಡೆದು ಕೂರಿಸುವುದು, ಹೊಲತಿಯ ಮಗನೊಬ್ಬನು ಸಾಹುಕಾರನ ಮಗಳನ್ನು ಮೋಹಿಸಿ ತಾಯಿಗೆ ತಿಳಿಸಿದಾಗ, ತಾಯಿ ಮಗನಿಗೆ ಆ ಹೆಣ್ಣನ್ನು ದೊರಕಿಸಿ ಕೊಡಲು ಪ್ರಯತ್ನಿಸುತ್ತಾಳೆ. ಕೆಲವೊಂದು ಕಥೆಗಳಲ್ಲಿ ತಂದೆ ತಾಯಂದಿರಿಗೆ ತನ್ನ ವಂಶದ ಕುಡಿಯೆಂದರೆ ಅತಿಯಾದ ವ್ಯಾಮೋಹ. ತಾನು ಸಾಯುವಾಗಲೂ, ಸತ್ತ ನಂತರವೂ ಅವರ ಹಿತವನ್ನು ಬಯಸುತ್ತಿರುತ್ತಾರೆಂಬುದು ಜನಪದರ ನಂಬಿಕೆ. ತಾಯಿಯ ಕರುಳ ಮಮತೆಯಿಂದ ಕೂಡಿದ್ದು, ಒಬ್ಬ ಮಗನು ಸೂಳೆಗಾಗಿ ತಾಯಿಯನ್ನು ಕೊಂದು ಅವಳ ಕರುಳನ್ನು ಉಡಿಯಲ್ಲಿ ತುಂಬಿಕೊಂಡು ಅವಸರವಸರವಾಗಿ ಹೋಗುವಾಗ ಎಡವಿ ಬೀಳುತ್ತಾನೆ. ಆಗ ಮಗನಿಗೆ ನೋವಾಯಿತೇನೋ ಎಂದು ಆ ತಾಯಿಯ ಕರುಳು ಗೋಗರೆಯುತ್ತದೆ. ಇನ್ನೊಬ್ಬ ತಾಯಿಯನ್ನು ಗೋಡೆಗೆ ಕಟ್ಟಿ ಹಾಕಿದಾಗ ಇಡೀ ಗೋಡೆಯೇ ಮಗ ಮಗ ಎಂದು ಹಲಬುತ್ತಿರುತ್ತದೆ. ಮತ್ತೊಬ್ಬ ತಾಯಿ ಮಗಳ ಋಣ ತೀರಿಸಲು ಸತ್ತ ನಂತರ ಅವಳ ಮನೆಯಲ್ಲಿ ಎಮ್ಮೆಯಾಗಿ ಜನಿಸುತ್ತಾಳೆ. ಆದರೆ ಒಬ್ಬೊಬ್ಬ ತಾಯಿ ರಾಕ್ಷಸಿಯಂತೆ ತನ್ನ ಮಕ್ಕಳನ್ನೇ ಕೊಂದು ತಿನ್ನುವ ಅಪರೂಪದ ಉದಾಹರಣೆಗಳು ಸಿಗುತ್ತವೆ.

**ಗಂಡ-ಹೆಂಡತಿ ಸಂಬಂಧ:** ತಂದೆ-ತಾಯಿಗಳು ಪ್ರಾಥಮಿಕವಾಗಿ ಗಂಡ ಹೆಂಡತಿಗಳಾಗಿರುತ್ತಾರೆ. ಸಮಾಜದಲ್ಲಿ ಗಂಡ-ಹೆಂಡತಿಯರಾಗಲು ಅನೇಕ ವಿಧವಾದ ಸಾಮಾಜಿಕ ನಿಯಮಗಳಿವೆ. ಗಂಡು-

ಹೆಣ್ಣಿನ ನಡುವೆ ಏರ್ಪಡುವ ವೈವಾಹಿಕ ಸಂಬಂಧವೇ ಅವರನ್ನು ಗಂಡ–ಹೆಂಡತಿಯೆಂಬ ಕೌಟುಂಬಿಕ ಸಂಬಂಧದಲ್ಲಿ ಸ್ಥಾಪಿಸುತ್ತದೆ. ವಿವಾಹ ಸಂಬಂಧಗಳನ್ನು ಏರ್ಪಡಿಸುವುದು ತಂದೆ–ತಾಯಿಗಳೇ; ಇದು ನಮ್ಮ ಸಮಾಜ ಒಪ್ಪಿಕೊಂಡ ವಿವಾಹ ಪದ್ಧತಿ. ಒಮ್ಮೊಮ್ಮೆ ಪುರುಷ ಸ್ತ್ರೀಯನ್ನು ಸ್ತ್ರೀ ಪುರುಷನನ್ನು ನೋಡಿ ಮೆಚ್ಚಿ ಪರಸ್ಪರ ಒಪ್ಪಿ ಮದುವೆಯಾಗುವುದಕ್ಕೆ ಗಾಂಧರ್ವ ವಿವಾಹಗಳೆಂದು ಕರೆಯುತ್ತಾರೆ. ಇಲ್ಲಿ ಮದುವೆಯ ನಂತರ ಗಂಡ–ಹೆಂಡತಿಯರಾಗಿ ತಮ್ಮನ್ನು ಗುರುತಿಸಿಕೊಂಡು ಹೇಗೆ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು ಬದುಕುತ್ತಾರೆ ಎಂಬುದೇ ಜೀವನದ ಯಶಸ್ಸಿನಲ್ಲಿ ಮುಖ್ಯವಾಗುತ್ತದೆ. ಜನಪದ ಕಥೆಗಳಲ್ಲಿ ಬರುವ ಇಂತಹ ಗಂಡ–ಹೆಂಡತಿಯರ ಸಂಬಂಧಗಳನ್ನು ನೋಡಬಹುದು.

'ಗಂಡ–ಹೆಂಡತಿ' ಕಥೆಯಲ್ಲಿ ಗಂಡ ಚೆಲುವ ಸುಂದರನಾಗದಿರುವುದು ಹಾಗೂ ಹೆಂಡತಿ ಅತಿ ಸುಂದರಿ ಇರುವುದೇ ದೊಡ್ಡ ಸಮಸ್ಯೆಯಾಗುವುದು. ಗಂಡನಿಗೆ ಹೆಂಡತಿ ಮೇಲೆ ಅನುಮಾನ, ನಂಬಿಕೆಯಿಲ್ಲದಿರುವುದೇ ಮೂಲ ಕಾರಣ. ಪುರುಷನಿಗಿಂತ ಮಹಿಳೆ ಯಾವುದೇ ರೀತಿಯಲ್ಲಿ ಮುಂದಿರಬಾರದು. ತನಗಿಂತ ಎಲ್ಲಾ ವಿಷಯದಲ್ಲೂ ಕಡಿಮೆಯಿರಬೇಕು ಎನ್ನುವುದನ್ನು ಕಂಡುಕೊಳ್ಳಬಹುದು.

**ಪಾಪಸಿನ ಗಂಡ:** ಸಂಸಾರಿಕ ಚೌಕಟ್ಟಿನೊಳಗೆ ಕಥೆ ಇಟ್ಟು ನೋಡಿದರೆ ಕಥೆಯ ನಾಯಕ ಪರಾವಲಂಬಿ ಮತ್ತು ಪುರುಷ ಪ್ರಧಾನ ವ್ಯವಸ್ಥೆಯ ಪ್ರತಿನಿಧಿ, ಆದರೆ ಅವನಿಗೆ ಸ್ವಂತಿಕೆ ಇಲ್ಲ. ತಂದೆಯ ಮಾತಿನಂತೆ ನಡೆಯುವ ಗುಣಾವಗುಣಗಳನ್ನು ವಿಶ್ಲೇಷಿಸುವ ಬುದ್ಧಿವಂತಿಕೆ ಇಲ್ಲ.

ತಂದೆಯು ಕೂಡ ಪುರುಷ ಪ್ರಧಾನ. ಏಕೆಂದರೆ ಅವನು ತನ್ನ ಮಗ ಮತ್ತೊಂದು ಹೆಣ್ಣನ್ನು ಪಡೆದುಕೊಳ್ಳುವಲ್ಲಿ ತನ್ನ ಮಗನ ಸಾಮರ್ಥ್ಯವನ್ನು ಮತ್ತು ಅವನ ವ್ಯಕ್ತಿತ್ವವನ್ನು ಪರಿಗಣಿಸದೆ ಮಗನಿಗಿರುವ ಹೆಣ್ಣಿನ ಅಥವಾ ಮಾನವೀಯ ಸಂಬಂಧಗಳನ್ನು ಮೀರಿ ಅಥವಾ ಗಂಡು ಹೆಣ್ಣುಗಳ ಪರಸ್ಪರ ಸಾಮರಸ್ಯಕ್ಕೆ ಬೇಕಾದ (ವಿರಹಕ್ಕೆ) ಯಾವ ಸವಾಲನ್ನು ಒಡ್ಡದೆ ಪುರುಷ ವ್ಯಕ್ತಿತ್ವದ ಕ್ರೂರತೆಯ ಸವಾಲನ್ನು ಒಡ್ಡುತ್ತಾನೆ. ಅದೇನೆಂದರೆ "ತನ್ನ ಮಗನು ಹೆಂಡತಿಯನ್ನು ಪಾಪಸಿನಿಂದ ಪಂಚವೀಸ ಏಟು ಹೊಡೆಯುವವನಿದ್ದಾನೆ".

ಹುಡುಗನಿಗೆ ಹೆಣ್ಣೊಂದು ಸಿಗಬೇಕಾದರೆ ಗಂಡಿಗಿರುವ ಅರ್ಹತೆಯ ಯಾವ ಪ್ರಶ್ನೆಗಳು ಇಲ್ಲಿ ಬರುವುದಿಲ್ಲ. ಅದಕ್ಕೆ ವಿರುದ್ಧವಾಗಿ ಹೆಣ್ಣೆಂದರೆ ಯಾವುದೇ ಕ್ರೂರ ಶಿಕ್ಷೆಯನ್ನು ಸಹಿಸಿಕೊಂಡು ಗಂಡಿನ ಅಡಿಯಾಳಾಗಿ ಬದುಕಬೇಕೆಂಬ ಒಂದು ದೃಷ್ಟಿಕೋನ ಈ ಕಥೆಯಲ್ಲಿ ಎದ್ದು ಕಾಣುತ್ತದೆ. ಆದರೆ ಒಟ್ಟು ಕಥೆಯ ಆಶಯ ಇದಕ್ಕೆ ಭಿನ್ನವಾದ ಮನುಷ್ಯನ ಅರ್ಹತೆಯನ್ನು, ಅನ್ಯೋನ್ಯತೆಯನ್ನು ಗುರುತಿಸುವ ಕಾರಣದಿಂದ ಹುಟ್ಟಿದ್ದಾಗಿದೆ. ಅದಕ್ಕೆ ಜನಪದ ಕಥೆಗಾರ ಈ ಹಿಂಸೆಗಳನ್ನು ಒಪ್ಪಿಕೊಂಡು ಹೆಣ್ಣಿನ ಪಾತ್ರವೊಂದನ್ನು ಸೃಷ್ಟಿ ಮಾಡಿ ಅವಳ ಚಾಲಕಿತನದಿಂದ ಸಮಯ ಪ್ರಜ್ಞೆಯಿಂದ ಗಂಡನಿಗೆ ಇರುವ ಈ ಮನೋರೋಗವನ್ನು ಬಿಡಿಸುವ ತಂತ್ರವಾಗಿ ಕಥೆ ಮುಕ್ತಾಯವಾಗುತ್ತದೆ.

ಹೀಗೆ ಕಥೆಯ ಪ್ರಾರಂಭಕ್ಕೆ ಬರುವುದಾದರೆ ಈ ಥರ ಪಾಪಸಿನಿಂದ ಏಟು ತಿಂದು ಅವನನ್ನು ಗಂಡನನ್ನಾಗಿ ವರಿಸುವುದಕ್ಕೆ ಹಳ್ಳದ ಕೆರೆಯ ಊರಿನವರಾಗಲಿ, ಮತ್ತೊಂದು, ಮಗದೊಂದು ಊರಿನವರಾಗಲಿ ಸಮ್ಮತಿ ಕೊಡದಿರುವುದೇ ಆ ಜನಪದ ಸಮಾಜದ ನೀತಿಯೊಂದನ್ನು ಪ್ರತಿಪಾದಿಸುತ್ತದೆ. ಆದರೆ ಕಥೆಗಾರ

ಅಷ್ಟನ್ನೇ ಹೇಳಿ ಕಥೆಯನ್ನು ಮುಗಿಸಬಹುದಿತ್ತು. ಆದರೆ ಆ ಘಟನೆಯನ್ನು ಆ ಥರದ ಮನಸ್ಥಿತಿಯನ್ನು ಬದಲಾಯಿಸುವ ಶಕ್ತಿ ಹೆಣ್ಣಿಗೆ ಇದೆ ಎಂಬುದನ್ನು ಪ್ರತಿಪಾದಿಸಲು ತಂದೆ ಹೇಳುವ 'ಠರಾವಿಗೆ' ಒಪ್ಪಿಗೆಯಾಗುವಂತೆ ಪಾಪಸಿನಿಂದ ಏಟು ತಿನ್ನಲು ಸಿದ್ಧಳಿರುವ ಚಿನ್ನದ ಕೆರೆಯ ಹುಡುಗಿಯನ್ನು ಕಥೆಯ ಚಾಲನೆಗೆ ಸಾಧನವಾಗಿ ತರುತ್ತಾನೆ.

ಮದುವೆ ಬಾಸಿಂಗ ಕಟ್ಟಿಕೊಂಡಿರುವ ಶುಭ ಮುಹೂರ್ತದಲ್ಲಿ ಗಂಡ ಎಷ್ಟು ಕಠಿಣವಾಗಿ ವರ್ತಿಸುತ್ತಾನೆಂದರೆ "ಸೆರಗು ತೆಗೆ ನಾನು ಬಡಿತಿನಿ" ಎನ್ನುವುದು. ಒಟ್ಟು ಮದುವೆ ಸಂಭ್ರಮ ಸಂಬಂಧ ವೈವಾಹಿಕತೆ ಜನರ ಸೇರ್ಪಡೆ ಇರುವುದು ಕೂಡ ಮದುಮಗನಿಗೆ ಮುಖ್ಯವಾಗದೇ ಹೋಗುವುದು. ಗಂಡಿನ ಪಾತ್ರ ಪರಿವರ್ತನೆಯಿಲ್ಲದ ಸೂಕ್ಷ್ಮವಾದ ಪಶುತ್ವದ ಸಂಕೇತವಾಗುತ್ತದೆ. ಆದರೆ ಮಧುಮಗಳು, ಗಂಡು-ಹೆಣ್ಣಿನ ಸಂಬಂಧದ ಗುರುಹಿರಿಯರ ಒಪ್ಪಿಗೆಯ ಆಶೀರ್ವಾದದ ಎಲ್ಲಕ್ಕಿಂತ ಮುಖ್ಯವಾಗಿ ಗಂಡು-ಹೆಣ್ಣಿನ ಅನ್ಯೋನ್ಯತೆಯ ಸಂಕೇತವಾಗಿ ಈ ತಾರ್ಕಿಕತೆಯನ್ನು ಮೀರಿದ ಧಾರ್ಮಿಕ ಸ್ಥಿತಿಯ ಸಂಕೇತವಾಗುತ್ತಾಳೆ. ಅದಕ್ಕೆ ಅವಳು ಹೇಳುವ ಈ ಮಾತುಗಳು ಸಾಕ್ಷಿಯಾಗಿರುತ್ತವೆ.

"ಇನ್ನೂ ನಾವು ಮದುವೆ ಹಂದರದಲ್ಲಿದ್ದೇವೆ; ಈಗ ನಾವು ಶಿವಪಾರ್ವತಿ ಇದ್ದಂತೆ ಇದ್ದೇವೆ. ನಾಳೆ ಹೊಡೆಯುವಿರಂತೆ" ಎಂದು ಹೇಳಿದಳು.

ಹೆಣ್ಣೊಂದು ಗಂಡಿನ ಸ್ವಭಾವದ ಬದಲಾವಣೆಗೆ ಇದಕ್ಕಿಂತಲು ತೀವ್ರವಾಗಿ ಪ್ರತಿಕ್ರಿಯಿಸಲು ಸಾಧ್ಯವಿಲ್ಲ. ಪಾಪಸಿನಿಂದ ಹೊಡೆಯುವುದು ಹೀನ ಕೃತ್ಯವೆಂದು ನಂಬಲಾಗಿದೆ. ಈ ಘಟನೆಯ ನಂತರ ಕಥೆಯ ಒಟ್ಟು ಚೌಕಟ್ಟಿನಲ್ಲಿ ತಂದೆಯ ಪಾತ್ರ ಮೌನವಾಗುವುದನ್ನು ಅವನು ವಿಧಿಸಿದ ಷರತ್ತಿಗೂ ಇವರಿಬ್ಬರ ಸಂಸಾರಿಕ ಜೀವನಕ್ಕೂ ಸಂಬಂಧವಿಲ್ಲದಂತೆ ತಂದೆಯ ಪಾತ್ರ ಮೌನವಹಿಸುತ್ತದೆ ಇದರ ಅರ್ಥ ಆ ಚಾಲಾಕಿ ಹೆಣ್ಣಿನ ಮೊದಲ ಹಂತದ ಗಂಡಿನ ಕ್ರೌರ್ಯಕ್ಕೆ(ಹುಡುಗನ ತಂದೆ) ಉತ್ತರ ಸಿಕ್ಕಿ ಅವನು ಪರಿವರ್ತಿತನಾಗಿ ತನ್ನ ಷರತ್ತಿಗೆ ಯಾವ ಮಾನವೀಯತೆ ಇಲ್ಲ ಎಂದು ಮೌನವಾಗುತ್ತದೆ.

ಕಥೆಯಲ್ಲಿನ ತಂದೆಯ ಪಾತ್ರ ಮುಂದೆ ಎಲ್ಲಾ ಪ್ರವೇಶಿಸದಿರುವುದರಿಂದ ಆ ಮಟ್ಟಕ್ಕೆ ಆತ ಬದಲಾಗಿದ್ದಾನೆಂದು ಪರಿಗಣಿಸಬೇಕಾಗುತ್ತದೆ. ಆದರೆ ಪುರುಷ ಪ್ರಧಾನ ವ್ಯವಸ್ಥೆಯ ಈ ಭ್ರಷ್ಟತೆಯನ್ನು ಅವನ ಮಗನಾದ ಮದುಮಗ ಮುಂದುವರೆಸುತ್ತಾನೆ. ಮುಂದಿನ ಘಟನೆಗಳನ್ನು ಕಥೆ ನಾಲ್ಕು ಸಾಲುಗಳಲ್ಲಿ ತಿಳಿಸುತ್ತದೆ.

ಮರುದಿನ ದೇವಕಾರ್ಯಕ್ಕೆ ಹೋಗುವುದಿದೆ. ಇಂದು ಹೊಡೆಯುವುದು ಬೇಡ ಎಂದಳು. ನಾಲ್ಕನೇ ದಿನವೂ ಹೇಳಿದಳು. ಅರಿಸಿನ ಮೈಯಲ್ಲಿದ್ದೇವೆ, ಏಟು ಕೊಡುವುದು ಬೇಡ. ಶೋಭಾನ ದಿನವೆಂದು ಐದನೆಯ ದಿನವೂ ದಾಟಿತು ಮಧುಮಗಳಿಗೆ ಉಡಿಯಕ್ಕಿ ಒಯ್ದರು. ಆಕೆಯನ್ನು ಗಂಡನ ಮನೆಗೆ ಕಳುಹಿಸಿದರು. ಈ ಎಲ್ಲಾ ವಿಧಿವಿಧಾನಗಳು ವೈವಾಹಿಕ ಆಚರಣೆಗಳು ಮುಗಿದ ಮೇಲೆ ಅವರಿಬ್ಬರೂ ಗಂಡ-ಹೆಂಡತಿಯೆಂದು ಸಮಾಜದ ಒಪ್ಪಿತವಾಗಿದೆ. ಮೇಲಿನ ಮಾತುಗಳನ್ನು ಹೇಳುವಲ್ಲಿ ಅವನಿಗೆ ಸ್ವಂತ ವ್ಯಕ್ತಿತ್ವವಿಲ್ಲ. ಈಗಲೂ

ಅವನು ತಂದೆಯು ಹೇಳಿದ ಪಿತೃವಾಕ್ಯಕ್ಕೆ ಬದ್ಧನಾಗಿದ್ದಾನೆ. ಆಗ ಈ ಕಥೆಯ ನಾಯಕಿಯಾದ ಹೆಣ್ಣು ಮಗಳು ನಿಜ ವ್ಯಕ್ತಿತ್ವವನ್ನು ತೋರಿಸುವ ಪ್ರಯತ್ನ ಮಾಡುತ್ತಾಳೆ.

ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸವಾಲನ್ನು ತಕ್ಕೊಂಡು ಹೋಗುವುದು ಕೌಟುಂಬಿಕ ಪರಿಸರದಿಂದ ಪರಿತ್ಯಾಗಿಯಾದ ಕಥಾನಾಯಕ ಮತ್ತೊಂದು ಪರಿಸರದಲ್ಲಿ ಪರೀಕ್ಷೆಗೆ ಒಳಗಾಗುತ್ತಾನೆ. ಆ ಪರೀಕ್ಷೆಗೆ ಒಳಗು ಮಾಡುವಳು ಒಬ್ಬ ಮುದುಕಿ.

ಅಪರಿಚಿತಳಾದ ಮುದುಕಿ ಮನೆಯಲ್ಲಿ ಕಥಾನಾಯಕ ಮಲಗಿದ್ದಾಗ ಅವನ ಕಿಸೆಯಲ್ಲಿ ಬಂಗಾರ ಬಟ್ಟಲನ್ನು ಇಟ್ಟು ಆತನನ್ನು ಅಪರಾಧಿ ಸ್ಥಾನಕ್ಕೆ ನೂಕಿ ಅವನನ್ನು ಮನೆಯ ಸೇವಕನಾಗಿ ಮಾಡಿಕೊಳ್ಳುತ್ತಾಳೆ. ಇಲ್ಲಿಂದ ಅವನು ಆಕೆಯ ಅಡಿಯಾಳಾಗಿ ಕೆಲಸ ಮಾಡುವುದನ್ನು ಕಲಿಯುತ್ತಾನೆ. ಈ ಸಮಾಚಾರ ತಿಳಿದ ಆತನ ಹೆಂಡತಿ ವೇಷ ಬದಲಿಸಿಕೊಂಡು ಹೋಗಿ ಅದೇ ಮನೆಯಲ್ಲಿದ್ದು ಅವಳ ಕಪಟವನ್ನು ಬಯಲು ಮಾಡಿ ಆಕೆಯನ್ನು ಈ ಕಥೆಯ ಒಟ್ಟು ಬಂಧಕ್ಕೆ ಈ ತಿರುವು ಹೊಸ ಆಶಯವನ್ನು ಕಟ್ಟಿಕೊಡುತ್ತಿದೆ. ನಂತರ ಅವಳೂ ವೇಷ ಧರಿಸಿಕೊಂಡು ಒಂದೊಂದು ಕೆಲಸಕ್ಕೂ ಒಂದೊಂದು ರೂಪಾಯಿ ಕೊಟ್ಟು ನೂರು ರೂಪಾಯಿ ಕೊಟ್ಟು ಅವನಿಗೆ ದುಡಿಮೆಯ ಮಹತ್ವವನ್ನು ತಿಳಿಸುತ್ತಾಳೆ. ಇಷ್ಟಾದರೂ ಅವನು ತನ್ನ ಹಿಂದಿನ ಪ್ರವೃತ್ತಿಯನ್ನು ಮರೆಯದೆ ಮತ್ತೆ ಮನೆಗೆ ಹೋಗಿ ಹೆಂಡತಿಗೆ ನೂರು ರೂಪಾಯಿ ತಂದಿದ್ದೇನೆ ಸೆರಗು ತೆಗೆ ಹೊಡೆಯುತ್ತೇನೆ ಎನ್ನುವ ಪ್ರತಿಕಾರವನ್ನೇ ಒಡ್ಡುತ್ತಾನೆ. ಆಗ ಕಥಾನಾಯಕಿಯಾಗಿ ಯಾವ ರೀತಿ ಗಳಿಸಿಕೊಂಡು ಬಂದೆ ಮೊದಲು ಹೇಳು ಆ ಮೇಲೆ ಹೊಡೆಸಿಕೊಳ್ಳುತ್ತೇನೆ ಎಂದಳು. ನಂತರ ಅವನಿಗೆ ತನ್ನ ತಪ್ಪಿನ ಅರಿವಾಗಿ ಪರಿವರ್ತಿತನಾಗುತ್ತಾನೆ. ಮತ್ತು ಮೆಟ್ಟಿನಿಂದ ಹೊಡೆಯುವ ತನ್ನ ಕ್ರೌರ್ಯದಿಂದ ಬಿಡುಗಡೆಯಾಗಿ ಸುಖ ಸಂಸಾರಿಯಾಗುತ್ತಾನೆ.

ಪ್ರಸ್ತುತ ಕಥೆಯಲ್ಲಿ ಪುರುಷ ಪ್ರಧಾನ ಸಮಾಜದ ಪ್ರತೀಕಳಾದ ಹೆಣ್ಣೊಬ್ಬಳು ಗಂಡನಿಗೆ ಯಾವುದೇ ರೀತಿಯ ಪ್ರತಿಭಟನೆ, ಒರಟುತನ ತೋರದೆ ಅವನ ಕ್ರಿಯೆಗಳ ಮೂಲಕವೇ ಅವನು ಬದುಕುವ ರೀತಿಯನ್ನು ತೋರಿಸುವ ಹೆಣ್ಣಿನ ಚಾಲಾಕಿತನ ಕಂಡುಬರುತ್ತದೆ.

**ಅತ್ತೆ ಸೊಸೆ ನಡುವಿನ ಸಂಬಂಧ:** ಲೋಕರೂಢಿಯಲ್ಲಿ ಅತ್ತೆ–ಸೊಸೆಯರ ನಡುವಿನ ಸಂಬಂಧ ಜಗಳಕ್ಕೆ ಕಾರಣವಾಗಿದೆ. ಈ ಅಂಶವನ್ನು ಜನಪದರು ಜನಪದ ಕಥೆಗಳಲ್ಲಿ ತುಂಬಾ ಅದ್ಭುತವಾಗಿ ಕಟ್ಟಿ ಕೊಟ್ಟಿದ್ದಾರೆ. ಮದುವೆಯಾದ ಮೇಲೆ ತನ್ನ ಮಗ ಹೆಂಡತಿಯನ್ನು ಪ್ರೀತಿಸುತ್ತಾ ತನ್ನನ್ನು ಎಲ್ಲಿ ಮರೆತು ಬಿಡುವನೋ ಎಂಬ ಅಳುಕು ತಾಯಂದಿರನ್ನು ಕಾಡುತ್ತಿರುತ್ತದೆ. ಅದಕ್ಕಾಗಿ ಮಗನ ಮೇಲೆ ನಿಯಂತ್ರಣವನ್ನು ಸಾಧಿಸಿ ಸೊಸೆಯನ್ನು ದೂರವಿಡುವುದು ಅತ್ತೆಗೆ ಬೇಕಾಗಿರುತ್ತದೆ. ಆದರೆ ಸೊಸೆಯಾಗಿ ಬಂದವಳು ಅತ್ತೆಯ ಈ ಅಧಿಕಾರ ಚಲಾವಣೆಯನ್ನು ಪ್ರಶ್ನಿಸುವುದು ಅತ್ತೆ–ಸೊಸೆಯರ ಮಧ್ಯೆ ಜಗಳಕ್ಕೆ ಕಾರಣವಾಗುತ್ತದೆ. “ಅತ್ತೆ ಸೊಸೆ” ಕಥೆಯಲ್ಲಿ ನಾಲ್ಕು ಮಂದಿ ಸೊಸೆಯರು. ಅತ್ತೆಯು ಮೇಲ್ನೋಟಕ್ಕೆ ಹೆಣ್ಣಾಗಿದ್ದರೂ ಅವಳು ಒಳಗೆ ಪುರುಷಪ್ರಧಾನವಾದ ಮನಸ್ಥಿತಿಯನ್ನು ಹೊಂದಿದವಳಾಗಿದ್ದಾಳೆ. ನಾಲ್ಕು ಜನ, ನಾಲ್ಕು ಕಡೆಯಿಂದ ಬಂದವರು, ಅವರವರ ಅಭಿರುಚಿ, ಅಭಿಪ್ರಾಯಗಳು ಭಿನ್ನ ಭಿನ್ನವಾಗಿರುತ್ತವೆ. ಇಲ್ಲಿ ಅತ್ತೆಯಾದವಳು

ಮಹಿಳೆಯೇ ಆದರೂ ಮಹಿಳೆ ಮಹಿಳೆಯನ್ನು ಎತ್ತಿ ಕಟ್ಟುವುದು, ತನ್ನ ಮಕ್ಕಳಿಗೆ ಬಿಸಿಯೂಟ ಕೊಟ್ಟು ಬೇರೆ ಮನೆಯಿಂದ ಬಂದ ಸೊಸೆಯರಿಗೆ ತಂಗಳನ್ನ ಕೊಡುವುದು ಈ ರೀತಿ ತಾರತಮ್ಯ ಮಾಡುತ್ತಾರೆ. ಅತ್ತೆ ಸೊಸೆಯರ ಮೇಲೆ ನಿರ್ಬಂಧವಿತ್ತಾಗ ಒತ್ತಡಕ್ಕೆ ಒಳಗಾದ ಕೇರಿಯ ಸೊಸೆ ಮೈಯಲ್ಲಿ ದೇವಿ ಬರುವುದು, ಕುಟುಂಬದಲ್ಲಿ ಹಾಗೂ ಸಂಬಂಧದಲ್ಲಿನ ಒತ್ತಡಗಳು ಮಾನಸಿಕವಾಗಿ, ದೆವ್ವ, ಭೂತ, ದೇವಿ, ಮೈಮೇಲೆ ಬರುವಂತೆ ಪರಿವರ್ತಿಸಲಾಗಿದೆ. ದೇವರು ಹಾಗೂ ದೆವ್ವದ ನೆಪ ಮಾಡಿ ತಮ್ಮ ಹೊಟ್ಟೆ ತುಂಬಿಸಿಕೊಳ್ಳುವುದು. ಅದೇ ರೀತಿಯಾಗಿ "ಅತ್ತೆ ನಾಲ್ಕು ಮಂದಿ ಸೊಸೆರು" ಕಥೆಯಲ್ಲಿ ಕಿರಿಯ ಸೊಸೆ 'ಪ್ರತಿಭೆ' ಬುದ್ಧಿವಂತಿಕೆ, ಆಲೋಚನಾಶಕ್ತಿ, ಬದುಕುವ ಕಲೆ ಈ ಕಥೆ ಹೇಳುತ್ತದೆ. ಒಂದು ರೂಪಾಯಿ ಬಂಡವಾಳ ಇಲ್ಲದೆ ಆಸ್ತಿಯನ್ನು ಮಾಡುವುದು ಮತ್ತು ಮುಕ್ತಿಯಿಂದ ಬದುಕುವ ಕಲೆಯನ್ನು ಇಲ್ಲಿ ನೋಡಬಹುದು. ಅತ್ತೆ ಸೊಸೆಯರ ಕುಟುಂಬದ ವೈಷಮ್ಯವನ್ನು ಹೇಳುತ್ತಾ ಈ ಕಥೆಯಲ್ಲಿ ಸೊಸೆಯು ಅತ್ತೆಯನ್ನು ಆಳುವ ಪದ್ಧತಿ ಅತ್ತಿಗೆ ಹಿಂಸೆ ಕೊಡುವುದು. ಕೆಲವೊಂದು ಕಥೆಯಲ್ಲಿ ಸೊಸೆಯಾದವಳು ಗಂಡನಿಗೆ ತನ್ನ ತಾಯಿಯ ಕರುಳನ್ನು ತರುವುದಾಗಿ ಹಟ ಮಾಡುವುದು. ಗಂಡ ಹೆಂಡತಿ ಮೇಲಿನ ಪ್ರೀತಿಗೆ ಹೆತ್ತ ತಾಯಿಯನ್ನೇ ಮರೆತು ಅವಳನ್ನು ಕೊಂದು ಕರುಳನ್ನು ತರುವ ಹೀನಾಯಮಾನವಾದ ಕೃತ್ಯವನ್ನು ಈ ಕಥೆಗಳಲ್ಲಿ ಚಿತ್ರಿಸಲಾಗಿದೆ.

**ಅತ್ತಿಗೆ–ನಾದಿನಿಯರ ಸಂಬಂಧ:** ಇಲ್ಲಿ ಹೆಣ್ಣು ಇನ್ನೊಬ್ಬ ಹೆಣ್ಣನ್ನೇ ಸಹಿಸದಿರುವ ಗುಣವನ್ನು ಕಾಣಬಹುದು. "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಎಂಬ ಮಾತಿನಂತೆ ನಾದಿನಿಗೆ ಅತ್ತಿಗೆ ಹಿಂಸೆ ಕೊಡುವುದು, ಸ್ವಂತ ಅಣ್ಣನಿಂದಲೇ ಬಾವಿಯಲ್ಲಿ ನೂಕಿಸಿ ಸಾಯಿಸುವ ದೃಶ್ಯ ಹೀನಕರವಾಗಿದೆ. "ಬಾವಿಯಲ್ಲಿ ತಂಗಿ ಕಮಲದ ಹೂವಾಗಿ ಅರಳುವುದು, ಅತ್ತೆ ಬಾವಿಯಲ್ಲಿನ ಕಮಲದ ಹೂವನ್ನು ಮುಟ್ಟಲು ಬಂದಾಗ "ಮುಟ್ಟಬ್ಯಾಡ ಅತ್ತೀ, ಮುಟ್ಟಿದರೆ ಕೆಟ್ಟೇನು ಜರದ ಸೀರಿ ಸಲುವಾಗಿ ಜೀವ ಕೊಟ್ಟೇನು" ಅಣ್ಣ ಮುಟ್ಟಲು ಬಂದಾಗ "ಮುಟ್ಟಬ್ಯಾಡ ಅಣ್ಣ ಹೊಲೆಯ ಮುಟ್ಟಿದರೆ ಕೆಟ್ಟೆನು ಜರದ ಸೀರಿ ಸಲುವಾಗಿ ಪ್ರಾಣ ತೆಗೆದಿಯಾ" ಎಂದು ಹೇಳುವುದು.

ಸಾಮಾನ್ಯವಾಗಿ ಬಡವಿಯಾದ ಗಂಡನ ತಂಗಿ ನಾದಿನಿಯೂ ತನ್ನ ಮಕ್ಕಳೊಂದಿಗೆ ನಾಲ್ಕು ದಿನ ತೌರಿನಲ್ಲಿದ್ದುಕೊಂಡು ಹೋಗಲು ಅಥವಾ ಜಾತ್ರೆ ಹಬ್ಬ ಮಾಡಲು ಮನೆಗೆ ಬಂದರೆ, ಅತ್ತಿಗೆಯರು ಅಸಹಾಯಕಳಾದ ಈ ಹೆಣ್ಣನ್ನು ಬಹಳ ದುಡಿಸುತ್ತಾರೆ. ಆಕೆ ಮನೆಗೆ ಬಂದಾಗ ಮನೆಯೊಳಗೆ ಕರೆಯದೇ, ಊಟಕ್ಕೆ ಕೊಡದ ಎಷ್ಟೋ ನಿದರ್ಶನಗಳನ್ನು ನೋಡಬಹುದು. ಹೆಣ್ಣಿಗೆ ಪ್ರೇಮಾದರಗಳಿಂದ ತುಂಬಿದ ಮನೆ ತವರುಮನೆ, ಅಣ್ಣ ತಂಗಿಯ ಪವಿತ್ರವಾದ ಬಾಂಧವ್ಯ, ಸೋದರಿಕೆಯ ಪ್ರೀತಿ–ವಾತ್ಸಲ್ಯಗಳು ಅಮೂಲ್ಯವಾದವು. ತವರಿನಲ್ಲಿ ಏನೇ ಕೊರತೆಯಾಗಲಿ ಅವಳು ಶಪಿಸುವುದಿಲ್ಲ.

**ಮಾವ–ಸೊಸೆ:** ಮಗನಿಗೆ ಹೆಂಡತಿಯಾಗಿ ಬಂದವಳನ್ನು ಸೊಸೆಯಾಗಿ ನಡೆಸಿಕೊಳ್ಳುವುದು ಜನಪದರ ಕೌಟುಂಬಿಕ ಜೀವನದಲ್ಲಿದೆ. ಅವಿಭಕ್ತ ಕುಟುಂಬ ಪದ್ಧತಿಯನ್ನು ಪ್ರತಿನಿಧಿಸುವ ಕಥೆಗಳಲ್ಲಿ ತಂದೆ–ತಾಯಿ, ಮಕ್ಕಳು, ಮಗ–ಸೊಸೆ, ಮೊಮ್ಮಕ್ಕಳು ಆದಿಯಾಗಿ ಎಲ್ಲರೂ ಒಟ್ಟಿಗೆ ಬದುಕುವ ಪರಿಪಾಠವಿದೆ. ಹೀಗೆ

ಬದುಕುವಾಗ ಮನೆಯ ಯಜಮಾನನಾಗಿರುವ ಅತ್ತೆ-ಮಾವನವರು, ಬೇರೊಂದು ಮನೆಯ ಮಗಳು ತಮ್ಮ ಮನೆಗೆ ಸೊಸೆಯಾಗಿ ಬಂದಾಗ ಆಕೆಯನ್ನು ತಮ್ಮ ಮಗಳಾಗಿ ಪ್ರೀತಿಯಿಂದ ನಡೆಸಿಕೊಳ್ಳುವುದೇ ಅತ್ತೆ-ಮಾವ ಮತ್ತು ಸೊಸೆಯರ ಸಂಬಂಧಗಳಲ್ಲಿ ಅಡಕವಾಗಿದೆ. ಜಾಣ ಸೊಸೆ ಕಥೆಯಲ್ಲಿ ಇದ್ದೊಬ್ಬ ಮಗನಿಗೆ ತಂದೆ ಮದುವೆ ಮಾಡುವ ಮೊದಲು ತನ್ನ ಮಗನನ್ನು ಬಂದವಳು ಮಮತೆಯಿಂದ ನೋಡಿಕೊಳ್ಳುವಳೋ ಇಲ್ಲವೋ ಎಂಬುದನ್ನು ಪರೀಕ್ಷೆ ಒಡ್ಡಿ ಅವಳ ಬಾಣಂತನಕ್ಕೆ ಸೈದೂಗಿ, ಆಕೆಯನ್ನು ತನ್ನ ಸೊಸೆಯನ್ನಾಗಿ ತಂದುಕೊಳ್ಳುವನು.

ಹೀಗೆ ಜನಪದ ಕಥೆಗಳಲ್ಲಿ ಕುಟುಂಬ ಜೀವನದ ಎಲ್ಲ ವಿವರಗಳು ಸಂದರ್ಭೋಚಿತ ಸನ್ನಿವೇಶಗಳೊಂದಿಗೆ ಪ್ರಕಟಗೊಂಡಿವೆ. ಕುಟುಂಬದೊಳಗೆ ತಂದೆ-ತಾಯಿ, ತಂದೆ-ಮಗ, ತಂದೆ-ಮಗಳು, ತಾಯಿ-ಮಗಳು, ಅಣ್ಣ ತಮ್ಮಂದಿರು, ಅಕ್ಕ-ತಂಗಿಯರು, ಮಾವ ಸೊಸೆ, ಅಳಿಯ, ನೆಂಟರಿಷ್ಟರು, ಕುಲಬಾಂಧವರು ಹೇಗೆ ಪರಸ್ಪರ ರಕ್ತಸಂಬಂಧಿಗಳಾಗಿ ಕೂಡಿ ಬಾಳ್ವೆ ನಡೆಸುತ್ತಾರೆಂಬುದನ್ನು ಈ ಕಥೆಗಳಲ್ಲಿ ಬಿಂಬಿಸಲಾಗಿದೆ. ಕುಟುಂಬದಲ್ಲಿ ಸೌಹಾರ್ದ ಬಾಳ್ವೆ ನಡೆಸುವುದು ಎಲ್ಲರ ಇಚ್ಛೆಯಾದರೂ ಒಮ್ಮೊಮ್ಮೆ ವಿಪರೀತ ಸನ್ನಿವೇಶ ಸಂದರ್ಭಗಳು ಎದುರಾಗಿ ಕುಟುಂಬಗಳ ನಡುವೆ ಸಂಘರ್ಷಗಳನ್ನು ಉಂಟುಮಾಡಬಹುದು. ಈ ಸಂಘರ್ಷದ ಚಿತ್ರವನ್ನು ಜನಪದ ಕಥೆಗಳು ಒಳಗೊಂಡಿವೆ. ಕೊನೆಯಲ್ಲಿ ಕಥೆಗಳನ್ನು ಸುಖಾಂತವಾಗಿ ಮುಕ್ತಾಯಗೊಳಿಸುವಾಗ ಜನಪದರು ಸಂಘರ್ಷ ದೂರಾಗಿ ನೆಮ್ಮದಿಯ ವಾತಾವರಣ ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ನೆಲೆಸಬೇಕೆಂಬುದನ್ನು ಆ ಮೂಲಕ ಪ್ರತಿಪಾದಿಸುತ್ತಾರೆ.

**ಅಡಿಟಿಪ್ಪಣಿ**


೧. ದಂಡೂರ್.ಆರ್.ಎನ್. ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ-ಪಾತ್ರಗಳು, ಪ್ರಮೀಳಾ ಪ್ರಕಾಶನ, ಬಿಜಾಪುರ, ೨೦೦೬

೨. ನಾಗಭೂಷಣಸ್ವಾಮಿ ಓ.ಎಲ್., ವಚನ ಸಾವಿರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು. ೨೫೭, ಪದ್ಯ-೮೬೯

೩. ಲಕ್ಷ್ಮಣರಾವ್ ಜೆ.ಆರ್. ಮತ್ತು ಅಡ್ಯನಡ್ಕ ಕೃಷ್ಣಭಟ್, ವಿಜ್ಞಾನ ಶಬ್ದಕೋಶ, ಪು. ೨೪೦-೨೪೨

೪. ಶಿವಾನಂದ ಎಸ್., ಕನ್ನಡ ಜೈನ ಪುರಾಣಗಳು ಒಂದು ಸಮಗ್ರ ಅಧ್ಯಯನ, ಕ.ಸಾ.ಪ. ಬೆಂಗಳೂರು, ೨೦೦೮, ಪು. ೪೧

೫. ಶ್ರೀಮತಿ ಎಚ್.ಎಸ್. ದ ಸೆಕೆಂಡ್ ಸೆಕ್ಸ್, ಸಿಮೋನ್ ದ ಬೋವಾ, ಬರಹ ಪಬ್ಲಿಕೇಷಿಂಗ್ ಹೌಸ್, ಬೆಂಗಳೂರು, ೨೦೦೭, ಪು. ೪೫

೬. ಅದೇ ಪು. ೫೩

೭. ಅದೇ ಪು. ೫೪

೮. ರುಕ್ಮಿಣಿ ಎಂ.ಕೆ., ಜನಪದ ಕಥನಗೀತೆಗಳಲ್ಲಿ ಮಹಿಳೆ ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

೯. ವೆಂಕಟಸುಬ್ಬಯ್ಯ ಜಿ., ಇಗೋ ಕನ್ನಡ ಸಾಮಾಜಿಕ ನಿಘಂಟು, ನವಕರ್ನಾಟಕ, ಪ್ರಕಾಶನ, ೧೯೯೭, ಪು. ೪೩೫

೧೦. ಕನ್ನಡ-ಕನ್ನಡ ನಿಘಂಟು, ಪಿ.ಸಿ.ಎಸ್. ಬುಕ್ ಡಿಪೋ ಪಬ್ಲಿಕೇಷನ್ಸ್, ಸ್ಟೇಷನ್ ರೋಡ್, ಗದಗ, ೨೦೦೭, ಪು. ೬೭೧

೧೧. ಶ್ರೀಮತಿ ಎಚ್.ಎಸ್. ದ ಸೆಕೆಂಡ್ ಸೆಕ್ಸ್, ಸಿಮೋನ್ ದ ಬೋವಾ, ಬರಹ ಪಬ್ಲಿಕೇಷಿಂಗ್ ಹೌಸ್, ಬೆಂಗಳೂರು, ೨೦೦೭, ಪು. ೫೮

೧೨. 'ಹೆಣ್ಣು' ಧರ್ಮ ಕನ್ನಡ ವಿಶ್ವವಿದ್ಯಾಲಯ, ವಿಶ್ವಕೋಶ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು. ೪೯೬

೧೩. ಅದೇ, ಪು. ೪೯೬

೧೪. ಸರೋಜಿನಿ ಮಹಿಷಿ, ಕರ್ನಾಟಕ ಕವಿಯತ್ರಿಯರು, ಕರ್ನಾಟಕ ಸಹಕಾರಿ ಸಂಘ, ೧೯೬೫

೧೫. ವೀರಣ್ಣ ಸಿ., ಕನ್ನಡ ಕಾವ್ಯ ಕಂಡ ಹೆಣ್ಣು, ಶಕ್ತಿ ಮುದ್ರಣ, ಬೆಂಗಳೂರು, ೧೯೯೯ ಪು. ೧೩

೧೬. ಜ್ಯೋತ್ಸ್ನಾಕಾಮತ್, ಮಹಿಳೆ ಒಂದು ಅಧ್ಯಯನ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೯, ಪು. ೩೧

೧೭. ವೀರಣ್ಣ ಸಿ., ಕನ್ನಡ ಕಾವ್ಯ ಕಂಡ ಹೆಣ್ಣು, ಶಕ್ತಿ ಮುದ್ರಣ, ಬೆಂಗಳೂರು, ೧೯೯೯ ಪು. ೧೫

೧೮. ಚಕ್ರಕೋಡಿ ಈಶ್ವರಶಾಸ್ತ್ರಿ, ಮನುಸ್ಮೃತಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೯, ಪು. ೨೩೨

೧೯. ಅದೇ ಪು. ೨೩೩

೨೦. ರಾಘವನ್ ವಿ. ಅನುವಾದ ಮಾಳವಾಡ ಎಸ್.ಎಸ್. ಯುಗಯಾತ್ರಿ ಭಾರತೀಯ ಸಂಸ್ಕೃತಿ, ಸಂಪುಟ೧-೨, ಪ್ರಧಾನ ಸಂಪಾದಕರು, ಕೆ.ವಿ. ಪುಟ್ಟಪ್ಪ, ಪ್ರಸಾರಾಂಗ, ಮೈಸೂರು, ೧೯೭೦-೭೧

೨೧. ಜ್ಯೋತ್ಸ್ನಾಕಾಮತ್, ಮಹಿಳೆ ಒಂದು ಅಧ್ಯಯನ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧, ಪು. ೧೪, ಪು. ೨೫೮

೨೨. ವೀರಣ್ಣ ಸಿ., ಕನ್ನಡ ಕಾವ್ಯ ಕಂಡ ಹೆಣ್ಣು, ಶಕ್ತಿ ಮುದ್ರಣ, ಬೆಂಗಳೂರು, ೧೯೯೯ ಪು. ೨೯

೨೩. ಅದೇ ಪು. ೩೦

೨೪. 'ಹೆಣ್ಣು' ಧರ್ಮ ಕನ್ನಡ ವಿಶ್ವವಿದ್ಯಾಲಯ, ವಿಶ್ವಕೋಶ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು. ೪೧೦

೨೫. ರಾಮಾಯಣ ಅಧ್ಯಾಯ-೧, ಪು. ೭೨

೨೬. ಮಹಾಭಾರತ ಅಧ್ಯಾಯ-೧, ಪು. ೭೧

೨೭. ಜ್ಯೋತ್ಸ್ನಾಕಾಮತ್, ಮಹಿಳೆ ಅಂದು-ಇಂದು, ಪ್ರೇಮಸಾಯಿ ಪ್ರಕಾಶನ, ಬೆಂಗಳೂರು, ೨೦೦೧, ಪು. ೧೦

೨೮. ಜ್ಯೋತ್ಸ್ನಾಕಾಮತ್, ಮಹಿಳೆ ಒಂದು ಅಧ್ಯಯನ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೯, ಪು. ೩೫

೨೯. 'ಹೆಣ್ಣು' ಧರ್ಮ ಕನ್ನಡ ವಿಶ್ವವಿದ್ಯಾಲಯ, ವಿಶ್ವಕೋಶ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೫೦೪

೩೦. ಶಾಂತಿನಾಥ ದಿಬ್ಬದ, ಜೈನಸಂಸ್ಕೃತಿ ಸಮೀಕ್ಷೆ, ರತ್ನತ್ರಯ ಪ್ರಕಾಶನ, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೩, ಪು. ೬೦

೩೧. ಅದೇ ಪು. ೫೮

೩೨. ಅದೇ, ಪು. ೫೮

೩೩. ಅದೇ ಪು. ೬೦

೩೪. ಅದೇ ಪು. ೬೧

೩೫. ಕೈಲಾಸ ಚಂದ್ರಶಾಸ್ತ್ರಿ, ಜೈನಧರ್ಮ, ಪು. ೩೩೮

೩೬. ಶರೀಫಾ ಕೆ. ಇಸ್ಲಾಂ ದೃಷ್ಟಿಯಲ್ಲಿ ಸ್ತ್ರೀ (ಮಾತೋಶ್ರೀ) ಪು. ೨೯೩

೩೭. ಸಾ.ರಾ. ಅಬೂಬಕರ್, ಧರ್ಮ ಮತ್ತು ಮಹಿಳೆ, ಸಂಕ್ರಮಣ, ಪು. ೩೩

೩೮. ನಾಗಭೂಷಣಸ್ವಾಮಿ ಓ.ಎಲ್. 'ವಚನ ಸಾವಿರ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು. ೨೫೭

೩೯. ಅದೇ ಪು. ೮೬

೪೦. ಅದೇ ಪು. ೩೧೫

೪೧. ಸುಮಿತ್ರಾಬಾಯಿ ಬಿ.ಎಸ್. ವಚನಗಳಲ್ಲಿ ಮಹಿಳಾ ದೃಷ್ಟಿಕೋನ, ಶತಮಾನದ ಸಂಶೋಧನೆ, ಸಂ. ಎನ್.ಎಸ್. ತಾರಾನಾಥ, ಕನ್ನಡ ಸಾಹಿತ್ಯ ಅಕಾಡೆಮಿ, ಅನುಭವ ಪ್ರಿಂಟರ್ಸ್, ಬೆಂಗಳೂರು, ೨೦೦೧, ಪು. ೮೭೪

೪೨. ನಾಗಭೂಷಣಸ್ವಾಮಿ ಓ.ಎಲ್. 'ವಚನ ಸಾವಿರ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು. ೨೨೪

೪೩. ಚನ್ನಬಸವ ಪುರಾಣ, ಪು. ೧೨೧

೪೪. ಮಧುಕರ ಯಕ್ಕುಂಡಿ, ಪುರಂದರದಾಸ-ಕೀರ್ತನ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪, ಪು. ೧೩೬

೪೫. ಜನಪದ ಸಾಹಿತ್ಯ ದರ್ಶನ, ಪು. ೧೧೦

೪೬. ಗೋರೂರು ರಾಮಸ್ವಾಮಿ, ಅಯ್ಯಂಗಾರ್, ಹಳ್ಳಿಯ ಹಾಡುಗಳು, ಪು.೧೧೧

೪೭. ಅದೇ ಪು. ೧೨೫

೪೮. ಸಂಚಿಹೊನ್ನಮ್ಮ, ಸಂ. ಡಿ. ಚಂಪಾಬಾಯಿ 'ಹದಿಬದೆಯ ಧರ್ಮ', ೨೦೦೮, ೪ನೇ ಸಂಧಿ, ಪು ೪೪

೪೯. ಅದೇ ೫ನೇ ಸಂಧಿ, ಪು. ೫೮

೫೦. ತ್ರಿಪದಿಗಳ ರಗಳೆ ಮತ್ತು ಜನಪದ ಸಾಹಿತ್ಯ, ಪು. ೧೨೮

೫೧. ಗೋರೂರು ರಾಮಸ್ವಾಮಿ, ಅಯ್ಯಂಗಾರ್, ಹಳ್ಳಿಯ ಹಾಡುಗಳು, ಪು. ೧೨೫

೫೨. ಜನಪದ ತ್ರಿಪದಿಗಳಲ್ಲಿ ಜೀವನ ಮೌಲ್ಯ, ಪು. ೧೭

೫೩ ಗೋರೂರು ರಾಮಸ್ವಾಮಿ, ಅಯ್ಯಂಗಾರ್, ಹಳ್ಳಿಯ ಹಾಡುಗಳು, ಪು. ೧೦೯

೫೪. ಕನ್ನಡ ಜನಪದ ಕಾವ್ಯ, ಪು. ೨೦

೫೫. ಜನಪದ ಸಾಹಿತ್ಯ ದರ್ಶನ, ಪು. ೧೩೨

೫೬. ಕನ್ನಡ ಕಾವ್ಯ ಕಂಡ ಹೆಣ್ಣು, ಪು. ೬೯

೫೭. ಹಿರೇಮಠ ಸಿ. ಮಲ್ಲಿನಾಥ ಪುರಾಣ ಅಶ್ವಾಸ, ಪು. ೬೯

೫೮. ಗೋರೂರು ರಾಮಸ್ವಾಮಿ, ಅಯ್ಯಂಗಾರ್, ಹಳ್ಳಿಯ ಹಾಡುಗಳು, ಪು. ೧೦೨

೫೯. ಅದೇ ಪು. ೧೦೨-೧೦೩

೬೦. ವರದರಾಜನ್ ಕೆ.ಎಂ., ಕನ್ನಡ ಜನಪದ ಕಥನ ಕಾವ್ಯಗಳು, ಸಂವಹನ ಪ್ರಕಾಶನ, ಮೈಸೂರು, ೨೦೧೨, ಪು. ೬೫

೬೧. ಜೀಶಂಪ ಜಾನಪದ ಕಂಡ ಕಾವ್ಯಗಳು, ಪು. ೩

೬೨. ವರದರಾಜನ್ ಕೆ.ಎಂ., ಕನ್ನಡ ಜನಪದ ಕಥನ ಕಾವ್ಯಗಳು, ಸಂವಹನ ಪ್ರಕಾಶನ, ಮೈಸೂರು, ೨೦೧೨, ಪು. ೬೬

೬೩. ರಾಜಶೇಖರ ಪಿ.ಕೆ., ಮಲೆಯ ಮಾದೇಶ್ವರ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೬೪. ಪುರುಷೋತ್ತಮ ಬಿಳಿಮಲೆ, ಕನ್ನಡ ಸಾಹಿತ್ಯ ಮತ್ತು ಮಹಿಳೆ ಜಾನಪದದಲ್ಲಿ ಮಹಿಳೆ ಸಂ. ಸಬಿಹ ಭೂಮಿಗೌಡ, ಮಲ್ಲಿಕಾಘಂಟಿ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬, ಪು ೧೨೩–೧೨೮

೬೫. ಅದೇ ಪು. ೧೨೩–೧೨೮

೬೬. ಬಸವರಾಜ ಪೊಲೀಸ್ ಪಾಟೀಲ್ ಮತ್ತು ಜಗನ್ನಾಥ ಹೆಬ್ಬಾಳೆ, ಜನಪದ ಕಥೆಗಳ ಸಂಗ್ರಹ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫, ಪ್ರಸ್ತಾವನೆ, ಪು. ೨

೬೭. ಶ್ರೀಮತಿ ಎಚ್.ಎಸ್. ದ ಸೆಕೆಂಡ್ ಸೆಕ್ಸ್, ಸಿಮೋನ್ ದ ಬೋವಾ, ಬರಹ ಪಬ್ಲಿಕೇಷಿಂಗ್ ಹೌಸ್, ಬೆಂಗಳೂರು, ೨೦೦೭, ಪು. ೪೫

೬೮. ಬಿರಾದಾರ ಎಂ.ಜಿ. ಲಕ್ಕಿ ಎಂ.ಎಸ್. ಹೆಂಡಿ ಬಿ.ಬಿ., ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೧೯೯೯, ಪು ೯೬

೬೯. ಅದೇ ಪು. ೯೬

೭೦. ಅದೇ ಪು. ೯೬

೭೧. ಜೀನಹಳ್ಳಿ ಸಿದ್ಧಲಿಂಗಪ್ಪ 'ಸ್ತ್ರೀವಾದಿ ಜನಪದ ಕಥೆಗಳು' ಪ್ರೇಮ ಪ್ರಕಾಶನ, ದಾವಣಗೆರೆ, ೨೦೦೭, ಪ್ರಸ್ತಾವನೆ, ಪು. ೮

೭೨. ಅದೇ ಪು. ೧೨

೭೩. ಅದೇ ಪು. ೧೩

೭೪. ಅದೇ ಪು. ೧೭

೭೫. ಅದೇ ಪು. ೧೭

೭೬. ಗುರುಮೂರ್ತಿ ಕೆ.ಜಿ. 'ಜಾನಪದ ರೀತಿ ನೀತಿಗಳು' ಸ್ನೇಹಾ ಪಬ್ಲಿಷಿಂಗ್ ಹೌಸ್, ಬೆಂಗಳೂರು, ೨೦೧೨, ಪು. ೧೬

* * *

ಅಧ್ಯಾಯ ನಾಲ್ಕು

# ಹೈದರಾಬಾದ್ ಕರ್ನಾಟಕದ ಜನಪದ ಕಥಾಸಾಹಿತ್ಯದಲ್ಲಿ ಪ್ರೇಮದ ಸ್ವರೂಪ

ಜನಪದರ ಬಾಳಿನಲ್ಲಿ ಪ್ರೇಮ, ಪ್ರೀತಿ, ಪ್ರಣಯ ವಿಶೇಷ ಸ್ಥಾನ ಪಡೆದಿದೆ. ಹೆಣ್ಣು-ಗಂಡುಗಳ ಆಸರಕಿ, ಬ್ಯಾಸರಕಿಯಲ್ಲಿ ಇಣುಕು ಹಾಕುವ ಚೇಷ್ಟೆಗಳಿಗೆ ಪ್ರಣಯದ ಪ್ರೀತಿಯ ಸೋಪಾನಕ್ಕೆ ಅಡಿಪಾಯ ಆಗಿದೆ. ಪ್ರೇಮ ಹರೆಯದ ಜೀವಿಗಳಿಗೆ ಸ್ವಾಭಾವಿಕ. ಹರೆಯದ ಗಂಡು ಹೆಣ್ಣನ್ನು, ಹರೆಯದ ಹೆಣ್ಣು ಗಂಡನ್ನು ನೋಡಿ ಆನಂದಪಡುವುದಲ್ಲದೆ, ತೃಪ್ತಿ ಹೊಂದಲು ಒಂದನ್ನೊಂದು ಬಯಸುವುದು ಸಹಜ. ರಸನಿಮಿಷಗಳ ರಸಿಕರೂ, ರಸವೇಶಗಳ ಬಂಟರೂ ಆದ ನಮ್ಮ ಜನಪದರಲ್ಲಿ ಪ್ರೇಮವು ಒಂದು ರಸೋನ್ಮತ್ತ ನೀತಿಯಾಗಿದೆ. ಜನಪದರ ಜೀವನವು ಪಟ್ಟಣಿಗರಂತೆ ಕೃತಕವಲ್ಲ. ಪಟ್ಟಣಿಗರ ಪ್ರೇಮ ಮಾರ್ಗವೇ ಬೇರೆ. ಜನಪದರಲ್ಲಿ ಪ್ರೇಮ ಬರುವುದು ಚಿಗಿತ ಮಾಮರಕ್ಕೆ ಮೊಟ್ಟೆ ಕೂತಂತೆ. ಅಲ್ಲಿ ಮೋಸ, ಮುಚ್ಚುಮರೆಗಳಿಲ್ಲ; ಅಷ್ಟು ಸಹಜವಾಗಿದೆ. ಜನಪದರ ತರುಣ ಉತ್ಸಾಹಿಗಳು ನಿತ್ಯ ಜೀವನದಲ್ಲಿ ಒಬ್ಬರಿಗೊಬ್ಬರು ಅಂದರೆ ಗಂಡು-ಹೆಣ್ಣುಗಳು ಕೂಡಿಯೇ ಕೆಲಸ ಕಾರ್ಯಗಳನ್ನು ಮಾಡಬೇಕಾಗುತ್ತದೆ. ನೆರೆತು ಮೈದುಂಬಿದ ಈ ಪ್ರಾಯದ ಗಂಡು-ಹೆಣ್ಣು ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದಾಗ ಆ ನಿಸರ್ಗದ ಬಯಲಲ್ಲಿ ಸಹಜವಾಗಿ ಪ್ರೇಮಾಂಕುರಿಸಿ ಬೆಳೆದು ಪ್ರಣಯಕ್ಕೆ ನಿಲ್ಲುವುದು. ಇದೇ ಅವರ ಪ್ರೇಮದ ಆರಂಭ. ಇದಕ್ಕೆ ನಾವು ಪ್ರಣಯಿಗಳ ಪ್ರಣಯ ವೆಂದು ಕರೆಯಬಹುದು. ಈ ಪ್ರೇಮವು ಒಮ್ಮೊಮ್ಮೆ ದಾಂಪತ್ಯ ಜೀವನಕ್ಕಿಂತಲೂ ಮಧುರ ವಾದುದೆಂಬುದನ್ನು ಮರೆಯಲಾಗದು. ಪ್ರೀತಿ, ಪ್ರೇಮ, ಪ್ರಣಯ ಆರಂಭಗೊಂಡು ಮುಂದೆ ದಾಂಪತ್ಯ ಜೀವನಕ್ಕೆ ಅಡಿಗಲ್ಲಾಗುತ್ತದೆ ಎಂಬುದನ್ನು ಜನಪದ ಕಥಾ ಸಾಹಿತ್ಯದ ಮೂಲಕ ತಿಳಿಯಬಹುದು.

ಪ್ರೇಮದ ಉದ್ದೇಶ ಕೇವಲ ಹೆಣ್ಣು-ಗಂಡುಗಳ ಮಿಲನ. ಎಂದರೆ ಈ ಮಾತಿನ ಅರ್ಥ ಸಂಕುಚಿತವಾಗ ಬಹುದೇನೋ? ಹದಿಹರೆಯದ ಗಂಡು-ಹೆಣ್ಣುಗಳಲ್ಲಿ ಕಾಮನು ಜಾಗೃತನಾದಾಗ ಒಬ್ಬರನ್ನೊಬ್ಬರು ದೇಹ

ಸುಖ ಬಯಸುವುದು ಸ್ವಾಭಾವಿಕವಾದರೂ ಈ ಮೂಲಕ ತಮ್ಮ ಜೀವನ ಸಂಗಾತಿಯ ಆಯ್ಕೆ ಮಾಡಿಕೊಳ್ಳಲು ಮುಂದಾಗುತ್ತಾರೆ. ಆದರೆ ದೇಹ ಸುಖ ಪಡೆಯ ಬಯಸುವ ಅವಿವಾಹಿತ ಹರೆಯದ ಹೆಣ್ಣು-ಗಂಡುಗಳಲ್ಲಿ ಕಂಡು ಬರುವ ಪ್ರೇಮಲಾಪಗಳು ವೈವಿಧ್ಯಮಯವಾಗಿವೆ. ತಮ್ಮ ನಿಷ್ಠೆ, ಒಲವು, ಧೈರ್ಯ, ಸಾಹಸ, ದುಃಖದುಮ್ಮಾನ ಹಾಗೂ ಜೀವನ ನಿರ್ವಹಣೆಯನ್ನು ಆಗ ಅವರಲ್ಲಿ ಗುರುತಿಸಬಹುದಾಗಿದೆ.[೧]

ವಿವಾಹಪೂರ್ವ ಪ್ರೇಮ ಕದ್ದು ಮುಚ್ಚಿ ಮಾಡುವ ಪ್ರೀತಿಯಾಗಿದೆ. ಇದನ್ನು ಸಮಾಜ ಸಮ್ಮತಿಸುವುದಿಲ್ಲ. ಆದರೆ ಒಬ್ಬ ಗಂಡು ಒಬ್ಬ ಹೆಣ್ಣನ್ನು ಮದುವೆಯಾಗುವ ಮುಂಚೆ ಒಬ್ಬರಿಗೊಬ್ಬರು ಅರಿತು ಗುಣಾವಗುಣಗಳನ್ನು ತೂಗಿ ನೋಡಿ ಮದುವೆಯಾಗುವುದು ಸರಿಯಾದದ್ದೇ. ಹೀಗೆಂದ ಮಾತ್ರಕ್ಕೆ ಪ್ರೇಮದಲ್ಲಿ ತೊಡಗಿರುವ ಎಲ್ಲಾ ಗಂಡು-ಹೆಣ್ಣುಗಳು ತಮ್ಮ ಜೀವನವನ್ನು ವಿವಾಹದಿಂದ ಪ್ರಾರಂಭಿಸುತ್ತಾರೆಂಬುದು ತಪ್ಪಾದಿತು. ಹೆಚ್ಚಾಗಿ ಪ್ರೀತಿ ಪ್ರೇಮಗಳನ್ನು ಸಮಾಜ ಮೊಳಕೆಯ ಹಂತದಲ್ಲಿಯೇ ಚಿವುಟಿ ಹಾಕುತ್ತದೆ. ಸಮಾಜ ಅವರನ್ನು ಬಹಿಷ್ಕರಿಸಬಹುದು. ನಿಜವಾದ ಪ್ರೀತಿಯಿರುವ ಪ್ರೇಮಿಗಳು ಅದಕ್ಕೆ ಮನ್ನಣೆ ಕೊಡದೆ ಇರಬಹುದು. ಆಗ ಅವರಿಬ್ಬರೂ ತಾವಿರುವ ಸ್ಥಳದಿಂದ ಪಲಾಯನ ಮಾಡಬೇಕಾದ ಪ್ರಸಂಗ ಬರಬಹುದು. ಪ್ರೇಯಸಿಯ ಆಸೆಗಾಗಿ ಗಂಡು ಹಗಲಿರುಳು ತಿರುಗುವುದು, ಪ್ರಿಯತಮನಿಗಾಗಿ ಅವಳು ಹಂಬಲಿಸುವ ಪರಿಯಂತೂ ಯಾರನ್ನಾದರೂ ಬೆರಗುಗೊಳಿಸುವಂತಿರುತ್ತದೆ. ಗಂಡು-ಹೆಣ್ಣಿನ ಪ್ರೇಮ ಮಾನವ ಸ್ವಭಾವಕ್ಕನುಸಾರವಾಗಿ ಬಂದಿದೆ. ಈ ಪ್ರೇಮವೇ ದಾಂಪತ್ಯ ಜೀವನಕ್ಕೆ ಸೋಪಾನವಾಗಿದೆ.

ವಿವಾಹದ ಚೌಕಟ್ಟಿನ ಹೊರಗೆ ಮತ್ತು ಒಳಗೆ ಇರಬಹುದಾದ ಸಂಬಂಧಗಳ ಗ್ರಹಿಕೆಯನ್ನು ನೋಡುವ ಪ್ರಯತ್ನ ಇದಾಗಿದೆ. ಮದುವೆಯಾದ ಮೇಲೆ ಇರುವ ಸಂಬಂಧಗಳು ಮುಂದುವರಿಯುವುದನ್ನು ಹಾಗೂ ಸಂಬಂಧದ ಚೌಕಟ್ಟನ್ನು ಮೀರಿ ಇವರ ಪ್ರೇಮ ಅಮರವಾದದ್ದು ಹಾಗೂ ಶಾಶ್ವತವಾದದ್ದು ಎಂಬುದು ಇಲ್ಲಿ ಚರ್ಚೆಗೆ ಒಳಪಡುವ ಸಂಗತಿಯಾಗಿದೆ. ಪ್ರೀತಿ, ಪ್ರೇಮ, ಪ್ರಣಯ ಭಾವಗಳು ಜೀವಿಗಳಿಗೆ ಉಸಿರಾಟದಷ್ಟೇ ಸ್ವಾಭಾವಿಕ. ಲೋಕದಲ್ಲಿ ಪ್ರಣಯಾನುಭವ ಇಲ್ಲದವರನ್ನು ಕಾಣಬಹುದೇನೋ ಆದರೆ ಪ್ರಣಯ ಭಾವನೆ ಇಲ್ಲದವರು ವಿರಳವೆಂದೇ ಹೇಳಬಹುದು. ಜೀವನದಲ್ಲಿ ಶೃಂಗಾರ ಪ್ರಣಯ ಭಾವನೆಗಳನ್ನು ನಿಸ್ಸಂಕೋಚವಾಗಿ ಅಭಿವ್ಯಕ್ತಿಸುವ ಜನಪದರಲ್ಲಿ ಅದು ಉತ್ಕಟವಾಗಿ ಮೈದುಂಬಿಕೊಂಡಿದೆ. ಸಾಮಾಜಿಕವಾಗಿ ಮನ್ನಣೆಗೊಂಡ ಹೆಣ್ಣು-ಗಂಡಿನ ಸಂಬಂಧ ಸಾಮಾಜಿಕ ಕಟ್ಟುಪಾಡುಗಳನ್ನು ಮೀರಿ ಒಂದಾಗುವ ಗಂಡು-ಹೆಣ್ಣಿನ ಪ್ರೇಮ ಸಂಬಂಧದ ಗಾಢತೆಯನ್ನು, ಅದರಿಂದ ಉಂಟಾಗುವ ಅನೇಕ ಬಗೆಯ ತೊಂದರೆಗಳು ಇಲ್ಲಿ ಎದುರಾಗುತ್ತವೆ. ಆದರೆ ಜನಪದ ಸಾಹಿತ್ಯದಲ್ಲಿ ಬಹುಪಾಲು ಪ್ರೇಮ-ಪ್ರೀತಿಗಳಿಗೆ ಹೆಚ್ಚಿನ ಬೆಂಬಲ ಸಿಗುವಂಥದನ್ನು ಕಾಣುತ್ತೇವೆ. ಕಥನ ಕಾವ್ಯಗಳಲ್ಲಿ ಹೆಣ್ಣಿಗೆ ಗಂಡನೇ ದೇವರು; ಅವಳೂ ಅವನನ್ನೇ ಆರಾಧಿಸಬೇಕು ಎಂದು ದಾಂಪತ್ಯದಲ್ಲಿ ಆಕೆಯೊಬ್ಬಳಿಗೆ ನಿಷ್ಠೆಯ ವ್ರತವನ್ನು ಹೊರಿಸಲಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ಬದುಕುವ ಹೆಣ್ಣಿಗೆ ಅನೈತಿಕ ಸಂಬಂಧಗಳನ್ನು ಜನಪದ ಕಥನ ಕಾವ್ಯಗಳು ಯಾವುದೇ ಅಳುಕಿಲ್ಲದೆ ಮುಜುಗರವಿಲ್ಲದೆ ದಾಖಲಿಸಿವೆ. ಕಾನೂನು ದಂಡನೆಗಳಿಗಿಂತ ಬದುಕೇ ದೊಡ್ಡದು ಎಂಬ ತೀರ್ಮಾನ ಇದರ ಹಿಂದಿರಬಹುದು. ಇದಕ್ಕೆ ಸಾಮ್ಯತೆ ಎಂಬಂತೆ ಜನಪದ ಕಥನ ಸಾಹಿತ್ಯದಲ್ಲಿಯೂ ಸಹ ಮನಗಾಣಬಹುದಾಗಿದೆ.

ಜನಪದ ಕಥೆಗಳ ವಿಭಜನೆ ಅತ್ಯಂತ ತೊಡಕಾದುದು. ಕೆಲವು ಸಂದರ್ಭಗಳಲ್ಲಿ ನಿಖರವಾಗಿ ಕಥೆಗಳನ್ನು ವರ್ಗೀಕರಣ ಮಾಡಲು ಕಷ್ಟವಾಗುತ್ತದೆ. ಆದರೆ ವಸ್ತು, ಘಟನೆ ಮತ್ತು ಆಶಯಗಳ ಆಧಾರದ ಮೇಲೆ ಅನೇಕ ವಿದ್ವಾಂಸರುಗಳು ವಿಭಜಿಸುವ ಪ್ರಯತ್ನ ಮಾಡಿದ್ದಾರೆ. ಅಂತಹ ವಿಭಜನೆಗೊಂಡ ಪ್ರಕಾರಗಳಲ್ಲಿನ ಕಥೆಗಳಲ್ಲಿ ಬರುವ ಪ್ರೇಮದ ಸ್ವರೂಪವನ್ನು ಗುರುತಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಅತಿಮಾನುಷ ಕಥೆಗಳು, ಹಾಸ್ಯ ಕಥೆಗಳು, ನೀತಿಕಥೆಗಳು ಹೀಗೆ ಹಲವಾರು ಪ್ರಕಾರಗಳಲ್ಲಿ ಇರುವ ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿ ಪ್ರೇಮದ ಸ್ವರೂಪವನ್ನು ವಿಮರ್ಶಾತ್ಮಕವಾಗಿ ಅಧ್ಯಯನಿಸಲಾಗಿದೆ.

ರಾಜ್ಯ ಆಳುವವರು ರಾಜರು, ರಾಜರುಗಳು ಮಕ್ಕಳ ಮದುವೆಯಲ್ಲಿ ನಿರತರಾಗಿರುತ್ತಾರೆ. ಅಥವಾ ಹೆಂಡತಿಯರೊಂದಿಗೆ ಸುಖವಾಗಿರುತ್ತಾರೆ. ಇಲ್ಲವೆ ಮತ್ತೊಂದು ಮದುವೆ ಮಾಡಿಕೊಳ್ಳುವಲ್ಲಿ ಅವಳಿಂದ ಮಕ್ಕಳನ್ನು ಪಡೆಯುವಲ್ಲಿ ತೊಡಗಿರುತ್ತಾರೆ. ಅನೇಕ ಕಡೆ ವಿಷಯವನ್ನು ಸರಿಯಾಗಿ ತಿಳಿಯಲು ಪ್ರಯತ್ನಿಸದೆ ಚಾಡಿಗೆ ಕಿವಿಗೊಡುತ್ತಾರೆ. ಮಕ್ಕಳ ಮದುವೆ ತುಂಬಾ ಆಡಂಬರದಿಂದ ಮಾಡಬೇಕೆಂಬುದು ಬಹಳ ಅರಸರ ಇಚ್ಛೆಯಾಗಿರುತ್ತದೆ. ತನಗಿರುವ ಏಳು ಜನ ಗಂಡು ಮಕ್ಕಳಿಗೆ ಹೆಂಡತಿಯರಾಗುವವರು ಏಳು ಜನ ಅಕ್ಕ ತಂಗಿಯರೇ ಆಗಿರಬೇಕೆಂಬುದು ಒಬ್ಬ ಅರಸನ ಆಸೆ ಆಗಿರುತ್ತದೆ. ಅಕ್ಕತಂಗಿ ತನ್ನಿಚ್ಛೆಯನ್ನು ಪ್ರಧಾನಿಗೆ ತಿಳಿಸಿ ಏಳು ಜನ ಸಹೋದರಿಯರನ್ನು ಹುಡುಕಲು ಹಚ್ಚುತ್ತಾನೆ. ಇನ್ನೊಬ್ಬ ರಾಜನಿಗೆ ಏಳು ಜನ ಹೆಣ್ಣು ಮಕ್ಕಳಿರುವುದನ್ನು ತಿಳಿದ ಪ್ರಧಾನಿ ಈ ಸಂಬಂಧವನ್ನು ಹುಡುಕಿ ತರುತ್ತಾನೆ. ಮದುವೆ ಅದ್ದೂರಿಯಿಂದ ನಡೆಯುತ್ತದೆ. ಹಾಗೆಯೇ ತಮಗೆ ಬೇಕಾದಂಥ ಹೆಣ್ಣು ಸಿಗದೇ ಇದ್ದಾಗ ಎಂತಹ ಬಡವರ ಮನೆಯ ಹೆಣ್ಣಾದರೂ ತಂದು ಮದುವೆ ಮಾಡುವ ನಿದರ್ಶನಗಳು ಸಿಗುತ್ತವೆ. ಒಬ್ಬ ರಾಜಕುಮಾರನಿಗೆ ಎಷ್ಟು ಹೆಣ್ಣು ನೋಡಿದರೂ ಸಾಲಾವಳಿ ಕೂಡಿ ಬರಲಿಲ್ಲ. ಜ್ಯೋತಿಷಿಯನ್ನು ಕೇಳಿದರೆ ದೀಪ ಹಚ್ಚದ ಮನೆಯ ಹೆಣ್ಣನ್ನು ತಂದು ರಾಜನು ತನ್ನ ಮಗನಿಗೆ ಮದುವೆ ಮಾಡುತ್ತಾನೆ. ಇಲ್ಲಿ ಮಗನ ಮದುವೆಯನ್ನು ಮಾಡಿ ಕಣ್ತುಂಬ ನೋಡಬೇಕೆಂಬ ಹಂಬಲವಷ್ಟೇ ಅಲ್ಲ. ಅರಸೊತ್ತಿಗೆಯ ಕಾಲದ ಜನ ಜ್ಯೋತಿಷವನ್ನು ಎಷ್ಟೊಂದು ಬಲವಾಗಿ ನಂಬಿದ್ದರು ಎಂಬುದಕ್ಕೆ ಇದೊಂದು ಉತ್ತಮ ಉದಾಹರಣೆ.

ರಾಜಕುಮಾರರು ಒಮ್ಮೊಮ್ಮೆ ತಾವೇ ತಮ್ಮ ಹೆಂಡತಿಯರನ್ನು ಹುಡುಕಿಕೊಂಡು ಹೋಗಿ ಮದುವೆಯಾಗುವುದು ಸಾಮಾನ್ಯ. ಆದರೆ ರಾಜರ ಹೆಣ್ಣುಮಕ್ಕಳಿಗೆ ಈ ಸ್ವಾತಂತ್ರ್ಯವಿಲ್ಲ. ಅವರು ಮನೆಯಲ್ಲಿಯೇ ಕುಳಿತು ಬೇಕಾದರೆ ಯಾವನನ್ನಾದರೂ ಮೋಹಿಸಬಹುದು. ಇಂಥವನನ್ನೇ ಮದುವೆಯಾಗುವುದಾಗಿ ಹೇಳಬಹುದು. ಅದಕ್ಕೆ ಎರಡು ಮಾತಿಲ್ಲದೆ ಅರಸನು ಮದುವೆ ಮಾಡಿಕೊಡುತ್ತಾನೆ. ಒಂದು ಕಡೆ ತನ್ನ ರೋಗ ವಾಸಿ ಮಾಡಿದವನನ್ನೇ ಮದುವೆಯಾಗಲು ಮಗಳು ಬಯಸಿದ್ದರಿಂದ ಅರಸನು ಚಕಾರವೆತ್ತದೆ ಅವನೊಂದಿಗೆ ಮದುವೆ ಮಾಡಿಕೊಡುತ್ತಾನೆ. ಇನ್ನೊಂದು ಕಡೆ ರಾಜಕುಮಾರಿಯೊಬ್ಬಳು ವಿಷದ ಬಾಳೆಹಣ್ಣು ತಿಂದು ಸುಸ್ತಾಗಿ ಬಿದ್ದಿರುತ್ತಾಳೆ. ವಿಷ ಇಳಿಸಿರುವವನನ್ನೇ ಆಕೆ ಮದುವೆಯಾಗ ಬಯಸಿದಾಗ ತಂದೆ ಮತ್ತೊಂದನ್ನಾಡದೆ ಅವನೊಂದಿಗೆ ಮದುವೆ ಮಾಡುತ್ತಾನೆ.

ರಾಜನು ತನ್ನ ಮಗಳನ್ನು ಕೊಡಬೇಕಾದರೆ ವರನ ಶ್ರೀಮಂತಿಕೆ, ಧೈರ್ಯ ಇತ್ಯಾದಿಗಳನ್ನು ಪರೀಕ್ಷೆ ಮಾಡುತ್ತಾನೆ. ಇಲ್ಲವೇ ಮಗಳೇ ಇಂತಹ ಪರೀಕ್ಷೆಯ ಷರತ್ತುಗಳನ್ನು ಒಡ್ಡುತ್ತಾಳೆ. ಈಕೆ ಕೂಡ ಅವರ ಸಾಮರ್ಥ್ಯ, ಸಾಹಸ, ಧೈರ್ಯ, ಶ್ರೀಮಂತಿಕೆ ಇತ್ಯಾದಿಗಳನ್ನೇ ಪರೀಕ್ಷಿಸಲು ಬಯಸುತ್ತಾಳೆ. ಉದಾಹರಣೆಗೆ ಇಡೀ ರಾಜಧಾನಿಗೆ ಮೂರುದಿನ ಊಟ ಹಾಕಬೇಕು. ತನ್ನ ಮನೆಯ ಉತ್ತರಕ್ಕೆ ಜಿಗಿಯಬೇಕು, ತಾನು ಜಳಕ ಮಾಡಿದ ನೀರಿಗೆ ಹತ್ತದಂತೆ ದಾಟಬೇಕು. ಹುಲಿಯನ್ನು, ರಾಕ್ಷಸನನ್ನು ಕೊಲ್ಲಬೇಕು ಮುಂತಾದ ಪಂಥಗಳನ್ನು ಒಡ್ಡುವಳು. ಇವುಗಳನ್ನು ಸಾಧಿಸಿದವನು ಬಡವನಾದರೂ ಸಾಹಸದ ಪರೀಕ್ಷೆಗಳಾಗಿರುತ್ತವೆಂಬುದು ಗಮನಾರ್ಹ ಅಂಶ. ಅದರಲ್ಲೂ ಗಂಡು ಸಂತಾನವಿಲ್ಲದ ಅರಸರು ಭಾವಿ ಅಳಿಯನನ್ನು ಇಂತಹ ಪರೀಕ್ಷೆಗಳಿಗೆ ಒಡ್ಡುವುದು ಸೂಕ್ತ ಎನಿಸುತ್ತದೆ. ಕಾರಣ ಗಂಡು ಸಂತಾನವಿಲ್ಲದ ಅರಸನ ಭಾವೀ ಅಳಿಯನು ನಾಡಿನ ಉತ್ತರಾಧಿಕಾರಿಯಾಗುತ್ತಾನೆ.

ಕಥೆಗಳಲ್ಲಿ ಬರುವ ರಾಜರು ಕೇವಲ ಮದುವೆಯಾಗದ ಸುಂದರ ಕನ್ಯೆಯರನ್ನಷ್ಟೇ ಅಲ್ಲ ತಮ್ಮ ಕಣ್ಣಿಗೆ ಬಿದ್ದ ಸುಂದರಿಯರು ಇತರರ ಹೆಂಡಂದಿರಾದರೂ ಒತ್ತಾಯದಿಂದ ಅವರನ್ನು ಅಪಹರಿಸಿಯಾದರೂ ಅವರೊಂದಿಗೆ ಕೂಡಲು ಚಿಂತಿಸುತ್ತಾರೆ. ಒಂದು ಕಥೆಯಲ್ಲಿ ಒಬ್ಬ ರಾಜನು ಸಾಹುಕಾರನ ಹೆಂಡತಿ ಮಾಳಿಗೆ ಮೇಲೆ ತಲೆಗೂದಲು ಒಣಗಲು ಬಿಟ್ಟು ಕುಳಿತಾಗ ಮೋಹಗೊಂಡು ಆಕೆಯನ್ನು ಅಪಹರಿಸಲು ಬಯಸಿ ವಿಫಲನಾಗುತ್ತಾನೆ. ಅಪಹರಣದಲ್ಲಿ ಯಶಸ್ವಿಯಾಗಿಯೂ ಒಂದು ವೇಳೆ ಆ ಹೆಣ್ಣು ಯಾವುದೇ ತರಹದ ವ್ರತ ಇಲ್ಲವೆ ಷರತ್ತುಗಳನ್ನು ಒಡ್ಡಿದರೆ ಅಪಹರಣಕಾರ ರಾಜನು ಅವಳನ್ನು ಮುಟ್ಟುವುದಿಲ್ಲ ಇಂತಹ ಇಬ್ಬಗೆಯ ವರ್ತನೆಗಳಿಂದ ಒಂದು ಕಡೆ ದುಷ್ಟನೆಂದು ಕಂಡು ಬಂದವನು ಇನ್ನೊಂದು ಕಡೆ ಒಳ್ಳೆಯವನಾಗಿ ತೋರುತ್ತಾನೆ. ಒಂದು ಕತೆಯಲ್ಲಿ ಬೇಟೆಯಾಡಲು ದಂಡು ದರಬಾರಿನೊಂದಿಗೆ ಅಡವಿಗೆ ಬಂದ ರಾಜನು ಬಾವಿಕಟ್ಟೆಯ ಮೇಲೆ ಬಿಸಿಲಿಗೆ ತಲೆಕೂದಲು ಒಣಗಲು ಬಿಟ್ಟು ಕುಳಿತ ಹೆಣ್ಣನ್ನು (ದೇವಕನ್ಯೆ) ನೋಡಿ ಮರುಳಾಗಿ ಮುದುಕಿಯೊಬ್ಬಳಿಂದ ಅಪಹರಿಸುತ್ತಾನೆ. ಆಕೆ ತಾನು ವ್ರತದಲ್ಲಿರುವುದರಿಂದ ಮೂರು ತಿಂಗಳು ತನ್ನನ್ನು ಮುಟ್ಟಬಾರದೆಂದು ಷರತ್ತು ಹಾಕುತ್ತಾಳೆ.

ರಾಣಿಯರು ರಾಜರ ಹೆಂಡತಿಯರಾಗಿ ಗಂಡನ ಸಮಸಮವಾಗಿ ಸಂಸಾರ ನಡೆಸುವವರೂ ಎಂತಹ ತೊಂದರೆ ಬಂದರೂ ಅವನಿಗೆ ಸಂಪೂರ್ಣ ನಿಷ್ಠೆಯಿಂದ ಇರುವವರೂ ಕಾಣುತ್ತಾರೆ. ಒಬ್ಬ ರಾಣಿಯನ್ನು ಮತ್ತೊಬ್ಬನು ಅಪಹರಿಸಿದಾಗ ಅವನ ಬರುವಿಕೆಗಾಗಿ ಅನೇಕ ವ್ರತಗಳನ್ನು ಮಾಡುವುದು, ಅವನು ಬರುವಿಕೆಯ ದಾರಿಗಾಗಿ ಕಾಯುವುದನ್ನು ನೋಡಬಹುದು. ಇನ್ನೊಬ್ಬಾಕೆ ತನ್ನೂರಿಗೆ ನೀರಿಲ್ಲದಿರುವಾಗ, ಜ್ಯೋತಿಷಿ ಹೇಳಿದಂತೆ ತನ್ನ ಮಗ ಸೊಸೆಯರನ್ನು ರಾಜರು ಬಾವಿಗೆ ಬಲಿ ಕೊಡಲು ಮನಸ್ಸು ಮಾಡಿದಾಗ ರಾಜನ ವಿಚಾರವನ್ನು ರಾಣಿ ಸಮ್ಮತಿಸುತ್ತಾಳೆ. ಮತ್ತೊಬ್ಬಾಕೆ ರಾಜನು ರಾಜ್ಯವನ್ನು ತ್ಯಜಿಸಿ ಅಡವಿಗೆ ನಡೆದಾಗ ಅವನನ್ನು ಹಿಂಬಾಲಿಸುತ್ತಾಳೆ.

ರಾಣಿಯರು ಎಂತಹ ರಾಜನ ಹೆಂಡತಿಯರೇ ಆಗಿರಲಿ, ಕೆಲವರು ನಡತೆಯಲ್ಲಿ ಕೀಳುತನ ತೋರಿಸುತ್ತಾರೆ. ಒಂದು ಕಡೆ ರಾಜನ ಅಪ್ಪಣೆಯಂತೆ ರಾಣಿಯನ್ನು ಪರೀಕ್ಷಿಸಲು ಬಂದ ಕುರುಡನ ಎದುರಿಗೆ ರಾಣಿ

ಬೆತ್ತಲೆಯಾಗುತ್ತಾಳೆ. ರಾಣಿಯರು ಒಮ್ಮೊಮ್ಮೆ ಅತಿಕಾಮುಕರಾಗಿ ತೋರುತ್ತಾರೆ. ಹೊಲೆಮಾದಿಗರೊಂದಿಗೆ ಹಾದರಕ್ಕಿಳಿಯುತ್ತಾರೆ. ತಮ್ಮ ಮಿಂಡಂದಿರನ್ನು ಕೂಡಲು ಊರ ಹೊರಗಿರುವ ಆಶ್ರಮಗಳಿಗಾಗಲೀ, ದನದ ಕೊಟ್ಟಿಗೆಗಾಗಲೀ ತಾವಾಗಿಯೇ ಹೋಗುತ್ತಾರೆ. ಅಕಸ್ಮಾತ್ ತಾವು ಹಾದರ ಮಾಡುವುದನ್ನು ಯಾರಾದರೂ ನೋಡಿದರೆ, ಅವರಿಗೆ ಸಂಕಟಗಳನ್ನು ತಂದೊಡ್ಡುತ್ತಾರೆ. ಒಬ್ಬ ರಾಣಿ ಪ್ರಧಾನಿಯೊಂದಿಗೆ ಮಲಗಿದ್ದನ್ನು ನೋಡಿದವನಿಗೆ ಅವನೇ ತನ್ನ ಮೇಲೆ ಬಲತ್ಕಾರ ಮಾಡಲು ಬಂದನೆಂದು ಅಪವಾದ ಹೊರಿಸುತ್ತಾಳೆ. ಸನ್ಯಾಸಿಯೊಂದಿಗೆ ಕೂಡಲು ಊರ ಹೊರಗಿನ ಅವನ ಆಶ್ರಮಕ್ಕೆ ಹೋದಾಕೆ ತನ್ನ ಗಂಡನು ತಾನು ಹಾದರ ಮಾಡಲು ಬಂದುದನ್ನು ಅರಿತುದರಿಂದ, ರಾಣಿ ಅವನ ತಲೆಗೆ ಮಾಟದ ಮುಳ್ಳು ಚುಚ್ಚಿ ನಾಯಿಯನ್ನಾಗಿಸುತ್ತಾಳೆ. ಇವರು ಹಾದರ ಮಾಡಲು ಯಾರಾದರೂ ಆಗಿರಬಹುದು. ಒಬ್ಬಾಕೆ ರಾಣಿ ಕುದುರೆ ತಿಕ್ಕುವವನೊಂದಿಗೆ ಹಾದರಕ್ಕಿಳಿದು ಕೊಟ್ಟಿಗೆಯಲ್ಲಿಯೇ ಅವನೊಂದಿಗೆ ಅನೈತಿಕ ಸಂಬಂಧ ಹೊಂದುತ್ತಾಳೆ. ಮತ್ತೊಬ್ಬಾಕೆ ಹಜಾಮನೊಂದಿಗೆ ಸ್ನೇಹ ಬೆಳೆಸಿರುತ್ತಾಳೆ. ಮಾದಿಗನ ರಂಡಿ–ಹಾಣಿ, ಅವನ ಅಪೇಕ್ಷೆಯಂತೆ ಆ ಮಿಂಡನಿಗಾಗಿ ರಾಜನ ರುಂಡವನ್ನು ಕಡಿದು ತರುತ್ತಾಳೆ. ಆದರೂ ನಂತರ ಮಿಂಡನಿಂದ ತಿರಸ್ಕೃತಳಾಗುತ್ತಾಳೆ. ಕೊನೆಗೆ ಕೊಲೆಯ ಅಪಾದನೆಯನ್ನು ನಿಷ್ಠಾವಂತ ಸೇವಕನ ಮೇಲೆ ಹೋರಿಸುತ್ತಾಳೆ.[೨] ಶಿಷ್ಟ ಸಾಹಿತ್ಯದಲ್ಲಿ ಕೇವಲ ಮೇಲ್‌ಗೈದ ಗಂಡು ಕೆಳಜಾತಿಯ ಹೆಂಗಸಿನೊಂದಿಗೆ ಹಾದರಕ್ಕಿಳಿಯುವ ಸಂಗತಿಗಳಿಲ್ಲವೆಂಬ ಆಪಾದನೆಯನ್ನು ಈ ಜನ ಇಂದು ವಿಚಾರ ಮಾಡುತ್ತಿರುವುದನ್ನು ಜಾನಪದ ಎಂದೋ ಗೈದಿದೆ ಎಂಬ ಅಂಶವನ್ನು ಈ ಮೇಲಿನ ಉದಾಹರಣೆಗಳಲ್ಲಿ ಗಮನಿಸಬಹುದು.

ಜನಪದ ಕಥೆಗಳಲ್ಲಿ ದಾಸಿಯರ ಪಾತ್ರ ಮುಖ್ಯವಾದುದು. ರಾಣಿಯರ ಊಟ, ಉಪಚಾರ, ಬಟ್ಟೆಬರೆ ಇತ್ಯಾದಿಗಳ ವ್ಯವಸ್ಥೆಯಿಂದ, ಶಯ್ಯಾಗಾರ ಶೃಂಗರಿಸುವವರೆಗೆ ದಾಸಿಯರದೇ ಕಾರುಬಾರು. ರಾಣಿಯರು ಹೆತ್ತ ಕೂಸುಗಳಿಗೆ ಸಾಕು ತಾಯಂದಿರು ಇವರೇ. ಒಬ್ಬ ರಾಣಿ ತನ್ನ ಮಗುವಿಗೆ ಹಾಲು ತರಲು ಕಳುಹಿಸಿದರೆ ದೂರ ನಡೆದು ಹೋಗದ ದಾಸಿ ಸನಿಹದಲ್ಲಿಯೇ ಸಿಗುವ ಕುರಿಯ ಹಾಲನ್ನೇ ತಂದು ಕುಡಿಸುತ್ತಿದ್ದಳು. ದಾಸಿ ಯಾವ ಹಾಲು ತಂದು ಕುಡಿಸಿದಳು ಎಂದು ಕೂಡ ರಾಣಿಯರು ವಿಚಾರಿಸುತ್ತಿರಲಿಲ್ಲ. ಒಂದೊಂದು ಕಡೆ ರಾಣಿಯರು ರಾಜಮನೆತನಕ್ಕೆ ತೀರ ಹತ್ತಿರದವರಾಗಿರುತ್ತಿದ್ದರು. ಪ್ರಸಂಗ ಬಂದರೆ ತಮ್ಮ ಪ್ರಾಣ ಕೊಡಲು ಕೂಡ ಅವರು ಸಿದ್ಧರಿರುತ್ತಿದ್ದರು. ಒಂದು ಕಥೆಯಲ್ಲಿ ಬೇರೊಬ್ಬ ರಾಜನು ದಾಳಿ ಮಾಡಿ ರಾಜ್ಯವನ್ನು ವಶಪಡಿಸಿಕೊಳ್ಳುತ್ತಾನೆ. ರಾಜಮನೆತನದ ಎಲ್ಲರನ್ನು ಕೊಲ್ಲುತ್ತಾನೆ. ದಾಸಿ ರಾಜಕುಮಾರನನ್ನು ಎತ್ತಿಕೊಂಡು ಓಡಿಹೋಗಿ ಬೇರೆ ಊರು ಸೇರುತ್ತಾಳೆ. ಮಗುವನ್ನು ಜೋಪಾನ ಮಾಡುತ್ತಾಳೆ. ರಾಣಿಯರು ರಾಜಕುಮಾರಿಯರೂ ನಡೆಸುವ ಕುಟಿಲ ಕೆಲಸಗಳಿಗೆಲ್ಲ ದಾಸಿಯರೇ ಮಧ್ಯಸ್ಥಿಕೆ ವಹಿಸುತ್ತಾರೆ. ರಾಜಕುಮಾರಿಯ ದಾಸಿಯೋರ್ವಳು ರಾಜಕುಮಾರಿ ಇಟ್ಟ ಷರತ್ತನ್ನು ಪೂರೈಸಿ, ಗೆದ್ದೊಯ್ಯಲು ಬಂದ ನಾಯಕನಲ್ಲಿ ಒಂದು ರಾತ್ರಿ ಕಳೆದು ಅವನಲ್ಲಿರುವ ಮಾಟದ ವಸ್ತುಗಳನ್ನು ಅಪಹರಿಸುತ್ತಾಳೆ.

ರಮ್ಯ ಕಥೆಗಳಲ್ಲಿ ಪ್ರೇಮದ ಸ್ವರೂಪ: ಅಸಹಾಯಕ ಸನ್ನಿವೇಶಗಳಲ್ಲಿ ಅದ್ಭುತ ಕಲ್ಪನೆಗಳು ಕಾಣಿಸಿಕೊಂಡು ಕಥೆಗಳಿಗೆ ರಮ್ಯ ಆವರಣವನ್ನು ಸೃಷ್ಟಿಸುವಂಥ ಕಥೆಗಳಿಗೆ ರಮ್ಯ ಕಥೆಗಳು ಎಂದು ಕರೆಯುತ್ತಾರೆ.[೩]

ಮಕ್ಕಳ ಗೋಳನ್ನು ನೋಡಲಾರದೆ ಮಡಿದ ಅವರ ತಂದೆ-ತಾಯಿ ಮುಂದೆ ಹಾಲಿನ ಬಾವಿಯಾಗಿಯೋ, ಹೆಣ್ಣಿನ ಬಾವಿಯಾಗಿಯೋ ಕಾಣಿಸಿಕೊಂಡರೆ ಅಲ್ಲಿ ರಮ್ಯತೆ ಕಾಣಿಸಿಕೊಳ್ಳುತ್ತದೆ. ಬಂಗಾರ ಕೂದಲ ರಾಜಕುಮಾರಿ ಕಥೆ, ಸೂತ್ರದ ಕುದುರೆಯ ಕಥೆ, ಹೆಂಡತಿ ಗಂಡನಿಗೆ ಪಾಠ ಕಲಿಸುವ ಪಾಪಸಿನ ಗಂಡನ ಕಥೆ ಇನ್ನು ಅನೇಕ ಕಥೆಗಳಲ್ಲಿ ರಮ್ಯಕಥೆಗಳಾಗಿ ಪ್ರತಿಬಿಂಬಿಸುತ್ತವೆ.

ಬಂಗಾರ ಕೂದಲ ರಾಜಕುಮಾರಿ ಕಥೆಯಲ್ಲಿ ರಾಜನು ಊರೊರಗೆ ಒಂದು ಬಾವಿ ತೋಡಿಸಿದ. ನೀರು ಬರಲೇ ಇಲ್ಲ. ಅಂಥ ಸಂದರ್ಭದಲ್ಲಿ ರಾಜನು ತನಗಿದ್ದ ಒಬ್ಬಳೇ ಮಗಳ ಫೋಟೋ ತೆಗೆಸಿ ಬಾವಿಯ ಮೇಲೆ ಹಚ್ಚಿದ. ಅವಳ ತೂಕದ ಬಂಗಾರ ಕೊಡುತ್ತಾರೋ ಅಂಥವರಿಗೆ ತನ್ನ ಮಗಳನ್ನು ಕೊಡುವುದಾಗಿ ಹೇಳುತ್ತಾನೆ. ಅದೇ ದಾರಿಯಲ್ಲಿ ಹೊರಟಿದ್ದ ಬೇರೊಬ್ಬ ರಾಜ ಇವಳ ಫೋಟೋ ನೋಡಿ ಮನಸೋತು ಅವಳನ್ನು ಮದುವೆಯಾಗಲು ನಿರ್ಧರಿಸಿದ. ತನ್ನ ಇಂಗಿತವನ್ನು ಪ್ರಧಾನಿಗೆ ತಿಳಿಸಿ ತನ್ನ ಬಳಿ ಇದ್ದ ಎಲ್ಲಾ ಸಂಪತ್ತನ್ನು ತಂದು ಒಂದು ತಕ್ಕಡಿಯಲ್ಲಿ ಸುರಿದ. ಅದಕ್ಕೂ ರಾಜಕುಮಾರಿಯಷ್ಟು ತೂಕ ಬರಲಿಲ್ಲ. ತಾಯಿ-ತಂದೆಯನ್ನು ಒತ್ತಿಟ್ಟು ಬಂಗಾರ ತಂದು ತೂಕಕ್ಕೆ ಹಾಕಿದ ಆದರೂ ತೂಕಕ್ಕೆ ಬರಲಿಲ್ಲ. ರಾಜುಟಗಿ ಒತ್ತಿಟ್ಟು ಆಗ ಸಾಕಾಯಿತು. ಆಗ ರಾಜಕುಮಾರಿಯನ್ನು ಮದುವೆಯಾದ.[೪]

ಮಾತಿನಂತೆ ಮದುವೆ ಮಾಡಿಕೊಂಡು ತನ್ನ ಸಂಪತ್ತನ್ನೆಲ್ಲಾ ಬರಿದು ಮಾಡಿಕೊಂಡಿದ್ದ ರಾಜಕುಮಾರ ತನ್ನ ದೇಶವನ್ನು ಬಿಟ್ಟು ಬೇರೊಂದು ಪಟ್ಟಣಕ್ಕೆ ಬಂದು ಸೇರಿಕೊಂಡ. ಹೊಟ್ಟೆಗಾಗಿ ತುಂಬಾ ಪರದಾಡುವ ಸಂದರ್ಭದಲ್ಲಿ ಗಂಡನಿಗೆ ಹೇಳುತ್ತಾಳೆ. ಈ ನನ್ನ ಕೂದಲು ನೇಯ್ದು ಇದನ್ನು ಮಾರಿ ಸೌದಿ ತರ್ರಿ ಅಂದಳು. ಅವನು ಅದನ್ನು ತೆಗೆದುಕೊಂಡು ಹೋಗಿ ರಾಜನಿಗೆ ಮಾರಿದ. ನಂತರ ಇನ್ನೊಂದು ತೆಗೆದುಕೊಂಡು ಏನಾದರೂ ಕೊಡಿ ಎಂದ. ರಾಜ ಆ ಕೂದಲನ್ನು ನೋಡಿ ಅವನನ್ನು ಅಲ್ಲೇ ಕೂರಿಸಿಕೊಂಡು ಕೂದಲೇ ಇಷ್ಟು ಮಿಂಚುತಾವ ಅಂದರ ಹೆಣ್ಣುಮಗಳು ಹೆಂತೆಲೆ ಇದ್ದಿರಬೇಕು ಅಂದ. ದಸ್ತಿಕೊಟ್ಟು ಮದ್ಯಾಕೊಟ್ಟು ಬಗಿಚಾಕ ಬಳಸ್ದ. ಬಾ ಅಂದರ ನಿಮಗೆ ಅಂದುರ. ಅಂದ ಆಕಿಗಿ ಕರಕೊಂಡು ಖಿಂಡಿ ಬಾಗಿಲಿನಲ್ಲಿ ಆಗಿ ಆಕಿರಿ ಕರಕೊಂಡು ಬಂದರು. ಮಾಹೆದಾಗ ಇಟ್ಟರು. ಅವನಿಗೆ ೯ರೂ. ಕೊಟ್ಟರು. ಅದನ್ನು ಪಡೆದು ಸಂತೆಗೆ ಹೋಗಿ ಏನು ಬೇಕೋ ಅದನ್ನೆಲ್ಲಾ ಖರೀದಿಸಿ ಮನೆಗೆ ಬಂದ.

ಮನೆಯಲ್ಲಿ ಹೆಂಡತಿ ಇಲ್ಲದ್ದನ್ನು ನೋಡಿದ; ಅವನು ಹುಡುಕಾಡಿದ. ಕೊನೆಯಲ್ಲಿ ಹೂಗಾರ ಮುದುಕಿಯ ಮನೆ ಸೇರಿಕೊಂಡು ಆಶ್ರಯ ಪಡೆದ. ಸೋನಾರಾಣಿ ಸೋನಾರಾಣಿ ಎಂದು ಜಪಿಸುತ್ತಾ ಅವಳ ನೆಪದಲ್ಲೇ ಕಾಲ ಕಳೆಯುತ್ತಿದ್ದನು. ರಾಣಿ ಒಮ್ಮೆ ತಪ್ಪಿಸಿಕೊಂಡು ಹಲವಾರು ಮಹಿಳೆಯರನ್ನು ಕಾಮುಕರಿಂದ ಸಂರಕ್ಷಣೆ ಪಡೆಯುತ್ತಾ ಇತ್ತ ಗಂಡನನ್ನು ಹುಡುಕುವ ಪ್ರಯತ್ನ ಮಾಡಿದಳು. ಕೊನೆಯಲ್ಲಿ ಗಂಡನನ್ನು ಗುರುತಿಸಿದಳು. ಅರ್ಧ ರಾಜುಟಗಿ ಗಳಿಸಿದರೂ ಹೆಂಡತಿಯ ಮೇಲೆ ಸಂಶಯ ವ್ಯಕ್ತಪಡಿಸಿದ. ಎಷ್ಟೇ ಪ್ರೇಮದಿಂದ ಇದ್ದರೂ ಈ ಸಂಶಯ ಅವನಲ್ಲಿ ತಲೆದೋರಿತು. ಇದಕ್ಕೆ ಕೆಲವೊಂದು ಸಾಕ್ಷಿ ಇರಿಸಿದ ರಾಣಿ ಅದನ್ನು ದೃಢಪಡಿಸಿ ಸುಖಿ ಜೀವನವನ್ನು ಆರಂಭಿಸಿದಳು.

ಮೊಲೆಹಾಲು ಮೇರೆಗೆ ಸುರಿದೋ ಎಂಬ ಕಥೆಯಲ್ಲಿ ರಾಜನ ಮಗನಿಗೆ ಹೊಸ ಕುದುರೆ ಖರೀದಿಸುವುದು ಎಂದರೆ ತುಂಬಾ ಖುಷಿ. ಅದೇ ಊರಿನವನಾದ ಬಡಿಗೇರ ವನದೇವತೆ ಕೃಪೆಯಿಂದ ಸೂತ್ರದ ಗೊಂಬೆ ತಯಾರಿಸಿ ಬಡತನ ಹೋಗಲಾಡಿಸಿಕೊಂಡು ಇದ್ದ. ರಾಜಕುಮಾರ ಸೂತ್ರದ ಕುದುರೆ ಹತ್ತಿ ಮೇಲೆ ಜಗ್ಗಿದವನೇ ಕುದುರೆ ಮೇಲೆ ಹೋಯ್ತು. ಆದರೆ ಕೆಳಗೆ ಜಗ್ಗುವುದೇ ಮರೆತು ಗಂಗಾವತಿ ಎನ್ನುವ ಪಟ್ಟಣಕ್ಕೆ ಹೋಗಿ ಸೇರುತ್ತಾನೆ. ಅಲ್ಲಿ ಹೂಗಾರ ಅಜ್ಜಿಯೊಂದಿಗೆ ಜೀವನ ಮಾಡುತ್ತಾನೆ. ರಾಜಕುಮಾರ ಊರಿನ ವಿಶೇಷ ತಿಳಿದ. ಅದೇನೆಂದರೆ ರಾಜನ ಏಕೈಕ ಪುತ್ರಿ ಋತುಮತಿಯಾಗಿ ಹನ್ನೆರಡು ವರ್ಷ ಆಗಿತ್ತು. ಅವಳನ್ನು ಉಪ್ಪರಿಗೆಯಲ್ಲಿ ಊರಿಗೆ ಕಾಣದಂತೆ ಸಾಕುತ್ತಿದ್ದರು. ಇದನ್ನು ತಿಳಿದ ರಾಜಕುಮಾರ ಸೂತ್ರದ ಕುದುರೆಯ ಸಹಾಯದಿಂದ ದಿನಾಲೂ ರಾಜಕುಮಾರಿ ಇರುವ ಕೋಣೆಗೆ ಹೋಗಿ ಬರುತ್ತಿದ್ದ, ಹೇಗಾದರೂ ಮಾಡಿ ಅವನನ್ನು ಹಿಡಿದು ನೋಡಬೇಕೆಂದು ಹಂಬಲ ರಾಜಕುಮಾರಿಯದಾಗಿತ್ತು. ಒಂದು ದಿನ ನಿದ್ರೆ ಮಾಡದೆ ಹಾಗೆ ಕೂತು ರಾಜಕುಮಾರ ಬರುವ ದಾರಿಯನ್ನೇ ಕಾಯುತ್ತಿದ್ದಳು. ಸರಿಸುಮಾರು ನಡು ರಾತ್ರಿಯ ಸಮಯಕ್ಕೆ ಸೂತ್ರದ ಗೊಂಬೆಯಲ್ಲಿ ಬಂದು ಇಳಿದು ನೇರವಾಗಿ ಅವಳ ಕೋಣೆಯೊಳಗೆ ಹೋದ ರಾಜ. ಇವಳು ನಿದ್ರೆ ಮಾಡುವವಳ ಹಾಗೆ ಮಲಗಿದ್ದಳು. ನಂತರ ಅವನು ಒಳಗೆ ಬಂದವನು ಹಣ್ಣು, ಹಂಪಲು ಸೇವಿಸಿ ಹಾಲು ಕುಡಿದು ಸ್ವಲ್ಪ ಅಡ್ಡಾಡಿದ. ನಿದ್ದೆ ಮಬ್ಬಿನಲ್ಲಿ ಇದ್ದಾಳೆ ಎಂಬಂತೆ ಎದ್ದು ಅವನಿರುವಲ್ಲಿಗೆ ಹೋದಳು. ಅವನಿಗೆ ಗಾಬರಿಯಾಯಿತು. ನೀನು ಯಾರು ಎಂದು ಪ್ರಶ್ನಿಸಿದಳು. ನಾನು ಯಾರಾದರೇನು? ನಿನ್ನ ನೋಡಬೇಕೆಂಬ ಆಸೆ ಇತ್ತು ಬರ್ತಾ ಇದ್ದೆ. ಕೈಬಿಡು ನಾನು ಹೋಗಬೇಕು ಎಂದು ಹೇಳಿದ. ಆದರೆ ಅವಳು ಅವನನ್ನು ಕೈಬಿಡಲಿಲ್ಲ. ಎಲ್ಲಾ ಮಾತುಕತೆ ನಡೆದವು. ಇಬ್ಬರೂ ಅಲ್ಲೇ ಗಾಂಧರ್ವ ವಿವಾಹ ಮಾಡಿಕೊಂಡರು.[೫]

ವಿವಾಹವಾದ ನಂತರ ಕಾಲಾಂತರದಲ್ಲಿ ಗರ್ಭಿಣಿಯಾದಳು. ಈ ವಿಚಾರ ತಿಳಿದ ತಂದೆ ಮಗಳ ಈ ಅವಸ್ಥೆಗೆ ಯಾರು ಕಾರಣ ಎಂದು ಕಂಡುಹಿಡಿಯಲು ಡಂಗೂರ ಸಾರಿಸಿದ. ಮನೆಗೆ ಬಣ್ಣ ಹಚ್ಚಿಸಿದ. ಇದನ್ನು ತಿಳಿಯದ ರಾಜಕುಮಾರ ಹಾಗೆ ಯಥಾ ಪ್ರಕಾರ ದಿನದಂತೆ ತನ್ನ ಹೆಂಡತಿ ಇರುವ ಕೋಣೆಗೆ ನುಗ್ಗಿದ. ಹೆಂಡತಿ ಎಂಥಾ ಕೆಲಸ ಮಾಡಿದಿರಿ ಇವತ್ತು ನೀ ಬರಬಾರದಿತ್ತು ಎಂದು ಹೇಳಿದಳು. ಇದೆಲ್ಲಾ ನಮ್ಮ ತಂದೆಯವರ ಸಂಚು, ನಿನ್ನ ಹಿಡಿಯುವುದಕ್ಕಾಗಿ ಈ ಸಂಚು ಎಂದು ಹೇಳಿದಳು. ಆದರೂ ಆಗಲಿ ಬಿಡು ಎಂದು ಹೇಳಿದ. ಕೈಕಾಲು ಹಾಗೂ ದೋತ್ರಕ್ಕೂ ಬಣ್ಣ ಹತ್ತಿತ್ತು. ಅಜ್ಜಿಯ ಮನೆಗೆ ಬಂದವನೆ ತನ್ನ ಬಟ್ಟೆ ಬದಲಿಸಿಕೊಂಡು ಇತ್ತ ರಾಜ ಗೂಢಾಚಾರಿಗಳೊಂದಿಗೆ ಪತ್ತೆ ಹಚ್ಚುವ ಪ್ರಯತ್ನ ಮಾಡಿದ. ಅಗಸ ಬಟ್ಟೆ ತೊಳೆಯಲು ತೆಗೆದುಕೊಂಡಿದ್ದ. ಇವನೇ ಎಂದು ತಿಳಿದು ರಾಜನಿಗೆ ಒಪ್ಪಿಸಬೇಕೆಂದು ಹಿಡಿದರು.

ರಾಜಕುಮಾರನನ್ನು ಹಿಡಿದು ಶೂಲಕ್ಕೆ ಏರಿಸಲು ಸಿದ್ಧಮಾಡಿದರು. ಇದನ್ನು ನೋಡಿದ ರಾಜಕುಮಾರಿಗೆ ಅತಿಯಾದ ದುಃಖವಾಯಿತು. ಇವನನ್ನು ನಿನ್ನ ಕೊನೆ ಆಸೆ ಏನೆಂದು ಕೇಳಿದರು. ಅದಕ್ಕೆ ಅವನು ಈ ಮರವನ್ನು ಒಮ್ಮೆ ಹತ್ತಬೇಕು ಎಂದು ಹೇಳಿದ. ಅದರಂತೆ ಹಾಗೇ ಆಗಲಿ ಅವನ ಕೊನೆ ಆಸೆ ಈಡೇರಲಿ

ಎಂದು ಹೇಳಿದ. ರಾಜಕುಮಾರ ಮರ ಹತ್ತಿದವನೇ ಕೀಲು ಕುದುರೆಯೊಂದಿಗೆ ಪರಾರಿಯಾದನು. ನಂತರದಲ್ಲಿ ಯಥಾಪ್ರಕಾರ ರಾತ್ರಿ ಸಮಯಕ್ಕೆ ಗಂಡ ಹೆಂಡತಿ ಮನೆಗೆ ಬಂದು, ಬಹಳ ದಿನ ಇಲ್ಲಿ ಇರುವುದು ಸರಿಯಲ್ಲ ಎಂದು ಭಾವಿಸಿ ಹೆಂಡತಿಯನ್ನು ಕರೆದುಕೊಂಡು ಹೊರಟನು. ಇತ್ತ ಇವಳಿಗೆ ಹೆರಿಗೆ ಬ್ಯಾನಿ ಶುರುವಾಯಿತು. ಒಂದು ಕಾಡಿನಲ್ಲಿ ನೆಲೆನಿಂತರು. ಹೆರಿಗೆ ಮಾಡುವುದಕ್ಕೆ ಯಾರು ಇರಲಿಲ್ಲ. ಹಾಗಾಗಿ ಪುನಃ ಅವಳನ್ನು ಅಲ್ಲಿಯೇ ಬಿಟ್ಟು ಒಂದು ಹಳ್ಳಿಗೆ ಬಂದು ಅಜ್ಜಿಯ ಸಹಾಯದೊಂದಿಗೆ ಹೆರಿಗೆಗೆ ಬೇಕಾದ ಎಲ್ಲಾ ಪರಿಕರಗಳನ್ನು ತೆಗೆದುಕೊಂಡು ಹೊರಟ. ಕೊನೆಯಲ್ಲಿ ಬೆಂಕಿ ಪೊಟ್ಟಣ ಮರೆತಿದ್ದರಿಂದ ಪುನಃ ಅಜ್ಜಿಯ ಮನೆಗೆ ವಾಪಸ್ಸು ಬಂದು ಕುಳ್ಳುವಿನಲ್ಲಿ ಬೆಂಕಿ ಹಾಕಿಸಿಕೊಂಡು ಬರುವಾಗ ಬೆಂಕಿ ತಗುಲಿ ಕುದುರೆಯ ಸೂತ್ರ ಸುಟ್ಟು ಹೋಯಿತು. ಅದರ ಮೇಲಿದ್ದ ರಾಜಕುಮಾರ ನೀರಿಗೆ ಬಿದ್ದಿದ್ದನ್ನು ಕಂಡು ಹೆಂಡತಿ ಗಂಡನೇ ಇಲ್ಲ ಎಂದ ಮೇಲೆ ಬದುಕಿ ನಾನೇನು ಮಾಡಲಿ ಎಂದು ಮಗನನ್ನು ನೀರಿಗೆ ಎಸೆದು ತಾನು ನೀರಿಗೆ ಹಾರಿದಳು. ಗಂಡ ಒಂದು ದಡಕ್ಕೆ, ಹೆಂಡತಿ ಒಂದು ದಡಕ್ಕೆ ಸೇರಿದರು. ಮಗು ಒಬ್ಬ ರಾಜನಿಗೆ ಸಿಕ್ಕನು. ಇವನನ್ನು ದೊಡ್ಡವನನ್ನಾಗಿ ಮಾಡಿದರು. ಹದಿನಾರು ವರ್ಷದವನಿರುವಾಗ, ಊರಿನಲ್ಲಿ ಸಂಚರಿಸುವಾಗ ಲೇಸಿಯವಳ ಮನೆ ಮುಂದೆ ಸುಂದರವಾದ ಹೆಣ್ಣು ಮಗಳು ನಿಂತಿರುವುದು ಕಂಡು, ಅವಳ ಸೌಂದರ್ಯಕ್ಕೆ ಮನಸೋತು ಅವಳ ದೇಹವನ್ನು ಅನುಭವಿಸುವ ಸಂಬಂಧವಾಗಿ ಮನೆಗೆ ಬಂದು ಊಟ ನೀರು ತಿನ್ನಲಾರದೆ ಹಾಗೆ ಮಲಗಿಬಿಟ್ಟ. ಇದನ್ನು ಗಮನಿಸಿದ ಸಾಕು ತಂದೆ-ತಾಯಿ ಪ್ರಶ್ನಿಸಿದರು. ಅವರ ಒಪ್ಪಿಗೆ ಸಿಕ್ಕ ನಂತರ ಲೇಸಿಯವಳ ಮನೆಗೆ ಬರುವುದಕ್ಕೆ ಅಣಿಯಾದರು. ಇತ್ತ ಇವಳಿಗೆ ಒಲ್ಲದ ಮನಸ್ಸಿನಿಂದ ಲೇಸಿಯವಳು ಆಶ್ರಯ ನೀಡಿದ್ದರಿಂದ ಅವಳು ಹೇಳಿದ ಮಾತಿಗೆ ರಾಜಕುಮಾರನೊಂದಿಗೆ ಹೋಗಲು ಸಿದ್ಧವಾದಳು. ರಾಜಕುಮಾರ ಬಂದು ಅವಳನ್ನು ಮುಟ್ಟುವ ಸಂದರ್ಭಕ್ಕೆ ಅವಳ ಎದೆಯ ಹಾಲು ಅವನ ಮುಖದ ಮೇಲೆ ಚಿಮ್ಮನೆ ಚಿಮ್ಮಿದವು. ಇದನ್ನು ಅರಿತ ರಾಜಕುಮಾರ ಮನೆಗೆ ಬಂದು ಸಾಕಿದ ತಂದೆ-ತಾಯಿಗಳ ಹತ್ತಿರ ನಿಜವಾದ ತಂದೆ-ತಾಯಿಗಳು ಯಾರು ಎಂದು ಕೇಳಿದ. ಆಗ ಅವರು ನಡೆದ ಎಲ್ಲಾ ಸಂಗತಿಯನ್ನು ಹೇಳಿದರು. ಲೇಸಿಯವಳ ಮನೆಯಲ್ಲಿರುವವಳೇ ನನ್ನ ತಾಯಿ ಎಂದು ತಿಳಿದು ತನ್ನ ತಂದೆಯನ್ನು ಹುಡುಕುವ ಒಂದು ಪ್ರಯತ್ನ ಮಾಡಿ ತನ್ನ ತಂದೆ-ತಾಯಿಯೊಂದಿಗೆ ಸುಖವಾಗಿ ಬಾಳಿದರು.

ತನ್ನ ತಾಯಿ ಎನ್ನುವುದೇ ತಿಳಿಯದೇ ತಾಯಿಯನ್ನೇ ಇಷ್ಟಪಡುವಂಥದ್ದು ಈ ಕತೆಯಲ್ಲಿ ಪ್ರಸ್ತಾಪಿತವಾಗಿದೆ. ಈ ಕಥೆಗೆ ಹೊಂದುವಂತೆ ಮತ್ತೊಂದು ಜನಪದ ಕಥೆ ಕೂಡ ಇದೆ. "ತಂದೆಯನ್ನು ಕೊಂದು ತಾಯಿಯನ್ನು ಮದುವೆಯಾದದ್ದು ಎಂಬ ಕಥೆಯೂ ಕೂಡ ರಾಜನೀತಿ ತಂತ್ರ ಕೆಲವು ಮೌಲ್ಯಗಳಿಗೆ ಭಗ್ನವನ್ನು ತರುತ್ತದೆ. ಸಮಾಜಕ್ಕೆ ತದ್ವಿರುದ್ಧವಾದ ಮೌಲ್ಯ ಒಂದು ಕಡೆಯಾದರೆ, ಸಮಾಜ ಒಪ್ಪಿತವಾದ ರಾಜನೀತಿ ಕೂಡ ಆಗಿರುತ್ತದೆ. ಆ ಕಾರಣಕ್ಕೆ ತನ್ನ ತಾಯಿಯನ್ನೇ ವಿವಾಹವಾಗುವಂತಹ ಸ್ಥಿತಿ ಒದಗುತ್ತದೆ. ಪ್ರೇಮ ಎಂಬುದು ತಂದೆ-ತಾಯಿ, ತಂಗಿ-ಅಣ್ಣ, ಗಂಡ-ಹೆಂಡತಿ, ಮಾವ-ಸೊಸೆ, ಅತ್ತಿಗೆ-ಮೈದುನ ಇನ್ನು ಹಲವಾರು ಕೌಟುಂಬಿಕ ಸಂಬಂಧಗಳ ಮೇಲೆ ನಿರೂಪಿತವಾಗಿರುತ್ತದೆ. ಕೆಲವು ಸಂದರ್ಭದಲ್ಲಿ ಮೌಲ್ಯಗಳು ಕೂಡ ಇಂದಿನ ಸಮಾಜದಲ್ಲಿ ಸತತವಾಗಿ ನಡೆಯುತ್ತದೆ ಕೂಡ.

'ಬಡಿಗ್ಯಾನ ಜಾಣತನ' ಕಥೆಯಲ್ಲಿ ಅತ್ತೆ-ಮಾವಂದಿರು ಸಂಪಾದಿಸಿದ ಸಂಪತ್ತನ್ನು ನಂಬಿದ ಸೊಸೆ ಗಂಡನನ್ನು ಕೆಲಸಕ್ಕೆ ಕಳುಹಿಸದೇ ಮನೆಯಲ್ಲಿ ಕೂತೇ ತಿನ್ನುತ್ತಾರೆ. ಕಾಲಾಂತರದಲ್ಲಿ ಇಡೀ ಸಂಪತ್ತು ಐಶ್ವರ್ಯ ಖಾಲಿಯಾಗುತ್ತದೆ. ನಂತರ ಬಡತನ ಬರುತ್ತದೆ. ಸಂಪತ್ತು ಖಾಲಿಯಾಗುವ ಮುನ್ನ ಈ ಊರಿನ ಸೊಸೆ ಎಂದು ಯಾರು ನೋಡಿರಲಿಲ್ಲ. ಬಡತನ ಬಂದಾಗ ಏನಾದರೂ ತರಲಿಕ್ಕೆ ಬರಬೇಕಾಯಿತು. ಅಕ್ಕಪಕ್ಕದವರು ಅದೆಷ್ಟು ದಿನ ಕೊಟ್ಟಾರು, ಹಾಗಾಗಿ ತನ್ನ ಗಂಡನ ಮೇಲಿನ ಪ್ರೀತಿ ಪ್ರೇಮದಿಂದ ಬಡತನ ಸಹಿಸಲಾರದಾಯಿತು. ತನ್ನ ತವರೂರಿನವರು ಶ್ರೀಮಂತರಾಗಿದ್ದು, ತವರೂರಿಗೆ ಹೋಗಿ ಬರುವುದಾಗಿ ಗಂಡನಿಗೆ ತಿಳಿಸಿದಳು. ಅದರಂತೆ ಗಂಡನೂ ಹೊರಟನು. ತನ್ನ ತವರೂರಿಗೆ ಹೋದಂತಹ ಸಂದರ್ಭದಲ್ಲಿ ತಾವು ಕಲ್ಪಿಸಿದಷ್ಟು ಸಿರಿ ಸಂಪತ್ತು ಅವರಿಗೆ ದೊರೆಯದಾಯಿತು.[೬]

'ಸೂತ್ರದ ಗೊಂಬೆ' ಬಳಸಿದ ತಪ್ಪಿಗಾಗಿ ರಾಜಕುಮಾರ ಅಡವಿ ಸೇರಬೇಕಾಯಿತು. ಹೂವು ಮಾರುವ ಮುದುಕಿಯ ಜೊತೆ ಸೇರಿದ ಆತ ಒಮ್ಮೆ ಹೂವನ್ನು ತಾನೇ ಕಟ್ಟಿ ಅಜ್ಜಿಗೆ ಕೊಟ್ಟನು. ಅಜ್ಜಿ ಆ ಊರಿನ ರಾಜನ ಮಗಳಿಗೆ ಕೊಟ್ಟಳು. ಅದರಿಂದ ಹೂವನ್ನು ಕಟ್ಟಿದವರು ಯಾರು ಅವರನ್ನು ನಾನು ನೋಡಬೇಕು ಎಂದಾಗ ಅಜ್ಜಿ ನನ್ನ ಮೊಮ್ಮಗಳು ಕಟ್ಟಿದಳು ಎಂದು ಸುಳ್ಳು ಹೇಳಿದಳು. ಹಾಗಿದ್ದರೆ ಮೊಮ್ಮಗಳನ್ನು ನಾಳೆ ಕಳುಹಿಸು ಎಂದು ರಾಜ ಆಜ್ಞೆ ಮಾಡಿದ. ಇತ್ತ ಇವನು ಹೆಂಗಸು (ಹುಡುಗಿ) ವೇಷ ಹಾಕಿಕೊಂಡು ಹೋದ. ರಾಜಕುಮಾರಿ ಆ ವೇಷಧಾರಿ ಹುಡುಗನ ಜೊತೆ ಪಗಡೆಯಾಟ ಆಡುವಂಥ ಸಂದರ್ಭದಲ್ಲಿ ಅವಳ ಕೈಯನ್ನು ಹಿಡಿದಾಗ ಹೆಂಗಸರ ಕೈತರಹ ಇರದಿದ್ದ ಕಾರಣ ರಾಜಕುಮಾರಿಗೆ ತಿಳಿಯಿತು. ಇವಳು ಹೆಂಗಸಲ್ಲ ಗಂಡಸು ಎಂದು. ಆವಾಗ ಅವನ ಮೇಲೆ ಮನಸ್ಸಾಗಿ ಪ್ರೇಮಕ್ಕೆ ತಿರುಗಿ ವಿವಾಹ ಆಗುತ್ತಾರೆ. ಮುಂದೆ ತನ್ನ ತಾಯಿ ಎಂದು ತಿಳಿಯದೇ ಅವಳನ್ನೇ ಮೋಹಿಸಿದ ಮರ್ಮ ದುರಂತ ಕಥೆಯಲ್ಲಿ ಕಾಣಬಹುದು.

'ಪಾಪಸಿನ ಗಂಡ' ಕಥೆಯಲ್ಲಿ ಗಂಡನ ಉದ್ದೇಶ ಮದುವೆಯಾಗುವ ಹೆಣ್ಣು ಪಾಪಸಿನಿಂದ ಹೊಡೆಸಿ ಕೊಳ್ಳಬೇಕಿತ್ತು. ಅವನ ಹೀನಾಯ ಹಿಂಸೆಗೆ ಒಪ್ಪಿ ಮದುವೆಯಾಗುವ ಹೆಣ್ಣು ಇದ್ದಾಳೆ. ಅವಳ ಬುದ್ಧಿವಂತಿಕೆ ಯಿಂದ ಪಾಪಸಿನ ಏಟು ತಪ್ಪಿಸಿಕೊಂಡು ಅವನಿಗೆ ದುಡಿಯುವ ಜವಾಬ್ದಾರಿಯನ್ನು ವಹಿಸುವಳು. ಆದರೂ ಕೆಲವೊಂದು ತೊಂದರೆಗೆ ಒಳಗಾದ ಗಂಡನನ್ನು ಪುನಃ ತನ್ನ ಬುದ್ಧಿವಂತಿಕೆ ಉಪಯೋಗಿಸಿ ಅವನ ಪಾಪಸಿನ ಏಟು ತಪ್ಪಿಸಿಕೊಳ್ಳುವನು. ಕೊನೆಯಲ್ಲಿ ಗಂಡ ಹೆಂಡಿರ ಮಧ್ಯೆ ಪ್ರೀತಿ ಪ್ರೇಮ ಹುಟ್ಟಿ ಸುಖವಾಗಿ ಬಾಳುವ ಮಾಡುವ ಹಾಗೆ ಮಾಡುವಳು.[೭]

'ಕಳ್ಳನ ಮಗಳು' ಕಥೆಯಲ್ಲಿ ಕಥಾನಾಯಕನು ಕಪ್ಪೆಗೆ ಸಹಾಯ ಮಾಡಿದ್ದರ ಬದಲಿಗೆ ಕಪ್ಪೆ ಬಂಗಾರಲಾಲ ಕೊಡುತ್ತದೆ. ಅದನ್ನು ತೆಗೆದುಕೊಂಡು ಬರುವ ಸಂದರ್ಭದಲ್ಲಿ ಕಳ್ಳನು ಇವನನ್ನು ಸಾಯಿಸಿ ಪಡೆಯಬೇಕೆಂಬ ದುರಾಸೆ ಇರುತ್ತದೆ. ಇದಕ್ಕೆ ಸಹಾಯವಾಗಿ ತನ್ನ ಮಗಳನ್ನೇ ಅವನಿಗೆ ಕೊಟ್ಟು ಮದುವೆ ಮಾಡಿರುವುದಾಗಿ ಹೇಳುತ್ತಾನೆ. ಅದರಂತೆ ನಟಿಸಲು ಕೂಡ ಪ್ರಚೋದಿಸುತ್ತಾನೆ. ಒಮ್ಮೆ ಅವನನ್ನು ಸಾಯಿಸುವ ಹುನ್ನಾರ

ನಡೆಯುತ್ತದೆ. ಅದಕ್ಕೆ ಮಗಳು ಇಲ್ಲಿ ಅವನನ್ನು ಸಾಯಿಸಲು ಮನಸ್ಸು ಮಾಡುವುದಿಲ್ಲ. ಪ್ರತಿಯಾಗಿ ಅವನಿಗೆ ಮೇಲಿನ ಎರಡು ರೊಟ್ಟಿ ತಿನ್ನದಂತೆ ಸೂಚಿಸುತ್ತಾಳೆ. ಅಂದರೆ ಅವನ ಮೇಲೆ ತಾನು ಇಟ್ಟಿರುವ ಪ್ರೀತಿಯಿಂದ ಅವನನ್ನು ಇಷ್ಟಪಟ್ಟಿದ್ದರಿಂದ ಈ ರೀತಿ ಮಾಡಲು ಸಾಧ್ಯವಾಯಿತು. ಅಪ್ಪನಿಗೆ ಗೊತ್ತಾಗದೆ ಹಾಗೆ ಇಬ್ಬರು ಮನೆಯನ್ನು ಬಿಟ್ಟು ಹೋಗುತ್ತಾರೆ.[೮]

'ಬಿಂಬಾಲಿಯ ಅದೃಷ್ಟ ಕಥೆಯಲ್ಲಿ' ಅಣ್ಣನು ತಂಗಿಯನ್ನು ಹಠದಿಂದ ಮದುವೆ ಯಾಗುವುದಾಗಿ ಪಟ್ಟು ಹಿಡಿಯುತ್ತಾನೆ. ತಂದೆ-ತಾಯಿಯವರು ಅವನ ಮಾತಿಗೆ ಒಪ್ಪಿ ಅವಳನ್ನೇ ಮದುವೆ ಮಾಡುವ ಸಿದ್ಧತೆ ಮಾಡುವುದು. ತಾನು ಹಾಕಿದ ಗಿಡದ ಹೂವು ಯಾರು ಮುಡಿವರೋ ಅವರನ್ನೇ ಮದುವೆ ಯಾಗುವುದಾಗಿ ಪಣ ಪ್ರತಿಜ್ಞೆ ಮಾಡುವುದು ಈ ಕಥೆಯ ಮೂಲ ಆಶಯವಾಗಿದೆ. ತಂಗಿ ಅದ್ಭುತ ಸುಂದರಿಯಾಗಿರುವುದರಿಂದ ಅವಳನ್ನು ಬೇರೆಯವರಿಗೆ ಮದುವೆ ಮಾಡುವುದು ಸರಿಯೆನಿಸದೇ ಇದ್ದು ತಾನೇ ಮದುವೆ ಮಾಡಿಕೊಳ್ಳಲು ಮುಂದಾಗುತ್ತಾನೆ. ಹಾಗೆಯೇ ತನ್ನ ಮಗ ಊಟ, ನೀರು ಸೇವಿಸದೇ ಇದ್ದುದರಿಂದ ಅವನ ಆರೋಗ್ಯ ಮತ್ತು ಸಂತಾನ ಅಭಿವೃದ್ಧಿಗೆ ಯಾರು ಇಲ್ಲದಂತಾಗುವುದೆಂದು ತಿಳಿದು ತನ್ನ ಒಡಹುಟ್ಟಿದವಳನ್ನೇ ಮದುವೆ ಮಾಡುವುದು ಆಶ್ಚರ್ಯ. ಈ ಕಥೆಯಲ್ಲಿ ಸೂರ್ಯದೇವನೇ ಇವಳನ್ನು ಮದುವೆಯಾಗುತ್ತಾನೆ. ಇದನ್ನು ಗಮನಿಸಿದರೆ ಅವಳು ಸುರಸುಂದರಾಂಗಿಯಾಗಿರುತ್ತಾಳೆ. ಆದ್ದರಿಂದ ಅವಳ ಸೌಂದರ್ಯಕ್ಕೆ ಮೋಹಗೊಂಡು ಅವಳನ್ನು ಮದುವೆಯಾಗುತ್ತಾನೆ.[೯]

ಕಾಲಾಂತರದಲ್ಲಿ ಸೂರ್ಯದೇವನಿಗೂ ಬಿಂಬಾಲಿಗೂ ಮದುವೆಯಾಗಿ ಸಂತಾನವಾದಾಗ ಪತಿಯತ್ತಿರ ತನ್ನ ತಂದೆ-ತಾಯಿ ಅಣ್ಣಂದಿರನ್ನು ನೋಡುವ ಆಸೆಯಾಗುವುದರಿಂದ ಗಂಡನ ಹತ್ತಿರ ಹೇಳುತ್ತಾಳೆ. ಅದಕ್ಕೆ ಸೂರ್ಯದೇವನು ಅವಳ ಮೇಲಿನ ಪ್ರೇಮದಿಂದ ತಂದೆ-ತಾಯಿ ಅಣ್ಣ ಅವರುಗಳಿಗೆ ಎಚ್ಚರವಾಗದಂತೆ ಮಾಡುವುದು. ಇದರಿಂದ ಬೇಸತ್ತುಕೊಂಡು ಬೇಗನೆ ಬರಲಿ ಮಗನನ್ನು ನೋಡದೆ ಇರಲಿ ನೋಡಿದರೆ ಬಿಡುವುದಿಲ್ಲ ಎಂಬ ಉದ್ದೇಶದಿಂದ ಅವರಿಗೆ ಎಚ್ಚರವಾಗದಂತೆ ಮಾಡುತ್ತಾನೆ. ಇವೆಲ್ಲವನ್ನು ಗಮನಿಸಿದರೆ ತನ್ನ ಹೆಂಡತಿಯ ಮೇಲೆ ಇಟ್ಟಿರುವ ಅಪಾರ ಪ್ರೀತಿ ಪ್ರೇಮವೇ ಕಾರಣವಾಗಿದೆ.

'ನಾಯಿಯಾದರೂ ತಾಯಿ' ಎಂಬ ಮತ್ತೊಂದು ಕಥೆಯಲ್ಲಿ ಗರ್ಭ ಧರಿಸಿದ ಹೆಣ್ಣು ಮತ್ತು ನಾಯಿ. ಇವುಗಳಿಗೆ ಬಸುರಿ ಬಯಕೆಯಾಗಿರುತ್ತದೆ. ಹೆಣ್ಣಿಗೆ ಕೂಡ ಬಸುರಿ ಬಯಕೆಗೆ ಪಾಯಸ ಮಾಡಿರುತ್ತಾರೆ. ನಾಯಿಗೆ ಒಂದು ತುತ್ತು ಹಾಕದೆ ತಾನೇ ತಿನ್ನುತ್ತಾಳೆ. ಗರ್ಭ ಧರಿಸಿದ ನಾಯಿ ಶಾಪ ಕೊಡುತ್ತದೆ. ತನಗೆ ಹುಟ್ಟುವ ನಾಯಿ ಮರಿಗಳು ನಿನ್ನ ಹೊಟ್ಟೆಗೆ ಹೋಗಲಿ ಅವಳ ಹೊಟ್ಟೆಯಲ್ಲಿರುವ ಹೆಣ್ಣು ಕೂಸುಗಳು ನನ್ನ ಹೊಟ್ಟೆಗೆ ಬರಲಿ ಎಂದು. ನಾಯಿಗೆ ಮುದ್ದಾದ ಎರಡು ಹೆಣ್ಣುಮಕ್ಕಳು ಹುಟ್ಟುವವು. ಈ ಮಕ್ಕಳನ್ನು ಕಾಡಿಗೆ ಒಯ್ದು ಚೆನ್ನಾಗಿ ಸಾಕಿತು. ಈ ಹೆಣ್ಣುಮಕ್ಕಳು ಕಾಡಿಗೆ ಬೇಟೆಗಾಗಿ ಬಂದಿದ್ದ, ರಾಜ ಪ್ರಧಾನಿ ಕಣ್ಣಿಗೆ ಬಿದ್ದರು. ಅವರ ಸೌಂದರ್ಯವನ್ನು ಕಂಡು ಪ್ರೀತಿಯೂ ಮೂಡಿತು. ಇದರಿಂದ ತಾವು ಹೊರಗೆ ಬರಲು ಬಟ್ಟೆಗಳಿಲ್ಲ ಎಂದು ಹೇಳಿದರು. ದೊಡ್ಡವಳು ರಾಜನ ಮಾತುಗಳಿಗೆ ಮನಸೋತು ಮದುವೆ ಯಾಗುವುದಾಗಿ ರಾಜನೊಡನೆ ಹೊರಡುವುದಾಗಿ ಹೇಳಿದಳು.

ಚಿಕ್ಕವಳು ಮಾತ್ರ ರಾಜನೊಡನೆ ಹೋಗಲು ನಿರಾಕರಿಸಿದಳು. ಕಾರಣ ತನ್ನ ತಾಯಿ(ನಾಯಿ) ಬಂದ ಮೇಲೆ ತಾಯಿಯ ಒಪ್ಪಿಗೆ ಪಡೆದು ಬರುವುದಾಗಿ ಹೇಳುತ್ತಾಳೆ. ಆದರೆ ಅಕ್ಕನ ಬಲವಂತವಾಗಿ ಅವಳು ಸಹ ಬರುವುದಾಗಿ ಹೇಳುತ್ತಾಳೆ. ಇತ್ತ ರಾಜ ದೊಡ್ಡವಳನ್ನು, ಪ್ರಧಾನಿ ಚಿಕ್ಕವಳನ್ನು ಮದುವೆಯಾಗುತ್ತಾನೆ. ತಾಯಿ ನಾಯಿ ಮಕ್ಕಳಿಲ್ಲದ್ದನ್ನು ನೋಡಿ ಗಾಬರಿಗೊಳ್ಳುತ್ತದೆ. ನಂತರ ಮಕ್ಕಳಿಗಾಗಿ ಕಣ್ಣೀರು ಸುರಿಸುತ್ತಾ ಹುಡುಕಾಡುತ್ತದೆ. ನಂತರದಲ್ಲಿ ಒಮ್ಮೆ ಹಿರಿಯ ಮಗಳು ಕಾಣಿಸುತ್ತಾಳೆ. ಹಿರಿಯ ಮಗಳು ತನ್ನ ತಾಯಿ ನಾಯಿ ಎಂದು ಮನವರಿಕೆಯಾದ ಕೂಡಲೇ ಆ ನಾಯಿಯನ್ನು ತನ್ನ ಆಳುಗಳಿಗೆ ಹೇಳಿ ಕೊಲ್ಲಿಸುತ್ತಾಳೆ. ಮಾರನೆಯ ದಿನ ಚಿಕ್ಕ ಮಗಳಿಗೆ ತನ್ನ ತಾಯಿಯ ಗುರುತಾಗಿ ಅದನ್ನು ತಂದು ಮನೆಯ ಪೆಟ್ಟಿಗೆಯಲ್ಲಿ ಇಟ್ಟು ಪೂಜಿಸುತ್ತಾಳೆ. ಕಾಲಾಂತರದಲ್ಲಿ ತಾಯಿ ಮುಖ ನೋಡುವ ಆಸೆಯಾಗುತ್ತದೆ. ಪೆಟ್ಟಿಗೆ ತೆರೆಯುತ್ತಾಳೆ. ತೆಗೆದು ನೋಡಿದರೆ ತನ್ನ ತಾಯಿ ದೇಹ ಮಾಯವಾಗಿ ಗಟ್ಟಿ ಚಿನ್ನವಾಗಿರುತ್ತದೆ. ಇತ್ತ ಅಕ್ಕನಿಗೆ ಬಡತನ ಬಂದಿರುತ್ತದೆ. ಚಿಕ್ಕವಳು ಅವಳ ಬಡತನ ಗಮನಿಸಿದಳು. ತನ್ನಲ್ಲಿರುವ ಗಟ್ಟಿ ಬಂಗಾರವನ್ನು ನಡೆದ ಸಂಗತಿಯನ್ನು ವಿವರಿಸಿ ಅರ್ಧಭಾಗ ಅವಳಿಗೆ ಕೊಡುತ್ತಾಳೆ. ಇಲ್ಲಿ ಒಂದು ಕಡೆ ರಾಜ ಕಾಡಿನಲ್ಲಿರುವ ಹೆಣ್ಣುಗಳನ್ನು ನೋಡಿ ಪ್ರೇಮಾಂಕುರಿಸಿ ಮದುವೆಯಾಗುವುದು. ಮತ್ತೊಂದು ಕಡೆ ಪ್ರಾಣಿಯಾದ ನಾಯಿ ತಾಯಿ ಬುದ್ಧಿವಂತ ಪ್ರಾಣಿ ಹೆಣ್ಣುಮಕ್ಕಳಿಗೂ ಇರುವ ಅವಿನಾಭಾವ ಸಂಬಂಧ ಈ ಕಥೆಯಲ್ಲಿ ವ್ಯಕ್ತಗೊಂಡಿದೆ. ನರಮನುಷ್ಯರಿಗೂ ಹಾಗೂ ಮೂಕ ಪ್ರಾಣಿಗೆ ಇರುವಂತಹ ಪ್ರೀತಿ–ಪ್ರೇಮ, ತಾಯಿ ಮಕ್ಕಳ ಸಂಬಂಧ ವಿಶಿಷ್ಟವಾದುದು. ಕತೆಗಾರ ಪ್ರಾಣಿಯೊಂದಿಗೆ ಸಮೀಕರಿಸಿ ಕಥೆಯನ್ನು ಹೆಣೆದಿರುವಂಥದ್ದು, ಆದರೆ ಹಿರಿಯವಳು ತನ್ನ ತಾಯಿಯನ್ನು ಸಾಯಿಸಿದ್ದರಿಂದ ಬಡತನ ಬರುವಂತೆ ಮಾಡಿರುವಂಥದ್ದು. ಇತ್ತ ಕಿರಿಯವಳು ತನ್ನನ್ನು ಪೂಜಿಸಿದ್ದರಿಂದ ಚಿನ್ನವನ್ನು ನೀಡಿರುವುದು ಸಹಜವೆಂಬಂತೆ ಕಂಡುಬರುತ್ತದೆ.[೧೦]

ಇನ್ನು ಅನೇಕ ಕಥೆಗಳಲ್ಲಿ ದಡ್ಡ ಮಕ್ಕಳಿದ್ದರೆ ತಾಯಂದಿರು ಮೊದಲಿಗೆ ಅವರ ಬಗ್ಗೆ ಬೇಸರ ಪಟ್ಟುಕೊಳ್ಳುತ್ತಾರೆ. ಆದರೆ ಅವರನ್ನು ಅತಿಯಾದ ವಾತ್ಸಲ್ಯದಿಂದ ಕಾಣುತ್ತಾರೆ. ತನ್ನಿಂದ ಹಣ ಪಡೆದು ನಾಯಿ, ಬೆಕ್ಕು, ಹಾವುಗಳನ್ನು ಕೊಂಡು ತಂದಾಗ ಬೇಸರ ಪಟ್ಟ ತಾಯಿ ಮಗ ಮಾಟದ ಉಂಗುರದೊಂದಿಗೆ ಮನೆಗೆ ಬಂದಾಗ ಬಹು ಸಂತೋಷದಿಂದ ಬರಮಾಡಿಕೊಳ್ಳುತ್ತಾಳೆ. ಒಬ್ಬ ತಾಯಿ ಇದ್ದೊಬ್ಬ ಮಗನಿಗೆ ಸಣ್ಣವನಿರುವಾಗಲೇ ಮದುವೆ ಮಾಡಿರುತ್ತಾಳೆ. ದಡ್ಡನಾಗಿ ಬೆಳೆದ ಆತ ತನ್ನ ಹೆಂಡತಿಯನ್ನು ನೋಡಲು ಬಯಸಿದಾಗ ಸಂದರ್ಭಕ್ಕೆ ತಕ್ಕಂತೆ ಹೇಗೆ ವರ್ತಿಸಬೇಕೆಂದು ಮೊದಲೇ ತಾಕೀತು ಮಾಡಿ, ಬೀಗರ ಮನೆಗೆ ಕಳುಹಿಸುತ್ತಾಳೆ. ತಾಯಿಯಾದವಳು ತನ್ನ ಮಕ್ಕಳ ಆಸೆಯನ್ನು ಏನಾದರೂ ಮಾಡಿ ಪೂರೈಸಲು ಬಯಸುತ್ತಾಳೆ. ತನ್ನ ಕುರುಡು ಮಗ ರಾಜ್ಯಸಭೆಯಲ್ಲಿ ಕೂಡಬಯಸಿದಾಗ, ತಾಯಿ ಅರಸನ ಅಪ್ಪಣೆ ಪಡೆದು ದಿನಾಲು ಮಗನನ್ನು ಅಲ್ಲಿಗೆ ಕರೆದೊಯ್ದು ಕೂಡಿಸಿರುತ್ತಿರುತ್ತಾಳೆ. ಹೊಲತಿಯ ಮಗನೊಬ್ಬನು ಸಾಹುಕಾರನ ಮಗಳನ್ನು ಮೋಹಿಸಿ ತಾಯಿಗೆ ತಿಳಿಸಿದಾಗ ಆರತಿ ಹಿಡಿದು ಮಧ್ಯರಾತ್ರಿಯಲ್ಲಿ ಸಾಹುಕಾರನ ಮನೆಗೆ ಹೋಗಿ ತಾನು ನಿಮ್ಮ ಮನೆಯ ಲಕ್ಷ್ಮೀ ಎಂದೂ ನಿಮ್ಮ ಮಗಳನ್ನು ನದಿಗೆ ಹಾಕಬೇಕೆಂದು ಹೇಳಿ, ಮಗನಿಗೆ ಆ ಹೆಣ್ಣಿನೊಂದಿಗೆ ಮದುವೆ ಮಾಡಲು ಪ್ರಯತ್ನಿಸುತ್ತಾಳೆ. ಕೆಲವೊಂದು ಕಥೆಗಳಲ್ಲಿ ತಾಯಂದಿರಿಗೆ ತನ್ನ

ವಂಶದ ಕುಡಿಯೆಂದರೆ ಅತಿಯಾದ ವ್ಯಾಮೋಹ ತಾನು ಸಾಯುವಾಗಲೂ, ಸತ್ತ ನಂತರವೂ ಅವರ ಹಿತವನ್ನು ಬಯಸುತ್ತಿರುತ್ತಾಳೆಂಬುದು ಜನಪದರ ನಂಬಿಕೆ. ತಾಯಿಯ ಕರುಳು ಮಮತೆಯಿಂದ ಕೂಡಿದ್ದು, ಮಕ್ಕಳೆಲ್ಲ ಅವಳ 'ಕರುಳಿನ ಕುಡಿಗಳು' ಎನ್ನುವ ವಾಡಿಕೆಯೂ ಇದೆ. ಒಬ್ಬ ಮಗನು ಸೂಳೆಗಾಗಿ ತಾಯಿಯನ್ನು ಕೊಂದು ಅವಳ ಕರುಳುಗಳನ್ನು ಉಡಿಯಲ್ಲಿ ತುಂಬಿಕೊಂಡು ಅವಸರವಸರವಾಗಿ ಹೋಗುವಾಗ ಎಡವಿ ಬೀಳುತ್ತಾನೆ. ಆಗ ಮಗನಿಗೆ ನೋವಾಯಿತೇನೋ ಎಂದು ಆ ತಾಯಿಯ ಕರುಳು ಗೋಗರೆಯುತ್ತದೆ. ಇನ್ನೊಬ್ಬ ತಾಯಿಯನ್ನು ಗೋಡೆಗೆ ಕಟ್ಟಿದಾಗ ಇಡಿ ಗೋಡೆಯೇ ಮಗ ಮಗ ಎಂದು ಹಲಬುತ್ತಿರುತ್ತಿರುತ್ತದೆ. ಮತ್ತೊಬ್ಬ ತಾಯಿ ಮಗಳ ಋಣ ತೀರಿಸಲು ಸತ್ತ ನಂತರ ಅವಳ ಮನೆಯಲ್ಲಿ ಎಮ್ಮೆಯಾಗಿ ಜನಿಸುತ್ತಾಳೆ. ಆದರೆ ಒಬ್ಬೊಬ್ಬ ತಾಯಿ ರಾಕ್ಷಸಿಯಂತೆ ವರ್ತಿಸುವ ಅಪರೂಪದ ಉದಾಹರಣೆಗಳು ಸಿಗುತ್ತವೆ. ಒಬ್ಬ ತಾಯಿ ರಾಕ್ಷಸನೊಂದಿಗೆ ಸ್ನೇಹ ಬೆಳೆಸಿ ಮಗನನ್ನು ಕೊಲ್ಲಲು ಹೊಂಚು ಹಾಕುತ್ತಾಳೆ. ಹೆಣ್ಣು ತಾಯಿಯಾದರೂ ದುಷ್ಟಳಾಗಿರಬಲ್ಲಳು ಎಂಬುದಕ್ಕೆ ಇದೊಂದು ಉದಾಹರಣೆಯಾಗಿ ನಿಲ್ಲುತ್ತದೆ. ಈ ಮೇಲಿನ ಕಥೆಗಳನ್ನು ಗಮನಿಸಿದರೆ ಒಬ್ಬ ತಾಯಿಯ ತನ್ನ ಮಕ್ಕಳ ಮೇಲೆ ತನಗಿಂತ ಹೆಚ್ಚಾಗಿ ಪ್ರೀತಿಯನ್ನು ಇಟ್ಟುಕೊಂಡಿರುವುದು ನೋಡಬಹುದು. ತನ್ನ ಮಕ್ಕಳು ದಡ್ಡರು, ಜಾಣರು, ಕುರುಡರು, ಕುಂಟರು, ಒಳ್ಳೆಯವರು, ಕೆಟ್ಟವರು ಕಳ್ಳ-ಸುಳ್ಳ ಏನೇ ಆಗಲಿ ತಾಯಿಯಾದವಳು ಎಲ್ಲಾ ಮಕ್ಕಳಿಗೂ ತನ್ನದೆ ಆದ ಶುದ್ಧ ಪ್ರೀತಿ, ಪ್ರೇಮ, ಕಾಳಜಿಯನ್ನಿಟ್ಟು ಸಾಕಿ ಸಲುಹಿ ದೊಡ್ಡವರನ್ನಾಗಿ ಮಾಡಿ ಅವರ ಬೇಕು- ಬೇಡಗಳನ್ನು ಈಡೇರಿಸಲು ತನ್ನ ಪ್ರಾಣತ್ಯಾಗ ಮಾಡಿಯಾಳು.

ಜನಪದ ಕಥೆಗಳಲ್ಲಿ ಅನೇಕ ಸ್ತ್ರೀಯರು (ಬಂಜೆಯರು) ತಮಗೆ ಮಕ್ಕಳಾಗಲಿಲ್ಲ ಎಂಬ ಕೊರಗಿನಲ್ಲಿರುತ್ತಾರೆ. ಎಂತಹ ಮಗುವಾದರೂ ಸರಿ ಅದನ್ನು ಪಡೆಯಲು ಹಾತೊರೆಯುತ್ತಾರೆ. ಕೇವಲ ಗಂಡು ಮಕ್ಕಳಾದರೂ ಸಾಲದು, ಹೆಣ್ಣು ಮಕ್ಕಳು ಒಬ್ಬ ತಾಯಿಗೆ ಬೇಕೇ ಬೇಕು. ಒಬ್ಬಳು ತನಗೆ ಆರು ಜನ ಗಂಡು ಮಕ್ಕಳಿದ್ದರೂ ಜ್ಯೋತಿಷಿಯ ಸಲಹೆಯಂತೆ ಸೀಮೆಗೆ ಹೋಗಿ ರಾಕ್ಷಸನೊಂದಿಗೆ ಕೂಡಿ ಹೆಣ್ಣುಮಗುವನ್ನು ಪಡೆಯುತ್ತಾಳೆ. ತನ್ನ ಗಂಡ ಷಂಡನಾಗಿರುವುದನ್ನು ತಿಳಿದ ಮೇಲೆ ಇನ್ನೊಬ್ಬನಿಂದ ತನ್ನ ಬಂಜೆತನ ಹೋಗಲಾಡಿಸಿಕೊಂಡ ಉದಾಹರಣೆಗಳು ಸಿಗುತ್ತವೆ. ಇಂಥಲ್ಲಿ ವಂಶವೃದ್ಧಿಯ ಹಂಬಲವೂ ಕೆಲಸ ಮಾಡಿರುತ್ತದೆ. ಒಬ್ಬಳು ತನ್ನ ಗಂಡ ಷಂಡನಾದುದರಿಂದ ಕ್ವಾಮಿಟಿಗನೊಂದಿಗೆ ಕೂಡಿ ಮಗುವನ್ನು ಪಡೆಯುತ್ತಾಳೆ. ಮತ್ತೊಬ್ಬಳು ಇಂಥದ್ದೇ ಕಾರಣಕ್ಕಾಗಿ ಎಲಿಗಾರನೊಂದಿಗೆ ಕೂಡಿ ಗಂಡು ಮಗುವನ್ನು ಪಡೆಯುತ್ತಾಳೆ.

'ಕಡಿಮನಿ ಲಕ್ಕವ್ವ' ಕಥೆಯಲ್ಲಿ ಲಕ್ಕವ್ವ ಊರಿನ ಕುಲಕರ್ಣಿಯೊಂದಿಗೆ ಅನೈತಿಕ ಸಂಬಂಧ ಹೊಂದಿದ್ದ ಊರಲ್ಲಿ ದಾಸಯ್ಯ ಭಿಕ್ಷುಕನಾಗಿದ್ದು, ಹಲವಾರು ಮನೆಯ ಅಡುಗೆ ರುಚಿ ಉಂಡವನು. ಲಕ್ಕವ್ವನ ಮನೆಯಲ್ಲಿ ಗಾರಿಗೆ ರುಚಿ ಹತ್ತಿತ್ತು. ಮತ್ತೆ ಮತ್ತೆ ಅದೇ ಮನೆಗೆ ಹೋಗಿ ಕೇಳತೊಡಗಿದ. ಗಾರಿಗೆಯನ್ನು ಪುಗಸಟ್ಟೆ ಕೊಡಬೇಡಿ ಹಣ ಕೊಡುತ್ತೇನೆಂದು, ಹಣ ಕೊಟ್ಟು ಪಡೆಯಲಾರಂಭಿಸಿದ. ಒಂದು ದಿನ ಏನು ಕೊಡಲಿಲ್ಲ ಲಕ್ಕವ್ವ, ಇದನ್ನೇ ಮನಸಲ್ಲಿಟ್ಟುಕೊಂಡು ಗೊಣಗುಡುತ್ತಿದ್ದ. ಲಕ್ಕವ್ವ ನನಗೆ ಮೋಸ ಮಾಡಿದಳು ಎಂದು. ಇದನ್ನು ಅರಿತ ಕುಲಕರ್ಣಿ ಹೆಂಡತಿ ಅವನಿಗೆ ಒಂದು ಉಪಾಯ ಹೇಳಿಕೊಟ್ಟಳು. ನನ್ನ ಗಂಡ

ವ್ಯಾಪಾರಕ್ಕೆ ಹೋಗಿ ಬರುವುದು ತಡವಾಗುತ್ತದೆ. ಅವನ ವೇಷಧರಿಸಿ ಅವಳ ಮನೆಗೆ ಹೋಗು ಎಂದು ಹೇಳಿದಳು. ಅದರಂತೆ ಅವನು ಹಾಗೆ ಮಾಡಿದ. ಅವಳ ಮನೆಗೆ ಹೋದವನೇ ದಡದಡ ಬಾಗಿಲು ಬಡಿದ. ಕುಲಕರ್ಣಿ ಎಂದು ತಿಳಿದು ಬಾಗಿಲು ತೆಗೆದಳು. ನಂತರ ಗಾರಿಗೆ, ಹಪ್ಪಳ ಇತ್ಯಾದಿ ಊಟ ಬಡಿಸಿದಳು. ದಾಸಯ್ಯ ಹೊಟ್ಟೆ ತುಂಬಾ ಊಟ ಮಾಡಿದ. ಕೊನೆಯಲ್ಲಿ ಉಳಿದ ಎರಡು ಗಾರಿಗೆ ತಿನ್ನುವ ಸಂದರ್ಭದಲ್ಲಿ ಇವನು ಕುಲಕರ್ಣಿ ಅಲ್ಲ ಎಂದು ಗೊತ್ತಾಯಿತು. ಅದೇ ಸಂದರ್ಭಕ್ಕೆ ಕುಲಕರ್ಣಿ ವ್ಯಾಪಾರ ಮುಗಿಸಿಕೊಂಡು ಲಕ್ಕವ್ವನ ಮನೆಗೆ ಬಂದು ಬಾಗಿಲು ಬಡಿದ. ಕುಲಕರ್ಣಿ ಎಂದು ತಿಳಿದು, ದಾಸಯ್ಯನನ್ನು ಅದೇ ಮನೆಯಲ್ಲಿ ಇರಿಸಿ ನಂತರ ಅವನನ್ನು ಬರಮಾಡಿಕೊಂಡಳು. ಬೆಳಿಗ್ಗೆ ಹೊರಗೆ ಹೋಗುವಾಗ ದಾಸಯ್ಯ ಹೋಗಿದ್ದು ಮನಗಂಡ ಕುಲಕರ್ಣಿ ಲಕ್ಕವ್ವಳ ನಡತೆ ಸರಿಯಿಲ್ಲ ಎಂದು ತಿಳಿದು ಅವಳನ್ನು ಅಂದಿನಿಂದ ಕೈ ಬಿಟ್ಟನು. ಇತ್ತ ತನ್ನ ಹೆಂಡತಿಗೆ ಖುಷಿಯಾಯಿತು. ಅನ್ಯೋನ್ಯವಾಗಿ ಪ್ರೀತಿ ಪ್ರೇಮದಿಂದ ಗಂಡ–ಹೆಂಡತಿ ಇದ್ದರು. ಈ ಕಥೆ ಅನೈತಿಕ, ವಿವಾಹಬಾಹಿರ ಸಂಬಂಧವನ್ನು ಸಾರುತ್ತದೆ.

ಒಂದು ಕಡೆ ಮೈದುನನು ಅಣ್ಣನ ಹೆಂಡತಿಯನ್ನು ಕೂಡಲು ಬಯಸುತ್ತಾನೆ. ಆಕೆ ಅವನನ್ನು ಮನೆಯಲ್ಲಿ ಕೀಲಿ ಹಾಕುತ್ತಾಳೆ. ನಂತರ ಕೀಲಿ ತೆಗೆದಾಗ ಅಣ್ಣನಿಗೆ ಅತ್ತಿಗೆಯೇ ತನ್ನನ್ನು ಕೂಡಲು ಬಯಸಿದಳೆಂದು ಆರೋಪ ಹೊರಿಸಿ ಅವಳನ್ನು ಮನೆಯಿಂದ ಹೊರಗೆ ಹಾಕಿಸುತ್ತಾನೆ. ಜನಪದ ಕಥೆಗಳಲ್ಲಿ ಅತ್ತಿಗೆಯರ ಸ್ವಭಾವ ಕುರಿತು ಇದೊಂದು ಅಪರೂಪದ ಉದಾಹರಣೆಯಾಗಿದೆ. ಬಹಳಷ್ಟು ಕಡೆ ಕೆಟ್ಟದ್ದನ್ನು ಮಾಡುವವರು ಅತ್ತಿಗೆಯರೇ ಕಾಣಿಸಿಕೊಳ್ಳುತ್ತಾರೆ. ಈ ಒಂದು ಕಥೆಯಲ್ಲಿ ಅತ್ತಿಗೆ ವ್ಯಕ್ತಿತ್ವ ಹೀಗೆ ಕಾಣಿಸಿಕೊಳ್ಳಲು ಬಹುಶಃ ಕಥಾನಾಯಕಿಯೇ ಅವಳಾಗಿರುವುದರಿಂದ ಎಂದು ಹೇಳಬಹುದು. ಅಂದರೆ ಒಂದು ಕಥೆಯಲ್ಲಿಯ ಪಾತ್ರಗಳು ಕೆಟ್ಟವು ಅಥವಾ ಒಳ್ಳೆಯವು ಆಗಿ ತೋರಲು ಕಥೆಯ ಸಾಮಾನ್ಯ ಲಕ್ಷಣಗಳೇ ಬಹುತೇಕ ಕಾರಣವಾಗುತ್ತವೆಂದು ತೋರುತ್ತದೆ. ನಾಯಕ ಅಥವಾ ನಾಯಕಿ ವಿರುದ್ಧ ಒಂದು ರೀತಿಯ ಖಳನಾಯಕಿ ಯಾಗಿಯೇ ಬಹಳಷ್ಟು ಕಡೆ ಅತ್ತಿಗೆಯ ಪಾತ್ರ ಕಾಣಿಸಿಕೊಳ್ಳುತ್ತದೆ.

ಒಬ್ಬನ ಹೆಂಡತಿ ಸೌಂದರ್ಯವತಿ. ಗಂಡನಿಗೆ ಅವಳ ಸೌಂದರ್ಯದ ಬಗ್ಗೆ ಅನುಮಾನ ಬರುತ್ತದೆ. ಒಬ್ಬ ಕುಹಕನ ಸಲಹೆಯಂತೆ ಹೆಂಡತಿಯನ್ನು ಕುರೂಪಿಯನ್ನಾಗಿಸಲು ಅವಳ ಮೂಗು ಕೊಯ್ಯಲು ಬೆನ್ನಟ್ಟುತ್ತಾನೆ. ಈಕೆ ಓಡಿ ಹೋಗುತ್ತಾಳೆ. ಹಿರಿಯನೊಬ್ಬನ ಸಲಹೆಯಂತೆ ಮತ್ತೆ ಕರೆತರುತ್ತಾನೆ. ಜನಪದ ಕಥೆಗಳಲ್ಲಿ ಅನೇಕ ಹೆಂಡಂದಿರೆಲ್ಲ ಸುಮಾರಾಗಿ ಇಂತಹುದೇ ಗೋಳು. ಇವರಿಗೆ ಸ್ವಾತಂತ್ರ್ಯ ವ್ಯಕ್ತಿತ್ವವೆಂಬುದೇ ಇಲ್ಲ. ಕೆಲವು ಕಥೆಗಳಲ್ಲಿ ಕ್ರಿಯಾಶೀಲ ಪಾತ್ರಗಳಾಗಿರುವುದಿಲ್ಲ. ಇವರು ಬಾಯಿ ಬಿಚ್ಚಿ ಮಾತನಾಡುವುದಿಲ್ಲ. ಕೇವಲ ಚಿತ್ರದ ಗೊಂಬೆಗಳಂತೆ ಗೋಚರಿಸಿ ನಾಲ್ಕಾರು ಭಂಗಿಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಒಬ್ಬಾಕೆ ಮಠಕ್ಕೆ ಎಡೆಕೊಡಲು ಹೋದರೆ, ಅವಳ ಸೌಂದರ್ಯಕ್ಕೆ ಮಾರುಹೋದ ಮಠದ ಸನ್ಯಾಸಿ ಆಕೆಯನ್ನು ಅಪಹರಿಸಿ ಕೊಂಡು ಹೋಗುತ್ತಾನೆ. ಮುಂದೆ ಆಕೆಯ ಗಂಡ ಇವಳನ್ನು ಹುಡುಕುವುದೇ ಕಥೆಯ ಮುಖ್ಯ ಘಟನೆ ಯಾಗಿ ಬೆಳೆಯುತ್ತದೆ. ಈ ಮೇಲಿನ ಎರಡೂ ಘಟನೆಗಳಿಗೆ ಅವಳ ಸೌಂದರ್ಯವೇ ಅವಳಿಗೆ ತೊಂದರೆ ಗೀಡುಮಾಡಿದೆ ಎಂಬುದು ಗಮನಾರ್ಹವಾಗಿದೆ.

ರಾಜನೊಬ್ಬನು ಸಾಹುಕಾರನ ಹೆಂಡತಿಯ ಸೌಂದರ್ಯಕ್ಕೆ ಮಾರುಹೋಗಿ, ಅವಳನ್ನು ಕೂಡಲು ಏನೆಲ್ಲಾ ಪ್ರಯತ್ನ ಮಾಡುತ್ತಾನೆ. ಹೆಂಡತಿಗೆ ಗಂಡನೇ ದೇವರು ಎಂಬ ಕಲ್ಪನೆ ನಮ್ಮ ಸಮಾಜದಲ್ಲಿ ರಕ್ತಗತವಾಗಿ ಹೋಗಿದೆ. ಗಂಡ ವ್ಯಭಿಚಾರ ಮಾಡಬಹುದು. ಆದರೆ ಹೆಂಡತಿಗೆ ಅಂತಹದಕ್ಕೆಲ್ಲ ಶಿಕ್ಷೆ ಕಾದಿರುತ್ತದೆ. ಗೌಡತಿಯಾದವಳು ತನ್ನ ಗಂಡ ಹಾದರ ಮಾಡುವುದನ್ನು ತಪ್ಪಿಸಲು ಪ್ರಯತ್ನಿಸುತ್ತಾಳೆ. ಮತ್ತೊಬ್ಬಾಕೆ ತನ್ನ ಮೇಲೆ ಕಣ್ಣಿಟ್ಟ ಕುರುಬನನ್ನು ಗಂಡನಿಂದ ಬಡಿಸುತ್ತಾಳೆ. ಸುಮಾರಾಗಿ ಇಬ್ಬರು ಒಬ್ಬ ಸಾಮಾನ್ಯ ಹೆಂಡತಿ ಯಾಗಿ ಗಂಡನಿಂದ ಕಾಣಿಸಿಕೊಳ್ಳುವ ಹೆಣ್ಣಿನ ಪಾತ್ರಚಿತ್ರಣವಾಗಿರುತ್ತದೆ.[೧೧]

ಜಾರ ಕರ್ಮವು ಪಾತರದವರ ಮುಖ್ಯ ಹೊರೆ ಇರುತ್ತದೆ. ಮೈನೆರೆದ ಬಳಿಕ ದುಡ್ಡು ಕೊಡುವ ಸಾಮರ್ಥ್ಯವುಳ್ಳಂಥವನೊಬ್ಬ ಪ್ರಾಯಸ್ಥನ ಕೈಯಿಂದ ಯೋಗ್ಯತೆಯ ಪ್ರಕಾರ ಹಣ ತಕ್ಕೊಂಡು ಅವನಿಗೆ ಆ ಹುಡುಗಿಯ ಫಲಶೋಭನ ಮಾಡಿಕೊಡುವರು. ಈ ಸಂಸ್ಕಾರಕ್ಕೆ ಹೆಣ್ಣು ಮಾಡುವ ಸಂಸ್ಕಾರವೆನ್ನುತ್ತಾರೆ. ಹೆಣ್ಣು ಮಾಡಿದವನೇ ಗಂಡನೆಂದು ಭಾವಿಸಲ್ಪಡುತ್ತಾರೆ. ಆದರೆ ಫಲಶೋಭನವಾದ ಬಳಿಕ ಎರಡು ತಿಂಗಳು ಮಾತ್ರ ಹೆಣ್ಣಾದ ಹುಡುಗಿಯ ಮೇಲೆ ಅವನ ಹಕ್ಕು ಇರುತ್ತದೆ. ಮುಂದೆ ಬೇಕಾದವರನ್ನು ಆಕೆ (ಕರಕೊಳ್ಳಬಹುದು) ಸೇರಬಹುದು.[೧೨] ಒಂದು ಕಡೆ ಈ ಪಾತರದವಳ ಹೆಸರು 'ರಾತ್ರೆವ್ವ' ಎಂದು ಬರುತ್ತದೆ. ಇದು ಧನ್ಯಾರ್ಥದಲ್ಲಿ ಕರೆದ ಹೆಸರಾಗಿದೆ. ಇವರು ಸಾಮಾನ್ಯವಾಗಿ ಸುಂದರಿಯರು, ಗಂಡಸರನ್ನು ಆಕರ್ಷಿಸಿ ಅವರಿಂದ ಹಣ ಸೆಳೆಯುವುದರಲ್ಲಿ ತುಂಬಾ ಜಾಣೆಯರು. ಇವರ ಉಪಜೀವನವೇ ಜಾಣತನ ವನ್ನಾಧರಿಸಿರುವುದರಿಂದ ಈ ಧಂದೆ ಅವರಿಗೆ ಅನಿವಾರ್ಯ ಹಾಗೂ ಅವರ ಜೀವನ ಕ್ರಮದಂತೆ ಸಹಜವೆಂದೇ ಹೇಳಬೇಕು. ಒಬ್ಬಾಕೆ ಬೆಕ್ಕಿನ ತಲೆ ಮೇಲೆ ದೀಪವನ್ನಿಟ್ಟು ಪಗಡೆಯಾಡಿ ಹಣ ಸಂಪಾದಿಸು ವುದರೊಂದಿಗೆ ಸೋತವರನ್ನು ಬಂಧಿಸುತ್ತಿದ್ದಳು. ನಾಯಕ ಇಲ್ಲಿ ಬೆಕ್ಕು ಓಡಿಸಿ ಪಗಡೆಯಲ್ಲಿ ಸೋಲಿಸಿ ಅವಳನ್ನು ಗೆಲ್ಲಬೇಕು.

ಜನಪದ ಕಥೆಯ ನಾಯಕ ಹೆಣ್ಣು ಹುಡುಕಿ ಹೊರಡುತ್ತಾನೆ ಎಂದೆನಲ್ಲ. ಅದು ಕಾಮಕ್ಕಾಗಿ ಅಲ್ಲ. ಜನಪದ ಕಥೆಯಲ್ಲಿ ಕಾಮವಿಲ್ಲ; ಪ್ರೇಮವಿದೆ. ಕಾಮ ಎಂಬುದು ಮಾನವ ಸಂಬಂಧ ಕಡಿಮೆ ಇರುವ ಭೋಗದ ಅಪೇಕ್ಷೆ ಅಧಿಕವಾಗಿರುವ ಒಂದು ಪರಿಕಲ್ಪನೆ ಇದು ಯಜಮಾನ ರಾಜ ಹಾಗೂ ವಿಸ್ತೃತ ಸಮಾಜದ ಭೋಗಿಗಳ ಅಪೇಕ್ಷೆ. ಹೆಂಡತಿ ಸಂತಾನಕ್ಕೆ ಹೆಣ್ಣು ಭೋಗಕ್ಕೆ ಎಂಬ ಧೋರಣೆ ಇಲ್ಲಿಯದು; ಜನಪದ ಸಮಾಜದ ಹೆಣ್ಣು ಸೇರಿದಂತೆ ಪ್ರತಿಯೊಂದನ್ನು ಪಡೆಯುವುದು ಕೊರತೆಯಾದುದನ್ನು ತುಂಬಿ ಕೊಳ್ಳುವುದಕ್ಕೆ ಹಾಸ್ಯಕಥೆಗಳಲ್ಲಿ ವಿಕೃತಕಾಮದ ಟೀಕೆ ಬರುತ್ತದೆಯೇ ಹೊರತು, ಕಾಮವನ್ನು ಪ್ರತಿಪಾದಿಸುವ ಕಥೆ ಅಲ್ಲ. ನಾಗಸಂಪಿಗೆ, ಬಾಲನಾಗಮ್ಮ, ಸಂಪಿಗೆ ರಾಣಿ, ದೇವಕನ್ಯೆ, ಇಂದ್ರಸುಂದರ ಹೆಣ್ಣನ್ನು ನಾಯಕ ತರುತ್ತಾನೆ. ಇವರನ್ನು ರಾಕ್ಷಸ ಹೊತ್ತುಕೊಂಡು ಹೋಗಿ ಇಟ್ಟುಕೊಳ್ಳುತ್ತಾನೆ. ಹಾಗೆ ಕಳ್ಳ ಕೂಡ ಹೊತ್ತುಕೊಂಡು ಹೋಗಿ ಇಟ್ಟುಕೊಳ್ಳುತ್ತಾನೆ.[೧೩] ನಾಯಕ ಬಿಡಿಸಿಕೊಂಡು ಬರುವವರೆಗೆ ಅವರು ಅಲ್ಲೇ ಇರುತ್ತಾರೆ. ಆದರೆ ಇವರು ಭೋಗಿಸಲ್ಪಟ್ಟ ಸಂಗತಿ ಬರುವುದಿಲ್ಲ. ತಿರುಗಿ ರಾಕ್ಷಸನಿಂದ ಈ ಹೆಣ್ಣನ್ನು ತಂದ ನಾಯಕ ನಮ್ಮ ಶ್ರೀರಾಮನ ಹಾಗೆ ಅವಳ ಶೀಲವನ್ನು ಪ್ರಶ್ನಿಸುವ ಮಾತು ಇರಲಿ ಆ ಪ್ರಸ್ತಾಪವೇ ಬರುವುದಿಲ್ಲ. ಈ

ಸಮಾಜಕ್ಕೆ ಕಾಮ ತಲೆ ತಿನ್ನುವ ರೋಗವಾಗಿ ಕಾಡಿದಂತಿಲ್ಲ. ಆದರೆ ಅದೇ ಹೆಣ್ಣಿನ ಶೀಲವಾಗಿಲ್ಲ. ಗಂಡಿನ ಅನುಮಾನವಾಗಿಲ್ಲ.

ಒಬ್ಬ ಶಿವಭಕ್ತ ಸೂಳೆ ಸಹವಾಸ ಮಾಡಿದ್ದರಿಂದ ಶಿಕ್ಷೆಗೆ ದೇವಲೋಕಕ್ಕೆ ಕರೆದೊಯ್ಯಲಾಗುತ್ತದೆ. ಶಿಕ್ಷೆ ಅನುಭವಿಸುತ್ತಿರುವಾಗಲೂ ಆತನು ನನಗೆ ಆ ಸೂಳೆಯೇ ಬೇಕು ಎಂದು ಅರಚುತ್ತಾನೆ. ಅವನ ಪ್ರೇಮವನ್ನು ಕಂಡ ದೇವ ಹೋಗು ಮಾರಾಯ ಅತ್ತಾಗಿ ಅವಳ ಜೊತೆಗೆ ಸುಖವಾಗಿರುತ್ತಿ ಎಂದು ಕಳುಸಿಕೊಡುತ್ತಾನೆ.[೮] ಅಳಿಯತನಕ್ಕೆ ಇಟ್ಟುಕೊಂಡವನಿಗೆ ಯಜಮಾನ ಮಗಳ ಕೊಡುವುದಿಲ್ಲ ಎನ್ನುತ್ತಾನೆ. ಅವನ ಮಗಳೇ ತನ್ನ ಭಾವಿ ಗಂಡನೊಡನೆ ಓಡಿ ಹೋಗುತ್ತಾಳೆ. ದಾರಿಯಲ್ಲಿ ಕುದುರೆಸಾಬಿ ಕಳ್ಳ ಅವಳನ್ನು ವಶಪಡಿಸಿಕೊಳ್ಳಲು ಬೆನ್ನು ಹತ್ತುತ್ತಾನೆ. ಅವರಿಗೆ ಆಕೆ ಮಣ್ಣು ಮುಕ್ಕಿಸುತ್ತಾಳೆ. ಒಂದು ಕಳ್ಳರ ಗುಂಪೇ ಅವಳನ್ನು ಮಂಚದ ಸಹಿತ ಹೊತ್ತುಕೊಂಡು ಹೋಗುತ್ತದೆ. ಕಳ್ಳನ ತಾಯಿಯೊಬ್ಬಳು ಮಗನಿಗಾಗಿ ಅವಳನ್ನು ವಶಪಡಿಸಿಕೊಳ್ಳಲು ಯತ್ನಿಸುತ್ತಾಳೆ. ಆಕೆ ಅಂಥ ಯಾರಿಗೂ ದಕ್ಕದೆ ತಾನು ಪ್ರೀತಿಸಿದವನ ಹತ್ತಿರ ಬರುತ್ತಾಳೆ. ಅವನೋ ದೊಡ್ಡ ಸೋಂಬೇರಿ, ಅವಳು ಉಣ್ಣು ಎಂದಾಗ ಉಂಡು, ಮಲಗು ಎಂದಾಗ ಮಲಗುವವನು. ಹೆಂಡತಿಯನ್ನು ತನ್ನವಳು ಎಂಬುದರ ಹೊರತು ಬೇರೇನೂ ಎಣಿಸದ ಮಹಾತ್ಮ.

ನಾಯಕರು ಹೆಣ್ಣು ಹುಡುಕಿ ಹೊರಟಾಗ ಸಂಪತ್ತನ್ನು, ರಾಜ್ಯವನ್ನು ಗೆಲ್ಲಲು ಹೊರಟಾಗ ಹೆಣ್ಣನ್ನು ಜೊತೆ ಜೊತೆಯಾಗಿಯೇ ಪಡೆಯುತ್ತಾರೆ. ಇಲ್ಲಿ ಹೆಣ್ಣು ಆಸ್ತಿಯಾಗಿದ್ದಾಳೆ. ಹಾಗೂ ಹೆಣ್ಣಿನ ಜೊತೆಗೆ ಆಸ್ತಿ ಇದೆ. ಆದರೆ ಹೆಣ್ಣು ಆಸ್ತಿಯ ಒಡತಿಯಾಗಿದ್ದಾಳೆಂಬುದನ್ನು ನಿರ್ದಿಷ್ಟವಾಗಿ ಹೇಳಲು ಬರುವುದಿಲ್ಲ. ನಮ್ಮ ಜನಪದ ಕಥೆಯ ನಾಯಕ ಪರದೆಯ ಇತರ ಗಂಡು/ಹೆಣ್ಣು ಮಕ್ಕಳಲ್ಲಿ ಕೊನೆಯವನು ಅಥವಾ ಕೊನೆಯವಳು. ಈ ಕಿರಿಯ ಅಥವಾ ಕಿರಿಯವಳೇ ಮನೆಯಿಂದ ಹೊರಗೆ ಸಾಹಸಕ್ಕೆ ಸಂಪತ್ತಿಗೆ, ಅನ್ವೇಷಣೆಗೆ ಹೊರಡುವುದು ಎಂದರೆ ಆ ಮನೆಯ ಆಸ್ತಿ ಹಿರಿಯ ಮಕ್ಕಳ ಅಥವಾ ಮಗನಿಗೆ ಸೇರಿದೆ. ಆಸ್ತಿಯ ಹಕ್ಕು ಹಿರಿಯ ಮಗನಿಗೆ ಇದ್ದು ಕಿರಿಯರು ತಮ್ಮ ಸಂಪತ್ತನ್ನು ತಾವೇ ಪಡೆದುಕೊಳ್ಳಬೇಕಾಗಿತ್ತು ಎಂಬ ವಾದವನ್ನು ನಾವು ಮುಂದಿಡಬಹುದು. ಆಸ್ತಿ ಮತ್ತು ಹುಟ್ಟಿನ ಜೊತೆಗೆ ನಿಕಟ ಸಂಬಂಧ ಇರುವಂತೆ ತೋರುತ್ತದೆ. ಮೊದಲ ಹುಟ್ಟು ಮನೆಯದು. ಎರಡನೆ ಹುಟ್ಟು ಹೊರಗಿನದು ಎಂಬ ನಿಯಮ ಬಳಕೆಯಲ್ಲಿದ್ದಿರಬಹುದು. ಈಗ ನಮ್ಮಲ್ಲಿ ಗಂಡು ಮಗ ಮನೆಯವನು, ಹೆಣ್ಣು ಮಗಳು ಹೊರಗೆ ಹೋಗುವವಳು ಎಂಬ ನಿಯಮದ ಹಾಗೆ.

ಮತ್ತೊಂದು ಕಡೆ ಹೆಣ್ಣಿಗೆ ಅರ್ಧ ಆಸ್ತಿಯ ಹಕ್ಕು ಇರುವಂತೆ ತೋರುತ್ತದೆ. ರಾಜ ತನ್ನ ರಾಜ್ಯಕ್ಕೆ ಬಂದಿರುವ ಆಪತ್ತನ್ನು ತಪ್ಪಿಸಿದವನಿಗೆ ಅರ್ಧರಾಜ್ಯ ಮತ್ತು ಮಗಳನ್ನು ಕೊಟ್ಟು ಮದುವೆ ಮಾಡುತ್ತೇನೆ ಎಂದು ಡಂಗುರ ಹೊಡಿಸುತ್ತಾನೆ. ಕೆಲಸ ಸಾಧ್ಯ ಮಾಡಿದವನಿಗೆ ಏನು ಆಸ್ತಿ ಇಲ್ಲದಿದ್ದಾಗ ಅನುಕೂಲವಾಗುತ್ತದೆ. ಸಾಮಾನ್ಯವಾಗಿ ಇಂಥ ಆಪತ್ತನ್ನು ಎದುರಿಸಲು ಬರುವವನು ಬಡವನಾದ ನಾಯಕ ಅಥವಾ ಆಸ್ತಿಯನ್ನು ತನ್ನ ಮನೆಯಲ್ಲಿ ಬಿಟ್ಟು ಬಂದು ರಾಜನ ಕಿರಿಯ ಮಗ ಇದನ್ನು ಹೆಣ್ಣಿಗೆ ಆಸ್ತಿಯಲ್ಲಿ ಇರುವ ಸಮಾನ ಹಕ್ಕು ಎಂದು ಪ್ರತಿಪಾದಿಸುವುದು ಕಷ್ಟ. ಹೋರಾಟ ಮತ್ತು ಬದುಕಿನ ಸಂಕೀರ್ಣ ಸಂದರ್ಭವೊಂದರಲ್ಲಿ

ಆಸ್ತಿ ಹಂಚಿಕೆಯಾಗುತ್ತದೆ ಎಂದು ಹೇಳಬಹುದು. ಇದಕ್ಕೆ ಕೆಲವು ಸಮರ್ಥನೆಗಳಿವೆ. ರಾಜ ತನಗೆ ಬರಬಾರದ ರೋಗ ಬಂದು ಅದಕ್ಕೆ ತಕ್ಕ ಔಷಧಿ ತಂದು ಕೊಟ್ಟವರಿಗೆ ಅರ್ಧರಾಜ್ಯ ಕೊಡುವುದಾಗಿ ಹೇಳುತ್ತಾನೆ. ತನ್ನ ಖುಷಿಗೆ ಅಥವಾ ಘನತೆಗೆ ತಕ್ಕುದಾದ ವಸ್ತುವೊಂದು ತನ್ನ ರಾಜ್ಯದ ಹೊರಗೆ ಬೇರೆಯವರ ಅಧೀನದಲ್ಲಿದೆ ಎಂದಾಗ ಅದನ್ನು ತಂದುಕೊಟ್ಟವರಿಗೆ ಅರ್ಧರಾಜ್ಯ ಕೊಡುತ್ತೇನೆ ಎಂದು ಸಾರುವುದೂ ಉಂಟು. ಜೊತೆ ಜೊತೆಯಲ್ಲಿ ತನ್ನ ಮಗಳನ್ನು ಕೊಟ್ಟು ಮದುವೆ ಮಾಡುವುದಾಗಿ ಹೇಳುವುದೂ ಉಂಟು. ಈ ವಿವರಣೆ ಈ ಕಾಲಕ್ಕೆ ಹೆಣ್ಣು, ಹೊನ್ನು ಮತ್ತು ಮಣ್ಣು ಪರಸ್ಪರ ಪದವಿ ಹಾಗೂ ಅಸ್ತಿತ್ವದ ಮೂಲ ಪರಿಕರಗಳಾಗಿದ್ದುದೇ ಎಂದು ಆಲೋಚಿಸುವಂತೆ ಮಾಡುತ್ತದೆ. ಹಾಗಿದ್ದಲ್ಲಿ ಗಂಡಿನ ಚಲನೆಯ ಕಾಲ ಇದಾಗಿತ್ತು ಎಂದು ಹೇಳಬೇಕಾಗುತ್ತದೆ.

ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿ ವಿಭಿನ್ನ ಸ್ವರೂಪದ ಪ್ರೇಮ ಕಂಡುಬರುತ್ತದೆ. ಹೆಣ್ಣು-ಗಂಡು ತಮ್ಮ ಪ್ರೀತಿ-ಪ್ರೇಮಕ್ಕಾಗಿ ತ್ಯಾಗ ಮಾಡುವ, ತ್ಯಜಿಸುವ ಕಥೆಗಳು ವಿರಳವಾಗಿ ಕಂಡುಬರುತ್ತವೆ. ಆದರೆ ಷರತ್ತುಗಳನ್ನು ಗೆದ್ದು ಮದುವೆಯಾಗುವ, ಸುಂದರ ವಿವಾಹಿತ ಸ್ತ್ರೀಯನ್ನು ಮೋಹಿಸುವ ಮತ್ತು ವಿವಾಹವಾಗುವ ಜನಪದ ಕಥೆಗಳು ಸಾಕಷ್ಟು ಕಂಡುಬರುತ್ತವೆ. ಬಹುಪತ್ನಿತ್ವ ಪದ್ಧತಿ ಹಿಂದಿನ ಕಾಲದಿಂದಲೂ ಹೆಚ್ಚು ಪ್ರಚಲಿತದಲ್ಲಿದ್ದ ಕಾರಣ ಹೈದರಾಬಾದ್-ಕರ್ನಾಟಕದ ಪ್ರದೇಶದ ಜನಪದ ಕಥೆಗಳಲ್ಲೂ ಅದು ಪ್ರವೇಶ ಪಡೆದಿದೆ. ನಿಜಾಮರ ಕಾಲದಲ್ಲಿ ಇಸ್ಲಾಂ ಧರ್ಮ ಹೆಚ್ಚು ಪ್ರಭಾವ ಬೀರಿರುವುದರಿಂದಲೂ ಬಹುಪತ್ನಿತ್ವಕ್ಕೆ ಮನ್ನಣೆ ದೊರೆತಿರುವುದನ್ನು ಇತಿಹಾಸ ದೃಢಪಡಿಸುತ್ತದೆ. ಇತಿಹಾಸ ಮರುಕಳಿಸುತ್ತದೆ ಎಂಬಂತೆ ಜನಪದರು ತಮ್ಮ ಕಥಾಹಂದರ ಸಮಾಜದ ವಾಸ್ತವತೆಯನ್ನು ಸೇರ್ಪಡೆಗೊಳಿಸಿರುವುದರಲ್ಲಿ ಹೆಚ್ಚುಗಾರಿಕೆ ಏನೂ ಕಂಡುಬರುವುದಿಲ್ಲ.

ಅಧ್ಯಯನಕ್ಕೆ ಆಯ್ದುಕೊಂಡ ಬಹುತೇಕ ಜನಪದ ಕಥೆಗಳು ವಾಸ್ತವತೆಗೆ ಹತ್ತಿರವಾಗಿವೆ ಮತ್ತು ಅತಿಮಾನುಷ ಶಕ್ತಿಯನ್ನು ಸೇರ್ಪಡೆಗೊಳಿಸಿಕೊಂಡಿವೆ. ರಾಜಕುಮಾರಿಯನ್ನು ಮದುವೆಯಾಗಬೇಕಾದರೆ ರಾಜನ ಕಣ್ಣು ಬರಿಸಬೇಕು. ತೋಡಿದ ಬಾವಿಯಲ್ಲಿ ನೀರು ಭರಿಸಿದರೆ ರಾಜಕುಮಾರಿಯನ್ನು ವರಿಸಬಹುದು, ರಾಜಕುಮಾರಿಯನ್ನು ಮದುವೆಯಾದವರಿಗೆ ಅರ್ಧ ರಾಜ್ಯ ಕೊಡುವುದು. ಹೀಗೆ ಈ ರೀತಿಯ ಷರತ್ತುಬದ್ಧ ಸಂಬಂಧಗಳಿರುವುದನ್ನು ಕಥೆಗಳಲ್ಲಿ ಗಮನಿಸಬಹುದು.

"ಮಗಿ ಹೆಣ್ಣು" ಕಥೆ ಗಂಡು-ಹೆಣ್ಣಿನ ಪ್ರೇಮದ ಸ್ವರೂಪವನ್ನು ತಿಳಿಸುವ ಒಂದು ಜನಪದ ಕಥೆ. ಸೋಮಾರಿ ನಿಂಗಮ್ಮಳಿಗೆ ಬುದ್ಧಿ ಕಲಿಸಬೇಕೆಂದು ಊರಿನ ಹನುಮಂತ ದೇವರು ಗರ್ಭದಾನ ಮಾಡುತ್ತಾರೆ. ಮೈಗಳ್ಳಿ ನಿಂಗಮ್ಮ ಮಗಿಯೊಂದಕ್ಕೆ ಜನ್ಮ ನೀಡುತ್ತಾಳೆ. ಕೋರಿಯೊಂದರಲ್ಲಿ ಮಗಿಯನ್ನು ಸುತ್ತಿ ಅಡಕಲ ಸಂದಿನಲ್ಲಿಡುತ್ತಾಳೆ. ರಾಜನೊಬ್ಬನ ಮೂರನೇ ಮಗನಿಗೆ ಮದುವೆ ಸಂಬಂಧ ಪ್ರಧಾನಿ ಹೆಣ್ಣು ಹುಡುಕುತ್ತಾ ಹುಡುಕುತ್ತಾ ಮೈಗಳ್ಳಿ ನಿಂಗಮ್ಮ ಹತ್ತಿರ ಬಂದಾಗ "ರಾಜಕುಮಾರನಿಗೆ ನಾನು ಹೆಣ್ಣು ಕೊಡುತ್ತೇನೆ. ಆದರೆ ಆಕೆ ಬಹಳ ಸೂಕ್ಷ್ಮ. ಪೆಟಾರಿಯಲ್ಲಿದ್ದಾಳೆ. ಮದುವೆಯಾದ ಮೂರನೇ ತಿಂಗಳಿಗೆ ಹೊರಗೆ ಬರುತ್ತಾಳೆ

ಎಂದು ಹೇಳುತ್ತಾಳೆ. ಪ್ರಧಾನಿ ರಾಜನಿಗೆ ವಿಷಯ ತಿಳಿಸಿ ಮದುವೆ ಮಾಡುತ್ತಾನೆ. ನಂತರ ರಾಜಕುಮಾರ ಬೇಸರಪಟ್ಟುಕೊಂಡಿರುತ್ತಾನೆ. ಮಗಿಗೆ ದನ ಕಾಯುವ ಕೆಲಸವನ್ನು ರಾಜ ಆಜ್ಞಾಪಿಸುತ್ತಾನೆ.

ರಾಜ ಮಗನಿಗೆ ಇನ್ನೊಂದು ಮದುವೆ ಮಾಡಲು ಹೆಣ್ಣು ಹುಡುಕುತ್ತಾನೆ. ಹೆಣ್ಣನ್ನು ನಿಶ್ಚಯಿಸಿರುತ್ತಾನೆ. ಇದನ್ನು ತಿಳಿದ ಮಗಿ ಹೆಣ್ಣಾಗಿ ಆ ಮನೆಗೆ ಹೋಗಿ ಮದುವೆಯಾಗುವ ಹುಡುಗಿಯ ಹಲ್ಲು ಹೋಗುವಂತೆ ಮಾಡುತ್ತಾಳೆ. ರಾಜ ಮತ್ತೊಂದು ಹುಡುಗಿ ನೋಡಿ ಮದುವೆ ಮಾಡಿಸಲು ಮಗಿ ರೂಪದ ಈ ಹೆಣ್ಣು ಹುಡುಗಿ ಮನೆಗೆ ಹೋಗಿ ತಲೆ ಕೂದಲು ಹೋಗುವಂತೆ ಮಾಡಿದಳು. ಹನುಮಂತ ದೇವರ ಜಾತ್ರೆ ದಿನ ಮನೆಯಲ್ಲಿಯೇ ಅಡಗಿ ಕುಳಿತಿದ್ದ ರಾಜಕುಮಾರನಿಗೆ ಮಗಿ ರೂಪದ ತನ್ನ ಮೊದಲ ಹೆಂಡತಿಯ ನಿಜ ರೂಪ ತಿಳಿಯಿತು. ಹನುಮಂತ ದೇವರು ಪ್ರತ್ಯಕ್ಷರಾಗಿ ಆಶೀರ್ವದಿಸಿದರು ಮಗಿ ರೂಪದ ಹೆಣ್ಣು ರಾಜಕುಮಾರನ ಜೊತೆ ಇರುವ ತನ್ನ ಪ್ರೀತಿಯನ್ನು, ಪ್ರೇಮವನ್ನು ಕೊನೆಗೆ ತೋರ್ಪಡಿಸಿದಳು. ಪ್ರೀತಿಯಿರುವುದರಿಂದಲೇ ತನ್ನ ಮನೆಗೆ ಇತರೆ ಹೆಣ್ಣು ಮದುವೆಯಾಗಿ ಬರುವುದನ್ನು ತಡೆದಳು.

'ಮಲಸೆಟ್ಟಿಯ ಸಣ್ಣ ಸೊಸೆ' ಜನಪದ ಕಥೆಯಲ್ಲಿ ಮಲಸೆಟ್ಟಿಯ ಮೂರನೇ ಸೊಸೆಯ ಚಂದವನ್ನು, ಬುದ್ಧಿವಂತಿಕೆಯನ್ನು ಕಂಡು ರಾಜಕುಮಾರ ಮೋಹಿತನಾಗುತ್ತಾನೆ. ಮದುವೆ ಆದರೆ ಅವಳನ್ನೇ ಮದುವೆಯಾಗುವುದು ಎಂದು ಹಠ ಹಿಡಿಯುತ್ತಾನೆ. ಅನೇಕ ಉಪಾಯಗಳನ್ನು ಹುಡುಕಿದರೂ ಬುದ್ಧಿವಂತೆ ಸೊಸೆ ಮಾತ್ರ ಆತನಿಗೆ ಸಿಗುವುದಿಲ್ಲ. ತನ್ನ ಪ್ರೇಮವನ್ನು ತೋರ್ಪಡಿಸಿದರೂ ತನ್ನ ಷರತ್ತು, ಪ್ರಶ್ನೆಗಳಿಗೆ ಸೋತ ರಾಜಕುಮಾರನಿಗೆ ಆಕೆಯ ಪ್ರೀತಿ ಸಿಗುವುದಿಲ್ಲ. ಈ ಜನಪದ ಕಥೆಯಲ್ಲಿ ನಿರೂಪಿತವಾದಂತೆ ರಾಜಕುಮಾರನಿಗೆ ತನ್ನ ಪ್ರೀತಿ, ಪ್ರೇಮವನ್ನು ಮಲಸೆಟ್ಟಿಯ ಸೊಸೆಯೊಂದಿಗೆ ನಿವೇದಿಸಿದರೂ ದಕ್ಕದಿರುವುದು. ಹಾಗೆಯೇ ಅಧಿಕಾರವಿರುವ ರಾಜಕುಮಾರ ಏನು ಬೇಕಾದರೂ ಮಾಡಬಹುದಿತ್ತು. ಆದರೆ ಮಾನವೀಯತೆ ಮರೆಯುವ ರಾಜಕುಮಾರನಿಗೆ ಮಲಸೆಟ್ಟಿಯ ಸೊಸೆ ಸಿಗುವುದಿಲ್ಲ. ಅಮಾನವೀಯತೆಯ ದುಷ್ಟಬುದ್ಧಿಗೆ ಕೈ ಹಾಕದಿರುವ ರಾಜಕುಮಾರ ಕಥೆಯ ಕೇಂದ್ರಬಿಂದುವಾಗುತ್ತಾನೆ. ಪ್ರೇಮ ನಿವೇದನೆಯನ್ನು ನಯವಾಗಿ, ಚಾಕಚಕ್ಯತೆಯಿಂದ ನಿರಾಕರಿಸಿದ ಮಲಸೆಟ್ಟಿಯ ಸೊಸೆಯ ಬುದ್ಧಿವಂತಿಕೆ ಕಥೆಯ ಜೀವಾಳ.

ಈ ರೀತಿಯ ಬುದ್ಧಿವಂತಿಕೆಯಿಂದಲೇ ಅನಾಹುತಗಳನ್ನು ತಪ್ಪಿಸುವ ಹೆಣ್ಣುಮಕ್ಕಳ ಮತ್ತು ಗಂಡುಮಕ್ಕಳ ಜನಪದ ಕಥೆಗಳು ಹೈದರಾಬಾದ್-ಕರ್ನಾಟಕ ಪ್ರದೇಶಗಳಲ್ಲಿ ಕಂಡುಬರುತ್ತವೆ. ಬದಲಾವಣೆ ನಿರಂತರತೆಯಿಂದ ಕೂಡಿರುತ್ತದೆ. ಹಾಗೆಯೇ ನಮ್ಮ ಸಮಾಜದಲ್ಲಿ ಓರೆಕೋರೆಗಳಿರುವುದು ಸಹಜ. ಈ ಓರೆಕೋರೆಗಳು, ಒಳಿತು-ಕೆಡುಕುಗಳು ಜನಪದ ಕಥೆಗಳಲ್ಲಿ ಪ್ರತಿಧ್ವನಿಸುತ್ತವೆ. ಮುಕ್ತ ಲೈಂಗಿಕತೆ, ಮುಕ್ತ ಮಾತುಕತೆ, ಮುಕ್ತ ಪ್ರಣಯ ಹಾಗೂ ಆಶೆ-ಆಕಾಂಕ್ಷೆಗಳ ಸರಣಿಯನ್ನೇ ಜನಪದ ಕಥೆಗಳಲ್ಲಿ ಕಾಣುತ್ತೇವೆ. ಇಲ್ಲಿ ಕಥೆಗಾರರ ಜಾಣ್ಮೆ, ತಾಳ್ಮೆಗಳನ್ನು ಗಮನಿಸಬೇಕು. ಹಾಗೆಯೇ ಕಥೆಗಳ ಆಶಯ ದುಷ್ಟರಿಗೆ, ಕೆಡುಕನ್ನುಂಟುಮಾಡುವವರಿಗೆ ತಕ್ಕ ಶಿಕ್ಷೆ ಹಾಗೂ ಮಾನವೀಯತೆಗೆ, ಒಳಿತನ್ನುಂಟು ಮಾಡುವವರಿಗೆ ರಕ್ಷಣೆಯಾಗಬೇಕು. ಈ ಹಿನ್ನೆಲೆಯಿಂದಲೇ ಅನೇಕ ಜನಪದ ಕಥೆಗಳು "ಸುಖವಾಗಿದ್ದಾರೆ ಅಲ್ಲಿ ಅವರು ಇಲ್ಲಿ ನಾವು" ಎಂಬ ಮಾತಿನೊಂದಿಗೆ ಮುಕ್ತಾಯವನ್ನು ಕಾಣುತ್ತವೆ. ಇಲ್ಲಿ ಜನಪದ ಆಶಯ, ಉದ್ದೇಶಗಳನ್ನು ನಾವು ಗಮನಿಸಲೇಬೇಕು.

ಹೈದರಾಬಾದ್ ಕರ್ನಾಟಕ ಪ್ರದೇಶದ ಜನಪದ ಕಥೆಗಳಲ್ಲಿ ಗಂಡು-ಹೆಣ್ಣಿನ ಮಧ್ಯೆ ಪ್ರೇಮ-ಪ್ರಣಯ ಮತ್ತು ವಿಘಟನೆಗಳು ಯಾವುದೇ ರೀತಿಯ ಭೀಕರ ಸಂಘರ್ಷಗಳನ್ನುಂಟು ಮಾಡುವುದಿಲ್ಲ. ಗಾಂಧರ್ವ ವಿವಾಹ, ವಿವಾಹಿತೆಯ ಜೊತೆಗಿನ ಸಂಬಂಧ, ಗಂಡ-ಹೆಂಡತಿಯರ ವಿಘಟನೆ, ತಂದೆ-ಮಗನ, ತಾಯಿ-ಮಗನ ವಿಘಟನೆ, ರಾಜ-ರಾಣಿಯರ ವಿಘಟನೆಗಳೆಲ್ಲವೂ ನಡೆದರೂ ಅಂತಿಮವಾಗಿ ಪ್ರೀತಿ-ಪ್ರೇಮದಲ್ಲಿ ಪರ್ಯಾವಸಾನವಾಗುವಂತೆ ಕಂಡುಬರುತ್ತದೆ.

**ಅಡಿಟಿಪ್ಪಣಿ**

೧. ಬಸವರಾಜ ಆಕಲವಾಡಿ, 'ಜನಪದರ ಬಾಳಿನ ಪ್ರಣಯ', 'ಜನಪದ ಜಗತ್ತು', ಡಿಸೆಂಬರ್ ೨೦೦೬, ಪು. ೪

೨. ವೀರಣ್ಣದಂಡೆ, 'ಕಲಬುರ್ಗಿ ಜಿಲ್ಲೆಯ ಜನಪದ ಕಥೆಗಳ ಆಶಯ ಮತ್ತು ಮಾದರಿಗಳು', ಸಿವಿಸಿ ಪಬ್ಲಿಕೇಷನ್, ಬೆಂಗಳೂರು, ೨೦೦೩, ಪು. ೧೨೨

೩. ಅದೇ ಪು. ೧೨೨

೪. ಬಸವರಾಜ ಪೊಲೀಸ್ ಪಾಟೀಲ್, ಜಗನ್ನಾಥ ಹೆಬ್ಬಾಳೆ, 'ಜನಪದ ಕಥೆಗಳ ಸಂಗ್ರಹ', ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫, ಪು. ೧೬

೫. ರಾಜಪ್ಪ ಟಿ.ಎಸ್. 'ರಾಯಚೂರು ಜಿಲ್ಲೆಯ ಜನಪದ ಕಥೆಗಳು' ಸಾಗರ ಪ್ರಕಾಶನ, ಬೆಂಗಳೂರು, ೨೦೧೨, ಪು. ೩೫

೬. ಬಸವರಾಜ ಪೊಲೀಸ್ ಪಾಟೀಲ್, ಜಗನ್ನಾಥ ಹೆಬ್ಬಾಳೆ, 'ಜನಪದ ಕಥೆಗಳ ಸಂಗ್ರಹ', ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫, ಪು. ೧೮

೭. ಅದೇ ಪು. ೩೧

೮. ಅದೇ ಪು. ೨೫

೯. ಅದೇ ಪು. ೪೩

೧೦. ಅದೇ ಪು. ೫೧

೧೧. ವೀರಣ್ಣದಂಡೆ, 'ಆಯ್ದ ಜನಪದ ಕಥೆಗಳು', ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೧೧, ಪು. ೨

೧೨. ಅದೇ ಪು. ೧೨

೧೩. ಅದೇ ಪು. ೨೪

೧೪. ಅದೇ ಪು. ೨೫

ಅಧ್ಯಾಯ ಐದು

# ಹೈದರಾಬಾದ್ ಕರ್ನಾಟಕದ ಜನಪದ ಕಥಾಸಾಹಿತ್ಯದಲ್ಲಿ ವಿವಾಹ ಪದ್ಧತಿಯ ಸ್ವರೂಪ

**ಮಾ**ನವ ಇತರ ಪ್ರಾಣಿಗಳಂತೆ ಲೈಂಗಿಕ ಪ್ರಚೋದನೆಯನ್ನು ಹೊಂದಿರುವನಾದರೂ ಅದನ್ನು ಪೂರೈಸಿಕೊಳ್ಳುವಾಗ ಬೇರೆ ಪ್ರಾಣಿವರ್ಗದಂತೆ ಸ್ವಚ್ಛಂದವಾಗಿ ವರ್ತಿಸಲಾರ. ಏಕೆಂದರೆ ಮಾನವ ಸಮಾಜ ಅದನ್ನು ವೈಯಕ್ತಿಕ ಅಥವಾ ಜೈವಿಕವೆಂದು ಭಾವಿಸದೆ ಸಾಮಾಜಿಕ ಹಾಗೂ ನೈತಿಕ ವಿಷಯವೆಂದು ಪರಿಗಣಿಸಿದೆ. ಆದ್ದರಿಂದಲೇ ಪ್ರತಿ ಮಾನವ ಸಮುದಾಯವೂ ಅಂಗೀಕಾರಾರ್ಹ ಸಂಗತಿಗಳ ನಡುವೆ ಉನ್ನತ ಸ್ತರದ ಹಾಗೂ ಸ್ಥಿರವಾದ ಸಂಬಂಧವೊಂದನ್ನು ಅಪೇಕ್ಷಿಸುತ್ತದೆ. ಅದನ್ನೇ 'ವಿವಾಹ', 'ಮದುವೆ' ಎಂದು ಕರೆದು ಗಂಡು ಹೆಣ್ಣುಗಳನ್ನು ಒಂದು ವ್ಯವಸ್ಥಿತ ಕುಟುಂಬ ಜೀವನಕ್ಕೆ ಒಳಪಡಿಸುವುದು.

ಮಾನವ ಜೀವನದಲ್ಲಿ ವಿವಾಹ ಒಂದು ಮಹತ್ವದ ಘಟ್ಟ. ಅಪರಿಚಿತರಾದ ಹೆಣ್ಣು-ಗಂಡನ್ನು ಒಂದುಗೂಡಿಸಿ ಬಾಳಸಂಗಾತಿಗಳನ್ನಾಗಿ ಮಾಡುವ ಒಂದು ವಿಶಿಷ್ಟ ಸಂದರ್ಭ. "ಜೀವನದಲ್ಲಿ ಒಮ್ಮೆ ಮಾತ್ರ ಜರುಗಬಹುದಾದ ಘಟನೆ. ಬದುಕಿಗೆ ಒಂದು ಭದ್ರತೆಯನ್ನು, ಜವಾಬ್ದಾರಿಯನ್ನು ತಂದುಕೊಡುತ್ತದೆ. ಜೀವನಕ್ಕೆ ಉತ್ಸಾಹವನ್ನು ಆನಂದವನ್ನು ತುಂಬುತ್ತದೆ. ಗಂಡು-ಹೆಣ್ಣುಗಳನ್ನು ಜೀವದ ರಸಾಯನಕ್ಕೆ ತೊಡಗಿಸುವ ಒಂದು ಮಂಗಳಕರ ಪ್ರಸಂಗವಾಗುತ್ತದೆ. ಎರಡು ಕುಟುಂಬಗಳ ನಡುವೆ ಹೊಸ ಸಂಬಂಧವನ್ನು ಬೆಳೆಸುತ್ತದೆ. ಎರಡು ಕುಟುಂಬಗಳು ಎರಡು ಊರುಗಳಲ್ಲಿ ಹಂಚಿಕೊಂಡಿದ್ದರೆ ಆ ಎರಡು ಊರುಗಳ ನಡುವೆ ಮಧುರ ಬಾಂಧವ್ಯವನ್ನು ಏರ್ಪಡಿಸುತ್ತದೆ.[೧]

ಎಲ್ಲ ಮಾನವ ಸಮಾಜಗಳಲ್ಲೂ ಮದುವೆಯ ಉದ್ದೇಶ ಒಂದೇ ಆಗಿದ್ದರೂ, ಮದುವೆಯನ್ನು ನಡೆಸುವ ಪದ್ಧತಿಗಳು ಬೇರೆ ಬೇರೆ ಆಗಿರುತ್ತವೆ. ಸಮಾಜ ನೆಲೆಗೊಂಡ ಪರಿಸರ, ಬದುಕಿನ ಸ್ಥಿತಿಗತಿ, ಧರ್ಮ, ನಂಬಿಕೆ ಇವೇ ಮೊದಲಾದ ಅಂಶಗಳಿಗನುಗುಣವಾಗಿ ಮದುವೆ ಪದ್ಧತಿ ರೂಪುಗೊಂಡಿದೆ.

ಕಾಲಕ್ಕನುಗುಣವಾಗಿ ಮದುವೆಯ ಪದ್ಧತಿಗಳಲ್ಲೂ ಹಲವು ಬದಲಾವಣೆಗಳಾಗಿವೆ. ನಿರ್ದಿಷ್ಟ ಸಮಾಜವೊಂದರಲ್ಲಿ ಜರುಗುವ ಮದುವೆ ಆಚರಣೆಯ ಅಧ್ಯಯನವೆಂದರೆ, ಆ ಸಮಾಜದ ಸಂಸ್ಕೃತಿಯ ಅಧ್ಯಯನವೇ ಸರಿ. ಕಾರಣ ಮದುವೆ ಕೂಡ ಆ ಸಮಾಜದ ಒಂದು ಸಾಂಸ್ಕೃತಿಕ ಕ್ರಿಯೆ.

ಇಡೀ ಸಮಾಜ ಅಥವಾ ಆ ಸಮಾಜದ ಬಹುಪಾಲು ಸಮೂಹ ಆ ಕ್ರಿಯೆಯಲ್ಲಿ ಭಾಗಿಯಾಗಿರುವುದನ್ನು ಕಾಣಬಹುದು. ಜನಪದರ ಮದುವೆಗಳು ಪಟ್ಟಣದ ಮದುವೆಗಳಂತೆ ಕೇವಲ ಕೆಲವೇ ವ್ಯಕ್ತಿಗಳ ಸಮ್ಮುಖದಲ್ಲಿ ಆಗುವುದಿಲ್ಲ. ಹತ್ತೂರಿನ ಜನಕ್ಕೆ ಆಹ್ವಾನ ಹೋಗುತ್ತದೆ. ಹಳೆಯ ಸಂಬಂಧಿಗಳು, ನೆಂಟರು, ಇಷ್ಟರು ಮೊದಲಾದವರೆಲ್ಲರೂ ಆ ಸಂದರ್ಭದಲ್ಲಿ ಕುಟುಂಬ ಸಮೇತರಾಗಿ ಬಂದು ಕ್ರಿಯಾತ್ಮಕವಾಗಿ ಪಾಲ್ಗೊಳ್ಳುತ್ತಾರೆ. ಸಾಮಾನ್ಯವಾಗಿ ಈ ಜನಪದರ ಮದುವೆಗಳು, ಹಬ್ಬ-ಹರಿದಿನಗಳು ನಡೆಯುವಷ್ಟು ಅದ್ದೂರಿಯಿಂದ ನಡೆಯುತ್ತವೆ. ಹತ್ತು ಹಲವು ಕಾರಣಗಳಿಂದ ಮುರಿದು ಹೋಗಿದ್ದ ಸಂಬಂಧಗಳು ಮದುವೆಯ ಸಂದರ್ಭದಲ್ಲಿ ಒಂದಾಗುತ್ತವೆ.

ಜನಪದರಿಗೆ ತಮ್ಮ ಮಕ್ಕಳ ಮದುವೆಯನ್ನು ಕಿರಿಯ ವಯಸ್ಸಿಗೆ ಮಾಡಿಬಿಟ್ಟರೇ ನೆಮ್ಮದಿ. ಈ ವಿಷಯದಲ್ಲಿ ಹಿಂದಿನಿಂದ ರೂಢಿಯಲ್ಲಿ ಬಂದ ಸಂಪ್ರದಾಯ, ಆಚಾರ, ನಡವಳಿಕೆಗಳನ್ನು ಮತ್ತು ಶಾಸ್ತ್ರ ಸಂಬಂಧಗಳನ್ನು ಚಾಚುತಪ್ಪದಂತೆ ಮುಂದುವರೆಸಿಕೊಂಡು ಹೋಗಲು ಬಯಸುತ್ತಾರೆ. ಇವರು ಮದುವೆಗಳನ್ನು ಅವರವರ ಅಂತಸ್ತಿಗೆ ತಕ್ಕಂತೆ ಮಾಡಿದರೂ ಈ ಸಮಯದಲ್ಲಿ ಧಾರಾಳತನ ಸ್ವಲ್ಪ ಜಾಸ್ತಿ. ಮದುವೆ ಸಂದರ್ಭದಲ್ಲಿ ಸುತ್ತಲ ಹನ್ನೆರಡು ಹಳ್ಳಿಗಳಿಗೆ ಆಹ್ವಾನ. ಹಾದಿಗೆ ಹಂದ್ರ ಹಾಕಿ ಬೀದಿಗೆ ಚಳಾರ ಒಡಿಸಿ ಮದುವೆ ಮಾಡುವುದಾಗಿ ಅನೇಕ ಕಥೆಗಳಲ್ಲಿ ಮೂಡಿಬಂದಿದೆ. ಈ ಕಥೆಗಳನ್ನು ನೋಡಿದಾಗ ಯಾವ ಕತೆಯಲ್ಲಿಯೂ ಬಾಲ್ಯವಿವಾಹದ ಬಗ್ಗೆ ಪ್ರಸ್ತಾಪವಿಲ್ಲ. ಒಬ್ಬ ಹೆಣ್ಣುಮಗಳು ಮೈನೆರೆದ ಮೇಲೆನೇ ಅವಳಿಗೆ ಮದುವೆ ಮಾಡುವುದಾಗಿ ಪ್ರಸ್ತಾಪ ಬಂದಿದೆ.

ಜನಪದರ ಬದುಕಿನಲ್ಲಿ ಯಾವುದೇ ಗಂಡಿಗಿರುವಷ್ಟು ಸ್ಥಾನಮಾನಗಳು ಹೆಣ್ಣಿಗೂ ಇರುತ್ತವೆ. ಗಂಡಿಗೆ ಹೆಣ್ಣು ಹಲವು ರೀತಿಯಲ್ಲಿ ಸಹಕಾರಿಯಾಗುತ್ತಾಳೆ. ಕೆಲವು ವಿಷಯಗಳಲ್ಲಿ ಸೂಚ್ಯವಾಗಿ ಸಲಹೆ ನೀಡಿದರೆ ಮತ್ತೆ ಕೆಲವು ವಿಷಯಗಳಲ್ಲಿ ತಾನೇ ಆಸಕ್ತಿವಹಿಸುತ್ತಾಳೆ. ಗಂಡಿಗೆ ಹೆಗಲಿಗೆ ಹೆಗಲು ಕೊಟ್ಟು ದುಡಿದರೂ ಹೆಣ್ಣು ಎಲ್ಲಿಯೂ ಮರ್ಯಾದೆಯನ್ನು ಮೀರುವುದಿಲ್ಲ. ಏಕೆಂದರೆ ಆಕೆಗೆ ಪರಂಪರೆಯ ಬೆನ್ನೆಲುಬಿದೆ.

'ವಿವಾಹ' ಎಂಬ ಪದಕ್ಕೆ ಸಂವಾದಿಯಾಗಿ ಮದುವೆ, ಉಪಯಮ ಪಾಣಿಗ್ರಹಣ, ಲಗ್ನ, ಪರಿಣಯ, ವಿದ್ವಾಹ ಇನ್ನು ಮುಂತಾದ ಸಮಾನಾರ್ಥಕ ಪದಗಳನ್ನು ಬಳಸುವುದುಂಟು. ಈ ಶಬ್ದಾರ್ಥಗಳು ವಿವಾಹ ವಿಧಿ ಆಚರಣೆಯನ್ನು ಅವಲಂಬಿಸಿ ಪ್ರಾಚೀನ ಭಾರತದ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಪ್ರಯೋಗವಾಗಿವೆ. 'ವಿವಾಹ' ಎಂಬ ಪದದ ನಿಜವಾದ ಅರ್ಥವನ್ನು ಹೀಗೆ ಗ್ರಹಿಸಬಹುದು. ಕನ್ಯೆಯನ್ನು ವಿಶೇಷವಾಗಿ ಪಡೆಯುವುದು ಅಥವಾ ಹೊಂದುವುದು ಎಂದರ್ಥ. ಅಂದರೆ ಇದು ಪುರುಷಾಧಿಕಾರದಿಂದ ನಮ್ಮ ಪ್ರಾಚೀನ ಓದಿನ ಅಥವಾ ಬರಹದ ಕ್ರಮದಿಂದ ಬಂದುದಾಗಿದೆ. ಈ ಪದದ ಅರ್ಥ ಪ್ರಾಚೀನ ಪರಂಪರೆಗಳಿಂದಗಾಲಿ, ದಾಖಲೆಗಳಿಂದಾಗಲಿ ದೊರೆಯುವುದಿಲ್ಲ.

ವಿವಾಹಕ್ಕೆ ಸಂಬಂಧಿಸಿದಂತೆ ಅನೇಕ ವಿದ್ವಾಂಸರು, ಸಮಾಜಶಾಸ್ತ್ರಜ್ಞರು ಹಲವು ವ್ಯಾಖ್ಯೆಗಳನ್ನು ನೀಡಿದ್ದಾರೆ. ವಿವಾಹ ಎಂಬ ಪದಕ್ಕೆ "ಸಂತಾನಾಭಿವೃದ್ಧಿಯ ಪ್ರಕ್ರಿಯೆ ಜೊತೆಗೆ ಬಹುಕಾಲ ಒಂದಾಗಿ ಬಾಳುವ ಸ್ತ್ರೀ ಪುರುಷರ ವಿಶಿಷ್ಟ ಸಂಬಂಧವೇ ವಿವಾಹ."[೨] ಮಲಿನೊವಸ್ಕಿಯವರ ಪ್ರಕಾರ ವಿವಾಹ ಎಂದರೆ "ಸಂತಾನೋತ್ಪತ್ತಿ ಮತ್ತು ಅದರ ಮುಂದಿನ ನಿರ್ವಹಣೆಗೋಸುಗ ಸ್ತ್ರೀಪುರುಷರು ಮಾಡಿಕೊಂಡಿರುವ ಒಪ್ಪಂದ."[೩] ಲುಂಡ್‌ಬರ್ಗ್‌ರವರ ಪ್ರಕಾರ "ಹೆಣ್ಣು ಗಂಡಿಗೆ ಸಂಬಂಧಪಟ್ಟ ಹಾಗೆ ಇರುವ ಹಕ್ಕು ಕರ್ತವ್ಯ ಹಾಗೂ ವಿನಾಯಿತಿಗಳನ್ನು ಗೊತ್ತು ಮಾಡುವ ಕಟ್ಟುಪಾಡುಗಳ ವಿಧಾನವೇ ವಿವಾಹ"[೪] ಜಾನ್‌ಲೆವಿ ಹಾಗೂ ರೂತ್ ಮನ್ರೋ ಅವರ ಪ್ರಕಾರ "ಸಕ್ರಮವಾದ ಜೀವನ ನಡೆಸುವುದಕ್ಕೋಸ್ಕರ ಸಕುಟುಂಬ ಆಗುವುದೊಂದೆ ವಿವಾಹಕ್ಕೆ ಯುಕ್ತ ಮಾರ್ಗೋಪಾಯ"[೫]. ವಿವಾಹ ಎನ್ನುವುದು ವ್ಯಕ್ತಿ ಸ್ವಾತಂತ್ರ್ಯಕ್ಕೆ ಅಡ್ಡಿಯನ್ನುಂಟು ಮಾಡುವಂಥದು. ಇದು ಎಲ್ಲಾ ಕಾಲಘಟ್ಟದಲ್ಲಿ ತನ್ನ ಅಸ್ತಿತ್ವವನ್ನು ಸಮರ್ಥವಾಗಿ ಕಾಯ್ದಿಟ್ಟುಕೊಂಡು ಬಂದಿದೆ. ಈ ರೀತಿ ಕಾಯ್ದಿಟ್ಟುಕೊಳ್ಳುವುದರ ಹಿಂದೆ ಪುರುಷ ಪ್ರಧಾನ ಮೌಲ್ಯಗಳೇ ಹೆಚ್ಚು ಕೆಲಸ ಮಾಡಿವೆ.

ವಿವಾಹ ಸಾಮಾಜಿಕ ಪದ್ಧತಿಯಾಗಿದ್ದರೂ ಸಹ ಇದನ್ನು ವಿವಾಹ ಬಂಧನ ಎಂದು ಕರೆಯಲಾಗುತ್ತಿದೆ. ಪ್ರಾಚೀನ ಕಾಲದಲ್ಲಿ ವಿವಾಹ ಎನ್ನುವಂಥದ್ದು ಒಂದು ಸಂಸ್ಥೆಯಾಗಿರಲಿಲ್ಲ. ಆ ಸಂದರ್ಭದಲ್ಲಿ ಅನಿರ್ಬಂಧಿತ ಲೈಂಗಿಕ ಸಮಾಗಮಕ್ಕೆ ಹೆಚ್ಚಿನ ಪ್ರಾಶಸ್ತ್ಯವಿತ್ತು. ಕೆಲವು ಆದಿವಾಸಿ ಬುಡಕಟ್ಟು ಸಮುದಾಯಗಳು ಆಚರಿಸುವಂತಹ ವಾರ್ಷಿಕ ಹಬ್ಬಗಳ ಆಚರಣೆ ಸಮಯದಲ್ಲಿ ತರುಣ ತರುಣಿಯರು ಲೈಂಗಿಕ ಸಂಬಂಧ ಬೆಳೆಸಿಕೊಳ್ಳಲು ಮುಕ್ತ ಅವಕಾಶವಿತ್ತು. ಎಸ್ಕಿಮೋ ಜನರು ತಮ್ಮ ಹೆಂಡತಿಯರನ್ನೇ ಅತಿಥಿ ಸೇವೆಗೆ ಕಳುಹಿಸುತ್ತಿದ್ದರು. ಇನ್ನೂ ಕೆಲವು ಆದಿವಾಸಿಗರು ಹೆಂಡತಿಯರನ್ನು ಬೇರೊಬ್ಬರಿಗೆ, ಬೇರೊಬ್ಬರ ಹೆಂಡತಿಯನ್ನು ಮತ್ತೊಬ್ಬರಿಗೆ ಬೇಕೆಂದಾಗ ವಿನಿಮಯ ಮಾಡಿಕೊಳ್ಳುತ್ತಿದ್ದರು. ಆ ಕಾಲಕ್ಕೆ ಅದೊಂದು ಸಂಪ್ರದಾಯ ಎಂಬಂತೆ ಪ್ರತಿಬಿಂಬಿತವಾಗಿತ್ತು. ಆದಿವಾಸಿಗಳ ಮಕ್ಕಳು ತಮಗೆ ಜನ್ಮ ನೀಡಿದವರನ್ನು ಮಾತ್ರವಲ್ಲದೆ ಬೇರೆ ಎಲ್ಲರನ್ನು ತಮ್ಮ ತಂದೆತಾಯಿಗಳೆಂದೇ ಸಂಬೋಧಿಸುವ ಪರಿಪಾಠ ಅವರಲ್ಲಿತ್ತು. ಹಾಗಾಗಿ ಬಹು ಪ್ರಾಚೀನ ಸಮಾಜದಲ್ಲಿ ಲೈಂಗಿಕ ಸಮಾಗಮಕ್ಕೆ ಸಂಬಂಧ ಬೆಳೆಸಿಕೊಳ್ಳುವುದಕ್ಕೆ ಯಾವುದೇ ಕಟ್ಟುಪಾಡು ಇರಲಿಲ್ಲ. ಆದ್ದರಿಂದ ಆದಿವಾಸಿ ಮಕ್ಕಳಿಗೆ ಪಿತೃತ್ವದ ಅರಿವು ಇರಲಿಲ್ಲ. ಕಾಲಕ್ರಮೇಣ ನಾಗರಿಕತೆ ಬದಲಾವಣೆಯಾದಂತೆ ತನ್ನ ಇಷ್ಟಾನಿಷ್ಟಗಳ ಬಗೆಗೆ ನೀತಿ ನಿರ್ಬಂಧಗಳನ್ನು ಮಾನವ ರೂಪಿಸಿಕೊಂಡ ಲೈಂಗಿಕ ಸ್ವೇಚ್ಛಾಚಾರ ಕ್ರಮದಿಂದ ಏಕಸಂಗಾತಿ ವಿವಾಹ ಕ್ರಮದ ಪ್ರಕಾರಕ್ಕೆ ಕ್ರಮೇಣ ಬರತೊಡಗಿತು.[೬]

ಆದಿಮಾನವನಿಗೆ ಪ್ರಾಣಿಗಳಲ್ಲಿರುವಂತೆ ಹಸಿವು, ತೃಷೆಯ ಜೊತೆಗೆ ಲೈಂಗಿಕ ಪ್ರವೃತ್ತಿಯಷ್ಟು ಜೀವನದ ನಿರಂತರತೆಗೆ, ಸಂತಾನಾಭಿವೃದ್ಧಿಗೆ ಕಾರಣವಾಗಿತ್ತು. ಅವನು ಒಂದೆಡೆ ನಿಸರ್ಗದ ಕಡೆ ಗಮನಹರಿಸಿದಾಗ ಹಾಗೂ ಅದರ ರಹಸ್ಯವನ್ನು ಬೇಧಿಸಲು ಹೊರಟಾಗ ನಾಗರಿಕತೆ, ಭೇದಿ ಸಂಸ್ಕೃತಿ ಪ್ರಾರಂಭವಾಯಿತು. ಅದು ಗಂಡು ಹೆಣ್ಣಿನ ಜೊತೆ ಬಾಳಿಗೂ ಕಾರಣವಾಯಿತು. ಮುಂದೆ ಅವರ ಸಂತಾನ ಸಂಬಂಧವಾಗಿ ಅವರಿಬ್ಬರನ್ನು ಒಂದೆಡೆ ಸ್ಥಿರವಾಗಿ ನೆಲೆಗೊಳಿಸಲು ವಿವಾಹ ಅನಿವಾರ್ಯವಾಯಿತು. ಇದರಿಂದ ತಂದೆ-ತಾಯಿ ಮಕ್ಕಳೆಂಬ ಒಕ್ಕೂಟ ಸ್ಥಾಪನೆಯಾಗಿ ವಿವಾಹ ಒಂದು ಸಾಮಾಜಿಕ ಸಂಸ್ಥೆಯಾಗಿ ಬೆಳೆದುಬಂದಿದೆ.

ಒಂದು ಕಾಲದಲ್ಲಿ ಕಾಮ ಎನ್ನುವಂಥದ್ದು ಸ್ವಚ್ಛಂದವಾಗಿತ್ತು. ವಿವಾಹ ಎಂಬ ಸಂಸ್ಥೆ ರೂಪುಗೊಂಡ ನಂತರ ಕಾಮದ ಸ್ವಚ್ಛಂದತೆಗೆ ಕಡಿವಾಣ ಬಿತ್ತು. ಸ್ತ್ರೀಪುರುಷರು ತಮ್ಮ ದಾಂಪತ್ಯ ಬದುಕಿಗಾಗಿ ಸಮಾಜದ ಸಮ್ಮತಿ ಅಥವಾ ಅಂಗೀಕಾರ ಪಡೆದು, (ಅದು ಧರ್ಮಸಮ್ಮತವಾದ ಅಂಗೀಕಾರ ಪಡೆದು) ವಿವಾಹ ಸಂಸ್ಕಾರದೊಂದಿಗೆ ಪಡೆಯತೊಡಗಿದಾಗ 'ವಿವಾಹ' ಎಂಬುದು ಧಾರ್ಮಿಕ ಪರವಾನಗಿಯ ಮುದ್ರೆಯನ್ನು ಪಡೆದುಕೊಂಡಿತು.

ಕನ್ನಡದ ಮೊಟ್ಟಮೊದಲ ಗದ್ಯಕೃತಿಯಾದ ವಡ್ಡಾರಾಧನೆ ಜೈನ ಸಂಪ್ರದಾಯದ ಉಪಸರ್ಗಕೇವಲಿಗಳ ಕತೆಯಾದರೂ ಪ್ರಾಸಂಗಿಕವಾಗಿ ವಿವಾಹ ಪದ್ಧತಿಗಳ ಪರಿಚಯವನ್ನು ಕಾಣಬಹುದು. ಸುಕುಮಾರಸ್ವಾಮಿಯ ಕಥೆಯಲ್ಲಿ ಮದುವೆಯ ಸನ್ನಿವೇಶದ ಸಂದರ್ಭದಲ್ಲಿ ಮದುವೆಯ ಮೊದಲ ದಿನದ ಅಲಂಕಾರವನ್ನು ತೋರಿಸ ಬೇಕೆಂಬ ವಚನಕ್ಕೆ ಬದ್ಧಳಾದ ಸುದಾಮೆಯು ತನ್ನ ಮೈದುನನಲ್ಲಿಗೆ ನಡುರಾತ್ರಿಯಲ್ಲೂ ಹಲವು ಅಪಾಯಗಳ ನಡುವೆಯು ದಿಟ್ಟವಾಗಿ ವಚನ ನೆರವೇರಿಸುತ್ತಾಳೆ. ಈ ಸಂದರ್ಭದಲ್ಲಿ ಧನದತ್ತನ ಸಂಯಮ, ಸುದಾಮೆಯ ವಚನ ಪರಿಪಾಲನೆ ಎದ್ದು ಕಾಣುತ್ತದೆ. ನಾಗದತ್ತಶೆಟ್ಟಿ ಮತ್ತು ಸುರೂಪೆಯೆಂಬ ದಂಪತಿಗಳು 'ಪಾಣಿಗ್ರಹಣ ಪುರಸ್ಸರಂ ಸುಕೇಶಿನಿಯಂ ಗಂಧಭಾಜನನೆಂಬರಸಂಗೆ' ಕನ್ಯಾದಾನ ಮಾಡಿದ ಉಲ್ಲೇಖವು ಸುಕೌಶಳಸ್ವಾಮಿಯ ಕಥೆಯಲ್ಲಿದೆ. ಅಲ್ಲದೆ ಸುಕೌಶಳಸ್ವಾಮಿಯು ಮೂವತ್ಮೂರು ಅರಸರ ಹೆಣ್ಣು ಮಕ್ಕಳನ್ನು ಒಂದೇ ಹಸೆಯಲ್ಲಿ ವಿವಾಹವಾದ ಪ್ರಸ್ತಾಪವಿದೆ.

ಇದೇ ಕಥೆಯಲ್ಲಿ ಅತಿರಥ ಮಹಾರಾಜನ ಮಗಳು ಮನೋಹರಿಯ ಸ್ವಯಂವರ ಮದುವೆಯ ವಿವರ ಗಳಿವೆ. ಹೆಗ್ಗಡೆಗಳನ್ನು ವಧುವಿನ ಮನೆಗೆ ಕಳುಹಿಸಿ ಹೆಣ್ಣು ಕೇಳುವ ಸಂಪ್ರದಾಯವನ್ನು ಈ ಕಥೆಯಲ್ಲಿಯೇ ಕಾಣಬಹುದು. ಸನತ್ಕುಮಾರ ಚಕ್ರವರ್ತಿಯ ಕಥೆಯಲ್ಲಿ ಗಾಂಧರ್ವ ವಿವಾಹದ ಉಲ್ಲೇಖವಿದೆ. ರಥನೂಪುರ ಚಕ್ರವಾಳ ಪುರಾಧೀಶನಾದ ಚಂದ್ರವೇಗನು ತನ್ನ ನೂರುಮಂದಿ ಕನ್ಯೆಯರನ್ನು ಪಾಣಿಗ್ರಹಣ ವಿಧಿಯಂತೆ ಆಶನಿವೇಗ ಮತ್ತು ವಜ್ರವೇಗರನ್ನು ಕೊಂದುಹಾಕಿದ ಕುಮಾರನಿಗೆ ಕನ್ಯಾದಾನ ಮಾಡಿದ ಉಲ್ಲೇಖವಿದೆ. ಚಿಲಾತ ಪುತ್ರನ ಕಥೆಯಲ್ಲಿ ಉಪಶ್ರೇಣಿಕ ಮಹಾರಾಜ ತನಗೆ ಈಗಾಗಲೇ ಜಯಾವತಿಯೆಂಬ ಹಿರಿಯ ಮಹಾದೇವಿ ಯಲ್ಲದೆ ಹಲವು ಜನ ಹೆಂಡತಿಯರಿದ್ದರೂ ಬೇಡವಳ್ಳಿಯ ಅರಸನಾದ ಮಹಾಕಾಳನ ಮಗಳಾದ ಗುಣಸೌಂದರಿ ಯನ್ನು ಬೇಡಿ ಪಡೆದ ಪ್ರಶಸ್ತ ದಿವಸ, ವಾರ, ನಕ್ಷತ್ರ ಮುಹೂರ್ತದಲ್ಲಿ ಮದುವೆಯಾಗಿ ಬೆಳಾತ ಮಹಾದೇವಿ ಯೆಂದು ಹೆಸರು ಬದಲಾಯಿಸುತ್ತಾನೆ.

ವೃಷಭಸೇನ ಭಟ್ಟಾರರ ಕಥೆಯಲ್ಲಿ ಪ್ರದ್ಯೋತನೆಂಬ ರಾಜನು ದಾರಿತಪ್ಪಿ ಹಳ್ಳಿಯಲ್ಲಿ ಸಂಚರಿಸುತ್ತಿರುವಾಗ ಬಾಯಾರಿದ ತನಗೆ ಕುಡಿಯಲು ನೀರು ನೀಡಿದ ಗೌಡರ ಮಗಳನ್ನು ತಾನು ತನ್ನ ನಗರಕ್ಕೆ ಹೋದ ಮೇಲೆ ತನ್ನ ಹೆಗ್ಗಡೆಗಳನ್ನು ಕಳುಹಿಸಿ ಬೇಡಿ ಹೆಣ್ಣಿನ ತಂದೆತಾಯಿಯರ ಒಪ್ಪಿಗೆ ಪಡೆದು ಜಿನದತ್ತೆಯನ್ನು ಶಾಸ್ತ್ರೋಕ್ತವಾಗಿ ಮದುವೆಯಾದನೆಂಬ ವಿವರಗಳಿವೆ. ತಂದೆಯೇ ತನ್ನ ಮಗಳನ್ನು ಮದುವೆಯಾಗುವ ವಿಚಿತ್ರವಾದ ಪ್ರಸಂಗ ವಡ್ಡಾರಾಧನೆಯಲ್ಲಿದೆ. ಕಾರ್ತಿಕ ಋಷಿಯ ಕಥೆಯಲ್ಲಿ ಕೃತ್ತಿಕಾಪುರದ ಅರಸು ಅಗ್ನಿರಾಜ ಇವನ ಹೆಂಡತಿ ವೀರಮತಿ. ಇವರಿಗೆ ಆರು ಜನ ಹೆಣ್ಣುಮಕ್ಕಳು. ಆರು ಜನ ಹೆಣ್ಣುಮಕ್ಕಳಲ್ಲಿ ಕೊನೆಯವಳು

ಸೌಂದರ್ಯವತಿಯಾಗಿದ್ದಳು. ಇವಳ ಸೌಂದರ್ಯ, ತೇಜಸ್ಸುಗೆ ಮನಸೋತು ತನ್ನ ಮಗಳನ್ನು ತಾನೇ ಮದುವೆಯಾಗಲು ಅಪೇಕ್ಷಿಸುತ್ತಾನೆ. ಮದುವೆಯಾಗುವುದಕ್ಕೆ ರಾಜಪರಿವಾರ, ಸಾಮಾಜಿಕ ಒಪ್ಪಿಗೆ ಪಡೆಯಲು ಸಿದ್ಧನಾಗುತ್ತಾನೆ. ಸಾಮಂತರರು, ಮಹಾಸಾಮಂತರರು, ಪರಿವಾರದವರು, ಮಂತ್ರಿವರ್ಗದವರು ಹಾಗೂ ತನ್ನ ಹೆಂಡತಿಯಾದ ವೀರಮತಿಯನ್ನು ಕರೆಯಿಸಿ ಕೇಳುತ್ತಾನೆ. ತನ್ನ ಆಸೆಯನ್ನು ನೇರವಾಗಿ ಹೇಳದೆ 'ನಾನು ಆಳುವ ಪ್ರದೇಶದಲ್ಲಿ ಹುಟ್ಟಿದ ಉತ್ತಮವಾದ ವಸ್ತುಗಳು ಯಾರಿಗೆ ಸೇರುತ್ತವೆ' ಎಂದು ಕೇಳುತ್ತಾನೆ. ಅವರೆಲ್ಲಾ ಒಳ್ಳೆಯದಾದ ಆನೆ, ಕುದುರೆ, ಮುತ್ತು, ಮಾಣಿಕ್ಯ, ಸ್ತ್ರೀರತ್ನ ಮೊದಲಾದ ಉತ್ತಮ ವಸ್ತುಗಳೆಲ್ಲವೂ ಆ ಪ್ರದೇಶವನ್ನಾಳುವ ರಾಜನಿಗೆ ಸೇರಬೇಕೆಂದು ಹೇಳುತ್ತಾರೆ. ಕೊನೆಯದಾಗಿ ರಾಜನು ಋಷಿಯರನ್ನು ಕೇಳಿದಾಗ ಅವರು ಯಾವ ವಸ್ತುವೆಂದು ಹೇಳಿದರೆ ಸೇರಬೇಕೆ ಬೇಡವೇ ಎಂಬುದನ್ನು ತೀರ್ಮಾನಿಸಿ ಹೇಳಲು ಸಾಧ್ಯವೆನ್ನುತ್ತಾರೆ. ಇದು ರಾಜನಿಗೆ ತನ್ನ ಆಸೆಯ ಈಡೇರಿಕೆಯಲ್ಲಿ ಉಂಟಾದ ಮೊದಲ ಪ್ರತಿಭಟನೆಯಾಗುತ್ತದೆ. ಅಗ್ನಿರಾಜ ಇಲ್ಲಿಯವರೆಗೂ ತನ್ನ ಸಾಮಂತ, ಮಹಾಸಾಮಂತ, ಪರಿವಾರ, ಮಂತ್ರಿವರ್ಗ, ತನ್ನ ಹೆಂಡತಿ ಇವರಿಗೆ ವಸ್ತುವಿನ ಬಗೆಗೆ ನೇರವಾಗಿ ಹೇಳಿಲ್ಲ. ಆದರೂ ಅವರೆಲ್ಲರೂ ಇವನ ಮನಸ್ಸಿನ ಬಯಕೆಗೆ ಕಾರಣವಾಗಿದ್ದ ಸ್ತ್ರೀರತ್ನವನ್ನು ಸೇರಿಸಿ 'ರಾಜರ್ಪಿತ'ಗೊಳಿಸಿದ್ದಾರೆ. ಆದರೆ ಋಷಿಗಳು ಮಾತ್ರ ಮೊದಲ ಬಾರಿಗೆ ಯಾವ ವಸ್ತುವೆಂದು ಹೇಳಿದರೆ ಸೇರಬೇಕೋ ಬೇಡವೋ ಎಂಬುದನ್ನು ತೀರ್ಮಾನಿಸಿ ಹೇಳಲು ಸಾಧ್ಯವೆನ್ನುತ್ತಾರೆ. ಇದಕ್ಕೆ ಕೋಪಗೊಂಡ ರಾಜನು ಎಲ್ಲರೂ ಒಪ್ಪಿದಾಗ ಇವರದೇನು ಲೆಕ್ಕ ಎನ್ನುವ ಮಟ್ಟಕ್ಕೆ ಆಲೋಚಿಸಿ ನಗರದಿಂದ ಈ ಅಲ್ಪಸಂಖ್ಯಾತ ಋಷಿಗಳನ್ನು ಓಡಿಸಿದನು. ಕೊನೆಯಲ್ಲಿ ತನ್ನ ಹೆಂಡತಿಯ ಒಪ್ಪಿಗೆ ಪಡೆದು ತನ್ನ ಮಗಳನ್ನು ಮದುವೆಯಾಗುತ್ತಾನೆ. ವೀರಮತಿ ಪ್ರತಿಭಟಿಸದೆ ಬ್ರಹ್ಮಚರ್ಯ ಸ್ವೀಕರಿಸಿ ನಿರ್ಗಮಿಸುತ್ತಾಳೆ. 'ಬ್ರಹ್ಮಚರ್ಯ' ಸ್ವೀಕರಿಸಿದುದೇ ಅಗ್ನಿರಾಜನಿಗೆ ಅವಳು ನೀಡಿದ ಬಲವಾದ ಮೌನ ಪ್ರತಿಭಟನೆ. ಈ ರೀತಿಯ ಕಥೆಗಳು ವಡ್ಡಾರಾಧನೆ ಕಥೆಯಲ್ಲಿ ಪ್ರಾಸಂಗಿಕವಾಗಿ ಬರುತ್ತವೆ. ಇದರಲ್ಲಿ ಬಂದಿರುವ ವಿವಾಹ ಪದ್ಧತಿಗಳಲ್ಲಿ ಸ್ವಯಂವರ, ಗಾಂಧರ್ವ ಕನ್ಯಾದಾನ, ಪಾಣಿಗ್ರಹಣ ಮತ್ತು ವಧುವಿನ ಪೋಷಕರ ಒಪ್ಪಿಗೆ ಪಡೆದು ಮದುವೆಯಾಗುತ್ತಿದ್ದುದು ಕಂಡುಬರುತ್ತದೆ.

ಪಂಪಭಾರತದಲ್ಲಿ ವಿವಾಹ ಪದ್ಧತಿಗಳ ಪರಿಚಯ ನಮಗಾಗುತ್ತದೆ. ಶಂತನು ಮತ್ತು ಗಂಗೆಯರು ಒಂದು ಒಪ್ಪಂದದ ಪ್ರಕಾರ ವಿವಾಹವಾಗುತ್ತಾರೆ. ಇದನ್ನು ಗಾಂಧರ್ವ ವಿವಾಹ ಪದ್ಧತಿಯೆಂದು ಕರೆಯಲಾಗಿದೆ. ಕುಂತಿ ಹಾಗೂ ಧರ್ಮರಾಜರು ಭೀಮನನ್ನು ಕುರಿತು ಧರ್ಮರಾಜ ಈಕೆ (ಹಿಡಿಂಬೆ) ಸಾಮಾನ್ಯ ಹೆಂಗಸಲ್ಲ; ರಾಕ್ಷಸ ಸ್ತ್ರೀಯೆಂದು ಕಡೆಗಣಿಸಬೇಡ. ನೀನು ಇವಳನ್ನು ಸ್ವೀಕರಿಸುವುದೇ ವಿಹಿತ ಎಂದು ತಿಳಿಯಹೇಳಿ ಭೀಮ ಹಿಡಿಂಬಿಯರಿಗೆ ಅಲ್ಲೇ ಗಾಂಧರ್ವ ವಿವಾಹ ಮಾಡಿಸುತ್ತಾರೆ.

ಕೃಷ್ಣನು ಅರ್ಜುನನಿಗೆ ಹೇಳುವಂತಹ ಮಾತು, ಎಲೇ ಗುಣಾರ್ಣವ ತನ್ನ ತಂಗಿಯನ್ನು ಬಲರಾಮನು ದುರ್ಯೋಧನನಿಗೆ ಕೊಡಬೇಕೆಂದಿದ್ದಾನೆ. ಅದು ನನಗೆ ಇಷ್ಟವಿಲ್ಲ; ನಿನಗೆ ಇವಳನ್ನು ಕೊಟ್ಟು ಮದುವೆ ಮಾಡಬೇಕೆಂಬುದು ನನ್ನ ಆಸೆ. ಬ್ರಹ್ಮನು ತಾನೇ ಇದನ್ನು ಸಂಘಟಿಸಲೆಂದೇ ನಿಮ್ಮನ್ನು ಇಲ್ಲಿ ಒಂದು ಗೂಡಿಸುತ್ತಾನೆ. ನಾನು ಹೇಳುತ್ತೇನೆ ಕೇಳು ಈ ಹೊತ್ತೇ ಹೊತ್ತು ನೀನು ಅವಳನ್ನು ಕರೆದುಕೊಂಡು

ಹೊರಟು ಹೋಗು. ಹಾಗೆ ಹೋಗುವಾಗಲೂ ಬಲರಾಮನ ಆಜ್ಞೆಯಂತೆ ಬೆನ್ನಟ್ಟುವ ಯಾದವ ಸೈನ್ಯವಿರುತ್ತದೆ. ಅವನ್ನು ಹೇಗೆ ನಿಭಾಯಿಸಬೇಕೆಂದು ನೀನು ಬಲ್ಲೆ. ಮಿಕ್ಕ ವಿಚಾರ ನಾನು ನೋಡಿಕೊಳ್ಳುತ್ತೇನೆ ಎಂದು ರಥ ವ್ಯವಸ್ಥೆ ಮಾಡಿ ಕಳುಹಿಸಿಕೊಡುತ್ತಾನೆ.[೭] ಕುಲೀನನೂ, ಸಾಹಸಿಯೂ, ಬಲಶಾಲಿಯೂ ಆದವನು ಅಪಹರಣ ಮಾಡಿ ವಿವಾಹವಾಗುವುದು ಅಂದಿನ ಸಮಾಜಕ್ಕೆ ತಪ್ಪೆಂದು ಅನ್ನಿಸುತ್ತಿರಲಿಲ್ಲ. ಅದಕ್ಕೆ ಕೃಷ್ಣ ಬಲರಾಮನಿಗೆ ಹೇಳುವ ಈ ಮಾತುಗಳೇ ಸಾಕ್ಷಿಯಾಗುತ್ತವೆ. ಅಣ್ಣ ಕುಲವನ್ನು ನೋಡುವುದಾದರೆ ಚಂದ್ರವಂಶಕ್ಕೆ ತಿಲಕದಂತಿದ್ದಾನೆ. ಬಿಲ್ಲಾಳತನವನ್ನು ಹೇಳುವುದಾದರೆ ತೀವ್ರವಾದ ಬಾಣಾಳಿಗಳಿಂದ ಅಸಂಖ್ಯಾತ ಶತ್ರುಗಳನ್ನು ನಿರ್ಮೂಲ ಮಾಡಬಲ್ಲನು, ಬಲದಲ್ಲಿ ನಿನಗೂ ಬಲಶಾಲಿ. ಅವನು ನಮ್ಮ ತಂಗಿಗೆ ಗಂಡನಾಗಿ ಅವಳನ್ನು ಕರೆದುಕೊಂಡು ಹೋಗುವುದರಲ್ಲಿ ಏನು ತಪ್ಪು? ಹಠವೇಕೆ?[೮] ಎಂದು ಸಮಾಧಾನಪಡಿಸುತ್ತಾನೆ. ನಂತರ ಶುಭದಿನ ನಕ್ಷತ್ರಯೋಗ ಕಾರಣಗಳನ್ನು ನೋಡಿಸಿ ಹಸಿರು ಚಪ್ಪರ, ಹಸೆ, ವೇದಪಠಣಗಳು ರಮ್ಯವಾಗಿರಲು ಅಂಗಡಿ ಸಾಲಿನ ಹಾಗೆ ಸಾಮಂತ ಮಹಾಸಾಮಂತರೂ, ಸ್ತ್ರೀಯರೂ ಸಾಲು ಸಾಲಾಗಿ ಶೋಭಿಸಲು, ಮಂಗಳ ತೂರ್ಯನಾದವು ಮಧುರವಾಗಿರಲು ಕೃಷ್ಣ ಬಲರಾಮರು ಸಂತೋಷದಿಂದ ಗುಣಾರ್ಣವ ಮಹೀಪಾಲನಿಗೆ ಸುಭದ್ರೆಯನ್ನಿತ್ತು ಕೈ ನೀರೆರೆದರು.[೯] ಈ ಎಲ್ಲಾ ವಿವಾಹ ಪ್ರಕಾರಗಳನ್ನು ಗಮನಿಸಿದರೆ ಹತ್ತನೆಯ ಶತಮಾನದಲ್ಲಿ ಗಾಂಧರ್ವ ವಿವಾಹ, ಅಪಹರಣ ವಿವಾಹ, ಸ್ವಯಂವರ ವಿವಾಹ, ಕನ್ಯಾದಾನ, ಪಾಣಿಗ್ರಹಣ, ಒಪ್ಪಂದದ ವಿವಾಹ ಪದ್ಧತಿಗಳ ಜೊತೆಗೆ ಋಷಿಮುನಿಗಳು ಯಾರ ಜೊತೆ ಬೇಕಾದರೂ ಕೂಡುವ ಮಕ್ಕಳನ್ನು ಪಡೆಯುವ ಸ್ವಾತಂತ್ರ್ಯವನ್ನು ಹೊಂದಿದ್ದರೆಂಬುದಕ್ಕೆ ಆಧಾರಗಳು ದೊರೆಯುತ್ತವೆ. ಮುನಿಗಳೇಗ್ಯೆಯ್ದುಡಂತೀರದೆ[೧೦] ಎಂಬ ಮಾತು ಇದಕ್ಕೆ ಪೂರಕವಾಗಿದೆ.

ಬಹುಪತಿತ್ವ ಪದ್ಧತಿ ಆಚರಣೆಗೆ ಸಂಬಂಧಿಸಿದಂತೆ ಅನೇಕ ಆಧಾರಗಳು ದೊರೆಯುತ್ತವೆ. ಕ್ರಿ.ಶ. ಸುಮಾರು ೯೫೦ರಲ್ಲಿ ರಚಿತವಾದ ೧ನೇ ನಾಗವರ್ಮನ ಕರ್ನಾಟಕ ಕಾದಂಬರಿಯ ಕೊನೆಯ ಭಾಗದಲ್ಲಿ ಚಂದ್ರಪೀಡ ಮತ್ತು ಕಾದಂಬರಿಯ ವಿವಾಹ ವೃತ್ತಾಂತವಿದೆ. ಪುಂಡಲೀಕನನ್ನು ಮಾನಸಿಕ ಪತಿಯನ್ನಾಗಿ ಸ್ವೀಕರಿಸಿ ಅವನಿಗಾಗಿ ತಪಸ್ವಿನಿಯಂತೆ ಕಾದು ಪುನಃ ಸಮಾಗಮ ಪಡೆಯುವ ವಿಶಿಷ್ಟ ಪ್ರಸಂಗವನ್ನು ಇಲ್ಲಿ ಕಾಣಬಹುದು. ನಾಗಚಂದ್ರ ಕವಿಯ ಪಂಪ ರಾಮಾಯಣ(ರಾಮಚಂದ್ರ ಚರಿತ ಪುರಾಣ)ದಲ್ಲಿಯೂ ಹಲವು ರೀತಿಯ ವಿವಾಹ ಪ್ರಕಾರಗಳ ಉಲ್ಲೇಖಗಳಿವೆ. ೧೪ ಪ್ರಕರಣಗಳಿಂದ ಕೂಡಿರುವ ಈ ಜೈನ ಸಂಪ್ರದಾಯದ ರಾಮಾಯಣದಲ್ಲಿ ಸೀತೆಯ ಸ್ವಯಂವರ ಹಾಗೂ ಸೀತೆ ರಾಮರ ವಿವಾಹ ಆಚರಣೆಯು ೫ನೇ ಪ್ರಕರಣದ ೧೮ರಿಂದ ೧೪೧ರವರೆಗಿನ ಗದ್ಯಪದ್ಯಸಹಿತ ಭಾಗದಲ್ಲಿ ಸುದೀರ್ಘವಾಗಿ ಬಂದಿದೆ.

ಕುಮಾರವ್ಯಾಸನ ಕುಮಾರವ್ಯಾಸ ಭಾರತ (ಕರ್ಣಾಟ ಭಾರತ ಕಥಾ ಮಂಜರಿ ಕೃತಿಯಲ್ಲಿ ಸ್ವಯಂವರ ಪದ್ಧತಿಯ ವಿವಾಹದ ವರ್ಣನೆಯಿದೆ. ಕಾಲಮಾನ ಕ್ರಿ.ಶ. ೧೪೩೦) ದ್ರೌಪದಿಯ ವಿವಾಹ ವರ್ಣನೆಯಾಗಿದೆ. ಮತ್ಸ್ಯಯಂತ್ರ ಭೇದಿಸುವ ಸ್ಪರ್ಧೆಯನ್ನಿಟ್ಟು ವಿಜೇತನಿಗೆ ಹೆಣ್ಣು ಕೊಡುವ ಸಾಮರ್ಥ್ಯ ಪರೀಕ್ಷೆಯನ್ನು ನಡೆಸಲಾಗುತ್ತದೆ. ವಿರಾಟಪರ್ವದ ಹತ್ತನೆಯ ಸಂಧಿಯ ೨೫ರಿಂದ ೮೫ರವರೆಗಿನ ಪದ್ಯಗಳಲ್ಲಿ ಅಭಿಮನ್ಯು ಉತ್ತರೆಯರ ವಿವಾಹವನ್ನು ವರ್ಣಿಸಲಾಗಿದೆ. ಸ್ವಯಂವರ ಹಾಗೂ ಬಾಂಧವ್ಯ ಬೆಸುಗೆಯ ಎರಡು ಮಾದರಿಯ

ವಿವಾಹ ಪದ್ಧತಿಗಳನ್ನು ಕಾಣಬಹುದು. ಲಕ್ಷ್ಮೀಶ ಕವಿಯ 'ಜೈಮಿನಿ ಭಾರತ ಕೃತಿಯ ಒಂಭತ್ತನೆಯ ಸಂಧಿಯಲ್ಲಿ ಅಗ್ನಿ ಮತ್ತು ಸ್ವಾಹಾದೇವಿಯರ ವಿವಾಹ ವರ್ಣನೆ ಸುಮಾರು ೬೧ ಪದ್ಯಗಳಲ್ಲಿ ಮೂಡಿಬಂದಿದೆ. ಚಂದ್ರಹಾಸ ಮತ್ತು ವಿಷಯೆಯ ವಿವಾಹ ಹಾಗೂ ಸುಧನ್ವ ಮತ್ತು ಚಂಪಕಾಮಾಲಿನಿಯರ ವಿವಾಹ ವರ್ಣನೆ ಇದೆ.

ಕನಕದಾಸರ ಭಾಮಿನಿ ಷಟ್ಪದಿ ಮತ್ತು ಸಾಂಗತ್ಯಗಳಲ್ಲಿ ಕ್ರಮವಾಗಿ ನಳಚರಿತ್ರೆ ಮತ್ತು ಮೋಹನ ತರಂಗಿಣಿ ಕೃತಿಗಳನ್ನು ರಚಿಸಿದ್ದಾರೆ. ನಳಚರಿತ್ರೆಯಲ್ಲಿ ಸುದೀರ್ಘವಾಗಿ ನಿರೂಪಿತವಾಗಿದೆ. ಮೋಹನ ತರಂಗಿಣಿಯಲ್ಲಿ ಮೂವತ್ತೊಂದನೆ ಸಂಧಿಯ ಸುಮಾರು ೩೦ ಪದ್ಯಗಳಲ್ಲಿ ಅನಿರುದ್ಧ ಮತ್ತು ಉಷೆಯರ ಗಾಂಧರ್ವ ವಿವಾಹದ ವಿವರಗಳಿವೆ.

ವಿವಾಹಕ್ಕೆ ಸಂಬಂಧಿಸಿದಂತೆ ಹತ್ತಾರು ಆಚರಣೆಗಳಲ್ಲಿ ವಿವಾಹ ಕಲ್ಪನೆಯನ್ನು ನೋಡಬಹುದು. ಅದಕ್ಕಿಂತಲೂ ಸಮಾಜಶಾಸ್ತ್ರದ ಹಿನ್ನೆಲೆಯಲ್ಲಿ ಮುಖ್ಯವಾಗಿ ವಿವಿಧ ಬುಡಕಟ್ಟುಗಳಲ್ಲಿ ಆಚರಣೆಯಲ್ಲಿರುವ ವಿವಾಹ ಪದ್ಧತಿಗಳನ್ನು ಸಮೀಕ್ಷಿಸಬಹುದು.

ಆದಿವಾಸಿ ಬುಡಕಟ್ಟುಗಳಲ್ಲಿ ಬಹುಮುಖ್ಯವೆನಿಸಿದ ಸಿದ್ಧಿ ಜನಾಂಗದಲ್ಲಿ ವಿವಾಹವು ತಮ್ಮ ಬುಡಕಟ್ಟಿನ ಒಳಗೆ ನಡೆಯುವುದು ವಾಡಿಕೆ. ಕೆಲವೊಂದು ಸಂದರ್ಭದಲ್ಲಿ ಕೆಲವು ಬುಡಕಟ್ಟುಗಳೊಂದಿಗೆ ವಿವಾಹಗಳು ನಡೆಯುತ್ತವೆ. ಆದರೆ ವಿರಳ. ಇವರಲ್ಲಿ ವಿವಾಹ ಸಂದರ್ಭದಲ್ಲಿ ವಿವಾಹದ ವಿಧಿ ವಿಧಾನಗಳನ್ನು ಸಿದ್ಧಿಯವರು ಆಚರಿಸುವರು. ಅಂತಹ ಒಂದು ಸಾಮಾಜಿಕ ವಿಶ್ಲೇಷಣೆಯನ್ನು ಡಾ.ಹಿ.ಚಿ.ಬೋರಲಿಂಗಯ್ಯ ಅವರು ಈ ರೀತಿ ವಿಶ್ಲೇಷಣೆ ಮಾಡಿದ್ದಾರೆ. "ವಿಶೇಷ ಮದುವೆಗಳ ಸಂದರ್ಭದಲ್ಲಿ ಒಂದು ಹುಲ್ಲಿನ ಗುಡಿಸಲಿಗೆ ಹೆಣ್ಣನ್ನು ಕೂಡಿಹಾಕಿ ಬೆಂಕಿ ಹಚ್ಚುತ್ತಾರೆ. ಅದರಿಂದ ತಪ್ಪಿಸಿಕೊಂಡು ಹೆಣ್ಣು ಬರಬೇಕು. ಹಾಗೆ ಬಂದನಂತರ ಸುಟ್ಟ ಬೂದಿಯನ್ನು ಮುಖ್ಯಸ್ಥ ಆ ಹೆಣ್ಣಿಗೆ ತಿನ್ನಿಸುತ್ತಾನೆ. ಅಲ್ಲಿಂದ ಅವಳು ಸಿದ್ಧಿಯಾಗಿ ಮಾರ್ಪಾಡುತ್ತಾಳೆ. ಇದು ಒಂದು ರೀತಿಯಲ್ಲಿ ಸಿದ್ಧಿ ದೀಕ್ಷೆ ನೀಡುವ ವಿಧಾನ. ಈ ಮೂಲಕ ಆ ಹೆಣ್ಣಿನ ಹಳೆಯ ಜಾತಿ ಸುಟ್ಟು ಹೊಸ ಜನ್ಮ ಬಂತೆಂಬ ಇವರ ನಂಬಿಕೆಯ ಹಿಂದೆ ಸುಡುವ ಕ್ರಿಯೆಯ ಮೂಲಕ ಹೊಸ ಸೃಷ್ಟಿಯ ಆಶಯವಿದೆ.

ಕಾಡಿನ ಹುಲ್ಲು ಬೇಸಿಗೆಯಲ್ಲಿ ಸುಟ್ಟು ಮಳೆಗಾಲದಲ್ಲಿ ಹೊಸದಾಗಿ ಚಿಗುರುವ ಮೂಲಕ ಮರುಹುಟ್ಟು ಪಡೆಯುವ ಕ್ರಿಯೆಯು ಇವರ ಮೇಲೆ ಪ್ರಭಾವ ಬೀರಿರಲೂಬಹುದು. ಮನೆಯನ್ನು ಸುಡುವ, ಮನೆಯಿಂದ ತಪ್ಪಿಸಿಕೊಂಡು ಬರುವ ಕ್ರಿಯೆಗಳು ಆ ಹೆಣ್ಣು ತಿರುಗಿ ತನ್ನ ಮೂಲ ಬುಡಕಟ್ಟಿಗೆ ಮರಳಿ ಹೋಗಬಾರದೆಂಬ ಆಶಯವನ್ನು ಕೂಡ ವ್ಯಕ್ತಪಡಿಸುತ್ತಿರಬಹುದು."[೧೧]

ಗೌಳಿಗರಲ್ಲಿ ತಮ್ಮ ಸೋದರ ಕುಳಿಗಳಲ್ಲಿ ವಿವಾಹವನ್ನು ನಿಷೇಧಿಸುವ ಮೂಲಕ ವಂಶೋತ್ಪತ್ತಿಯನ್ನು ಕಾಪಾಡಿಕೊಂಡು, ರಕ್ತ ಸಂಕರದ ತೊಂದರೆಗಳನ್ನು ನಿವಾರಿಸಿಕೊಂಡು ಬರಲಾಗುತ್ತಿದೆ. ತಂದೆಯ ತಂಗಿಯ ಮಗಳನ್ನು ಇವರು ವಿವಾಹ ಆಗಬಹುದು. ಅಲ್ಲದೆ ತಾಯಿಯ ತಮ್ಮ ಅಥವಾ ಅಣ್ಣನ ಮಗಳನ್ನು

ಮದುವೆಯಾಗುವ ಸಂಪ್ರದಾಯ ಕೂಡ ಸಾಮಾನ್ಯವಾಗಿ ಇವರಲ್ಲಿ ಕಂಡುಬರುತ್ತದೆ. ಅಲ್ಲದೆ ತಾಯಿಯ ತಮ್ಮ ಅಥವಾ ಅಣ್ಣನ ಮಗಳನ್ನು ಮದುವೆಯಾಗುವ ಸಂಪ್ರದಾಯ ಕೂಡ ಸಾಮಾನ್ಯವಾಗಿ ಇವರಲ್ಲಿ ಕಂಡುಬರುತ್ತದೆ. ಸೋದರಿಕೆ ಸಂಬಂಧದಲ್ಲಿ ಹೆಚ್ಚು ಮದುವೆಯಾಗುವ ಈ ಬುಡಕಟ್ಟಿನಲ್ಲಿ ಒಬ್ಬ ವ್ಯಕ್ತಿ ನಾಲ್ಕನೇ ಮದುವೆಯಾಗುವ ಅವಕಾಶವನ್ನು ಹೊಂದಿರುತ್ತಾನೆ. ನಾಲ್ಕು ಮದುವೆಗೆ 'ಪಾಟ್' ಎಂದು ಕರೆಯುವ ಗೌಳಿಗರು ಗಂಡ ಸತ್ತ ನಂತರ ಆ ಹೆಣ್ಣನ್ನು ಮದುವೆಯಾಗುವ ಸಿರಿಯುಡಿಕೆ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಕೆಲವು ಗೌಳಿಗರು ತೊಟ್ಟಿಲ ಹೆಣ್ಣು ಕೂಸಿಗೆ ವಿವಾಹ ಮಾಡುತ್ತಿದ್ದ ಬಗ್ಗೆ ಹೇಳುತ್ತಾರಾದರೂ ಹುಡುಗಿ ಋತುಮತಿಯಾಗುವ ಮೊದಲೇ ಅವಳ ವಿವಾಹವನ್ನು ಮಾಡುವುದು ಇವರಲ್ಲಿ ವಾಡಿಕೆಯಾಗಿದೆ. ಇದು ಒಂದು ಅರ್ಥದಲ್ಲಿ ಬಾಲ್ಯ ವಿವಾಹವೇ ಆಗಿದೆ. ಏಳು ವರ್ಷದಿಂದ ಹದಿನಾಲ್ಕು ವರ್ಷದ ಪ್ರಾಯದ ಮಕ್ಕಳಿಗೆ ಮದುವೆ ಮಾಡಲಾಗುತ್ತದೆ.[೨] ಹೀಗೆ ಇವರಲ್ಲಿ ಹಲವು ವಿಧದ ವಿವಾಹ ಪದ್ಧತಿಗಳಿವೆ.

ಕೊರಗ ಸಮುದಾಯದಲ್ಲಿ ಮೊದಲಿನಿಂದಲೂ ಬಾಲ್ಯವಿವಾಹ ಪದ್ಧತಿ ಇರುವುದಿಲ್ಲ. ಹೆಣ್ಣು ಋತುಮತಿಯಾದ ನಂತರ ಮದುವೆಗೆ ಯೋಗ್ಯಳು ಎಂದು ತಿಳಿದು ವಿವಾಹವಾಗುವುದು ಇವರ ಸಂಪ್ರದಾಯ. ಮದುವೆಗೆ ಹಿರಿಯರ ಒಪ್ಪಂದ, ಹುಡುಗ-ಹುಡುಗಿಯರ ಆಯ್ಕೆ ಪದ್ಧತಿ ಇದ್ದು, ಇವರಿಬ್ಬರ ಒಪ್ಪಿಗೆಯ ನಂತರವೇ ಹಿರಿಯರು ಮದುವೆ ನಿಶ್ಚಯಿಸುತ್ತಾರೆ. ಸೋಲಿಗರಲ್ಲಿ ಹಲವು ವಿಧದ ವಿವಾಹ ಪದ್ಧತಿಗಳು ರೂಢಿಯಲ್ಲಿವೆ. ಅವುಗಳಲ್ಲಿ ಬಹುಮುಖ್ಯವಾಗಿ ಅಪಹರಣ ವಿವಾಹ, ಸೇವಾ ವಿವಾಹ, ಅಕ್ರಮ ಪ್ರವೇಶ ವಿವಾಹ, ಬಹುಪತ್ನಿತ್ವ ವಿವಾಹ, ಮೈದುನ ವಿವಾಹ, ಏಕಸಂಗಾತಿ ವಿವಾಹ, ವಿಧವಾವಿವಾಹ ಪದ್ಧತಿಗಳು ಹೆಚ್ಚು ಬಳಕೆಯಲ್ಲಿವೆ. ಆದರೆ ಅಪಹರಣ ವಿವಾಹ ಪದ್ಧತಿ ಸೋಲಿಗರಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಇದಕ್ಕೆ ಬಹುಮುಖ್ಯ ಕಾರಣವೆಂದರೆ ಅವರು ವಾಸಿಸುವ ಪರಿಸರ ಹಾಗೂ ಆ ಸಮಾಜ ದಲ್ಲಿರುವ ಧಾರ್ಮಿಕತೆ ಕಾರಣವಾಗಿರಬಹುದು. ಈ ಸಮುದಾಯದಲ್ಲಿ ವಿವಾಹಪೂರ್ವ ಲೈಂಗಿಕ ಸಂಪರ್ಕಕ್ಕೆ ವಿರೋಧವಿದೆ. ಹೆಣ್ಣು-ಗಂಡುಗಳು ಕಾಡುಗಳಲ್ಲಿ ಗೆಡ್ಡೆ, ಗೆಣಸು, ಹಣ್ಣು, ಹಂಪಲು ತರಲು ಹೋದಂತಹ ಸಂದರ್ಭದಲ್ಲಿ ಕಾಡಿನಲ್ಲಿ ಲೈಂಗಿಕತೆಗೆ ಅವಕಾಶವಿದ್ದರೂ ಹಾಗೇ ಮಾಡುವುದಿಲ್ಲ. ಕುಲಪಂಚಾಯಿತಿಯ ನಿಯಮ ಅಷ್ಟು ಕಟ್ಟುನಿಟ್ಟಾಗಿರುತ್ತದೆ. ಹಾಗೆಯೇ ಇವರ ಸಂಪ್ರದಾಯದಲ್ಲಿ ವಿವಾಹ ವಿಚ್ಛೇದನವೂ ಉಂಟು. ಹೆಂಗಸು ಮೊದಲು ವಿಚ್ಛೇದನ ಬಯಸಿದರೆ ಗಂಡನಿಂದ ಪಡೆದ ತೆರವನ್ನು ವಾಪಸ್ಸು ಕೊಡಬೇಕಾಗುತ್ತದೆ. ನಂತರ ಮರು ವಿವಾಹ ಆಗಲು ಇವರಲ್ಲಿ ಅವಕಾಶವಿದೆ. ಗಂಡು ಬಯಸಿದರೆ ತೆರ ಮತ್ತು ಖರ್ಚನ್ನು ಹಿಂತಿರುಗಿಸಲು ಅವಕಾಶವಿಲ್ಲ. ಗಂಡು-ಹೆಣ್ಣು ಇಬ್ಬರು ಒಪ್ಪಿ ವಿಚ್ಛೇದನ ಪಡೆದರೆ ಕುಲಪಂಚಾಯಿತಿಯವರಿಗೆ ಭೋಜನ ಕೂಟ ಏರ್ಪಡಿಸುತ್ತಾರೆ. ಇದಕ್ಕೆ 'ಬಿಡುಗಡೆಯ ಅನ್ನ' ಎನ್ನುವರು.

ಹಾಲಕ್ಕಿ ಒಕ್ಕಲಿಗರ ಮದುವೆಯಲ್ಲಿ ಗಂಡು ಹೆಣ್ಣಿಗೆ ತೆರ ಕೊಡಬೇಕು, ಹೆಣ್ಣು ಗಂಡುಗಳ ಅದಲು ಬದಲು ವಿವಾಹ ಪದ್ಧತಿಯೂ ಉಂಟು. ಬ್ರಾಹ್ಮಣ ಪುರೋಹಿತರು ಇರುವುದಿಲ್ಲ. ಬದಲಿಗೆ ಊರ ಗೌಡನೇ ಪ್ರಮುಖನಾಗಿರುತ್ತಾನೆ. ಹೆಣ್ಣನ್ನು ಅಡಗಿಸಿಡುವ ಸಂಪ್ರದಾಯ ಇವರಲ್ಲಿದೆ. ವಿಧವಾ ವಿವಾಹಕ್ಕೂ ಹಾಲಕ್ಕಿ

ಒಕ್ಕಲಿಗರಲ್ಲಿ ಅವಕಾಶ ಇದೆ.[೧೩] ಹಾಲಕ್ಕಿ ಒಕ್ಕಲಿಗರಲ್ಲಿ ಪ್ರಚಲಿತದಲ್ಲಿರುವ ಹೆಣ್ಣನ್ನು ಅಡಗಿಸಿಡುವ ಈ ಪದ್ಧತಿ ಅಪಹರಣ ವಿವಾಹದ ಪಳೆಯುಳಿಕೆಯಾಗಿರಬಹುದೆನಿಸುತ್ತದೆ.

ಕಾಡುಕುರುಬರಲ್ಲಿ ಪಲಾಯನ ವಿವಾಹ ಪದ್ಧತಿ ಇದೆ. ಗಂಡು-ಹೆಣ್ಣು ಒಬ್ಬರಿಗೊಬ್ಬರು ಒಪ್ಪಿದಾಗ ಹೇಳದೆ ಕೇಳದೆ ಓಡಿಹೋಗಿ ವಿವಾಹವಾಗುವ ಸಂಪ್ರದಾಯ ಅವರಲ್ಲಿದೆ. ಇಲ್ಲವೆ ಸ್ವಲ್ಪ ದಿನ ಆದನಂತರ ಪುನಃ ತಮ್ಮ ಹಾಡಿಗೆ ಬಂದು ಹಾಡಿನ ಯಜಮಾನಿಗೆ ದಂಡ ಶುಲ್ಕ ಪಾವತಿಸಿ ಊರಹಿರಿಯರ ಸಮ್ಮುಖದಲ್ಲಿ ವಿವಾಹವಾಗಬಹುದು. ಮ್ಯಾಸಬೇಡರಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಇದೆ. ತಂದೆಯ ಆಸ್ತಿ ಹೋಗುವುದು ಗಂಡು ಮಕ್ಕಳಿಗೆ, ಬೇಡನಾಯಕ ಸಮುದಾಯದಲ್ಲಿ ಹೆಣ್ಣುಮಕ್ಕಳ ಬಗೆಗಿರುವ ನಿಯಮಗಳು ಬಹಳ ಉದಾರವಾಗಿರುವಂತೆ ಕಾಣಿಸುತ್ತವೆ. ಈ ಬುಡಕಟ್ಟಿನಲ್ಲಿ ಹೆಣ್ಣುಮಕ್ಕಳನ್ನು ಪಡೆದವರು ಗಂಡನ್ನು ಹುಡುಕಿಕೊಂಡು ಹೋಗುವಂತಿಲ್ಲ. ಗಂಡಿನ ಕಡೆಯವರೇ ಹೆಣ್ಣುಗಳಿರುವ ಮನೆಗೆ ಹುಡುಕಿಕೊಂಡು ಬರಬೇಕು. ಇಂದಿಗೂ ಇವರಲ್ಲಿ ವರದಕ್ಷಿಣೆ ಪದ್ಧತಿ ಇಲ್ಲ. ಹೆಣ್ಣಿನವರಿಗೆ ಗಂಡಿನವರು ವಧುವಿನ ತೆರ ಕಟ್ಟಬೇಕು. ಈ ತೆರವೇನೂ ಹೆಚ್ಚು ಇರುವುದಿಲ್ಲ; ೧೫,೩೦,೫೦ ರೂಪಾಯಿಗಳು ಇರುತ್ತವೆ. ಹಣ ಕೊಡಲಾಗದವರು ಹೊಗೆಸೊಪ್ಪು, ದನ, ಮೇಕೆ, ಕುರಿ, ಆಯುಧ ಇಂಥವುಗಳನ್ನು ಕೊಟ್ಟು ತೆರ ಸಲ್ಲಿಸಿ ಮದುವೆ ಮಾಡಿಕೊಂಡು ಬರುವುದುಂಟು.[೧೪]

ಕಾಡುಗೊಲ್ಲ ಸಮುದಾಯದಲ್ಲಿ ವಿವಾಹಕ್ಕೆ ಮೊದಲು ಹೆಣ್ಣು-ಗಂಡಿನವರ ನಡುವೆ ಒಪ್ಪಂದ ನಡೆಯ ಬೇಕು. ಒಂದು ಹಳ್ಳಿಯಿಂದ ಮತ್ತೊಂದು ಹಳ್ಳಿಗೆ ಹೆಣ್ಣು ನೋಡಲು ಹೋಗುವಾಗ ಶಕುನಗಳನ್ನು ಗಮನಿಸುವುದು ಕಾಡುಗೊಲ್ಲರಲ್ಲಿ ಹೆಚ್ಚು. ಐದು ಜನ ಗಂಡಸರು ಒಬ್ಬ ಹಿರಿಯ ಹೆಣ್ಣುಮಗಳೊಡನೆ ಹೆಣ್ಣು ನಿಶ್ಚಯಿಸಲು ಹೊರಡುತ್ತಾರೆ. ಈ ಹಿರಿಯ ಹೆಣ್ಣು ಮಗಳು ಸುಣ್ಣದ ಬೊಟ್ಟು ಹಚ್ಚಿರುವ ಮಡಿಕೆಯನ್ನು ಹೊತ್ತು ಮುಂದೆ ನಡೆಯುತ್ತಾಳೆ. ಈ ಮಡಕೆಯಲ್ಲಿ ಅಕ್ಕಿ ವೀಳ್ಯದೆಲೆ, ಬಾಳೆಹಣ್ಣು ಇದ್ದು, ಅದರ ಬಾಯನ್ನು ಬುಟ್ಟಿಯಿಂದ ಮುಚ್ಚಿ ಕಟ್ಟಿರುತ್ತಾರೆ. ಗಂಡಿನ ಮನೆಯವರು ಹೆಣ್ಣಿನ ಮನೆಗೆ ಹೆಣ್ಣು ನೋಡಲು ಹೋಗುವುದು ಮ್ಯಾಸಬೇಡರು ಮತ್ತು ಕಾಡುಗೊಲ್ಲರ ಸಂಪ್ರದಾಯವಾಗಿದೆ.[೧೫] ಈ ಬುಡಕಟ್ಟು ವರ್ಗದಲ್ಲಿ ಹೆಣ್ಣು ಹೆತ್ತವರಿಗೆ ಹೆಚ್ಚಿನ ಆದ್ಯತೆಯಿರುತ್ತದೆ.

ವಿವಾಹದ ಪ್ರಕಾರಗಳನ್ನು ಕೆಲವು ವಿದ್ವಾಂಸರು, ಸಮಾಜಶಾಸ್ತ್ರಜ್ಞರು ತಿಳಿಸಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ಗಮನಿಸಬಹುದು. ರಾಕ್ಷಸ ವಿವಾಹ, ಪೈಶಾಚ ವಿವಾಹ, ಅಸುರ ವಿವಾಹ, ಆರ್ಷವಿವಾಹ, ಬ್ರಹ್ಮವಿವಾಹ, ದೈವವಿವಾಹ, ಪ್ರಜಾಪತ್ಯವಿವಾಹ, ಗಾಂಧರ್ವವಿವಾಹ ಹೀಗೆ ಹಲವಾರು ಪ್ರಕಾರಗಳನ್ನು ಕಾಣಬಹುದಾಗಿದೆ. ಭಾರತದಲ್ಲಿ ಮುಳ್ಳು ಕುರುಬರು, ತಿರುವಾಂಕೂರಿನ ಮಡುವರು, ಉತ್ತರ ಅರ್ಕಾಟಿನ ಮಳಿಯಾಳಿಗಳು, ಛೋಟಾ ನಾಗಪುರ ಮತ್ತು ವೈನಾಡಿನ ಆದಿವಾಸಿಗಳಲ್ಲಿ ವಧುವಿನ ಕಡೆಯವರೊಡನೆ ನೀರಿಗೆ ಹೋದಾಗ, ಕಟ್ಟಿಗೆ ಆಯ್ದು ತರಲು ಹೋದಾಗ, ನೃತ್ಯದಲ್ಲಿ ಭಾಗವಹಿಸಿದಾಗ ಅವಳನ್ನು ಅಪಹರಿಸಿ ತಂದು ಮದುವೆಯಾಗುವ ಪದ್ಧತಿ ಅನೇಕ ಆದಿವಾಸಿ ಪಂಗಡಗಳಲ್ಲಿದೆ. ಜನಪದ ಕಥೆಗಳಲ್ಲಿಯೂ ಸಹ ಇಂತಹ ಕಥಾನಕಗಳು ಸಾಕಷ್ಟು ಕಂಡುಬರುತ್ತವೆ. ಅವುಗಳನ್ನು ಸ್ಥೂಲವಾಗಿ ನೋಡಬಹುದು.

ಒಟ್ಟಾರೆ ವಿವಾಹ ಎನ್ನುವುದು ಧರ್ಮಪರಿಪಾಲನೆ ಮತ್ತು ವಂಶಾಭಿವೃದ್ಧಿಗಳೇ ಪರಮ ಗುರಿಯಾಗಿದೆ. ಇವುಗಳ ಈಡೇರಿಕೆಗಾಗಿ ಸ್ತ್ರೀಪುರುಷರು ವಿವಾಹ ಸಂಸ್ಕಾರಕ್ಕೆ ಒಳಗಾಗಬೇಕು. ವಿವಾಹ ಹೆಣ್ಣು ಗಂಡುಗಳನ್ನು ಪತಿಪತ್ನಿಯರನ್ನಾಗಿ ಪರಿವರ್ತಿಸುತ್ತದೆ. ದಾಂಪತ್ಯ ಜೀವನ ಕೌಟುಂಬಿಕ ಸಾಮರಸ್ಯಕ್ಕೆ ದಾರಿ ಮಾಡಿಕೊಡುವುದೇ ವಿವಾಹದ ಉದ್ದೇಶವಾಗಿದೆ.

ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿ ವಿವಾಹದ ಸ್ವರೂಪವನ್ನು ಗಮನಿಸಿದಾಗ ಭೂತ, ವರ್ತಮಾನ, ಭವಿಷತ್ ಕಾಲಗಳಲ್ಲಿ ನಡೆಯುವ ವಿವಾಹದ ಸ್ವರೂಪವನ್ನು ನೋಡಬಹುದು.

'ಬಂಗಾರ ಕೂದಲಿನ ರಾಜಕುಮಾರಿ' ಕಥೆಯಲ್ಲಿ ಬಂಗಾರ ಕೂದಲನ್ನು ಹೊಂದಿರುವ ರಾಜಕುಮಾರಿ ಬಾವಿಯಲ್ಲಿ ನೀರು ಬಾರದಿದ್ದಾಗ ಅವಳ ಫೋಟೋ ತೆಗೆದು ಬಾವಿಕಟ್ಟೆಯ ಮೇಲೆ ಹಚ್ಚಿದ ಅರಸ ಅವಳ ತೂಕದ ಬಂಗಾರ ಕೊಟ್ಟರೆ ಅವರಿಗೆ ನನ್ನ ಮಗಳನ್ನು ಕೊಡುವುದಾಗಿ ಹೇಳುತ್ತಾನೆ. ಯಾರ್‍ಯಾರೋ ಬಂದು ಏನೇನೋ ತಂದು ಹಾಕಿದರೂ ಅವಳ ತೂಕದಷ್ಟು ಹಣ ಕೊಡಲಾಗಲಿಲ್ಲ. ಒಬ್ಬ ರಾಜ ಅವಳನ್ನು ನೋಡಿ ಮದುವೆಯಾಗುವುದಾಗಿ ಹೋದ. ಅವಳ ತೂಕಕ್ಕೆ ಇಡೀ ಆಸ್ತಿ, ಮನೆ, ತಂದೆ,ತಾಯಿ ಒತ್ತಿಟ್ಟು ತಂದು ಹಣ ಹಾಕಿದರೂ ಅವಳ ತೂಕ ಆಗಲಿಲ್ಲ. ಕೊನೆಗೆ ರಾಜುಟಗಿ ಒತ್ತಿಟ್ಟು ಆಗ ಸಾಕಾಯಿತು. ಆಕೆಯನ್ನು ವಿವಾಹವಾದಂತಹ ಪರಿ ಇದಾಗಿದೆ. ಮಗಳ ವಿವಾಹ ಈ ರೀತಿ ವಧುದಕ್ಷಿಣೆ ಪಡೆಯುವುದರ ಮೂಲಕ ವಿವಾಹ ಜರುಗಿತು.

ರಾಜಕುಮಾರಿಯ ಸಾಹಸ ಕಥೆಯಲ್ಲಿ ರಾಜ ರಾಣಿಯರಿಗೆ ಬಹಳ ವರ್ಷಗಳ ಮಕ್ಕಳಾಗಿರಲಿಲ್ಲ. ರಾಜ ಮುಪ್ಪಿನ ವಯಸ್ಸಿಗೆ ಬಂದಿದ್ದ. ಅವನ ಸಂಕಷ್ಟಕ್ಕೆ ಪರಮೇಶ್ವರ ಮೆಚ್ಚಿ ಒಂದು ಮಗುವನ್ನು ಕರುಣಿಸಿದ. ಮಗನ ಜಾತಕ ನೋಡಲು ಪಂಡಿತರನ್ನು ಕರೆಸಿದ. ಪಂಡಿತರು ಈ ಮಗುವಿಗೆ ೧೨ ದಿನ ತುಂಬುವುದರೊಳಗೆ ೧೨ ವರ್ಷದ ಹುಡುಗಿಯನ್ನು ಮದುವೆ ಮಾಡಬೇಕು ಎಂದು. ಅದೇ ಪ್ರಕಾರ ಹುಡುಗಿಯನ್ನು ಹುಡುಕಲು ಪ್ರಾರಂಭಿಸಿದರು. ಹನ್ನೆರಡು ದಿವಸದ ಬಾಲಕನಿಗೆ ೧೨ ವರ್ಷದ ಹುಡುಗಿಯರನ್ನು ಯಾರು ಕೊಡುವುದಿಲ್ಲ. ಮೋಸದಿಂದ ಕುತಂತ್ರ ಮಾಡಿ ಪ್ರಧಾನಿ ಮಗುವಿಗೆ ವಿವಾಹ ಮಾಡುವುದು ಒಂದು ವಿಪರ್ಯಾಸ.

ರಾಜಾ-ರಾಣಿ ಕಥೆಯಲ್ಲಿ ರಾಜ ರಾಣಿಯರಿಗೆ ಮಕ್ಕಳಾಗಿರಲಿಲ್ಲ. ದೇವರ ಅನುಗ್ರಹದಿಂದ ಒಂದು ಹೆಣ್ಣು ಮಗುವಿನ ಜನನವಾಯಿತು. ಹುಟ್ಟಿದ ಕೂಡಲೇ ತಂದೆ-ತಾಯಿ ಮರಣ ಹೊಂದಿದರು. ಇದರಿಂದ ನೋವುಂಡ ಮಗಳು ದೇಶಾಂತರ ಹೊರಡುತ್ತಾಳೆ. ಕುಂಬಾರ ಮನೆಯಲ್ಲಿ ವಾಸಿಸುವಾಗ ಇವಳಿಗೆ ಗಂಡು ಮಗು ಆಗುತ್ತದೆ. ಕೆಲವು ನಿಂದನೆಗಳನ್ನು ತಾಳಲಾರದೆ ಕುಂಬಾರ ಮನೆಯನ್ನು ಬಿಟ್ಟು ಬೇರೆ ಊರಿನಲ್ಲಿ ಬಾಡಿಗೆ ಮನೆ ಮಾಡಿಕೊಂಡು ಸಂಸಾರ ನಡೆಸುತ್ತಾಳೆ. ಇತ್ತ ಮಗ ದೇವರ ಕೃಪೆಯಿಂದ ಕೈಯಲ್ಲಿ ಆಗಿದ್ದ ಬೊಚ್ಚೆಯಿಂದ ಜನಿಸಿದ್ದರಿಂದ ಆ ಮಗು ಬೇಗ ದೊಡ್ಡದಾಯಿತು. ಆ ನಂತರ ಆ ಮಗುವಿಗೆ ಸಮುದ್ರದಲ್ಲಿ ಈಜುವ ಬಯಕೆ; ಅದರಂತೆ ಈಜಿದ, ವಜ್ರದ ಹರಳು ಸಿಕ್ಕವು.

ರಾಜಕುಮಾರಿ ಮನೆಯ ಪಕ್ಕದಲ್ಲಿ ಇವರು ಮನೆ ಬಾಡಿಗೆ ಮಾಡಿದ್ದರು. ಮಹಡಿ ಮೇಲೆ ರಾಜಕುಮಾರ ಕೂಡಿರುತ್ತಿದ್ದಳು. ಅವಳ ಮೇಲೆ ಇವನಿಗೆ ಮನಸಾಯಿತು. ಇದರಿಂದ ಅವಳನ್ನು ವಜ್ರದ ಹರಳು ಒಗೆದು ಮಾತನಾಡಿಸಿದ. ಅದರಂತೆ ಮೂರು ದಿನ ಮೂರು ಹರಳು ಒಗೆದ. ಇದರಿಂದ ರಾಜಕುಮಾರಿಗೆ ಚಿಂತೆಯಾಯ್ತು. ವಜ್ರದ ಹರಳನ್ನು ಒಗೆದಿರುವನು ಅದೆಷ್ಟು ದೊಡ್ಡ ಶ್ರೀಮಂತ ಇರಬೇಕು ಎಂದುಕೊಂಡು ಡಂಗೂರ ಸಾರಿಸಿದರು. ವಜ್ರದ ಹರಳು ಬಳಸಿ ಉಂಗುರ ಯಾರು ಕೊಟ್ಟಿರುವರು ಅವಳಿಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡುತ್ತೇನೆಂದು. ಅದಕ್ಕೆ ಇವನು ವಜ್ರ ತರಲು ಹೋದಾಗ ರಾಕ್ಷಸಿಯನ್ನು ಕೊಲ್ಲಿ ಅದರ ಮಗಳನ್ನು ವಿವಾಹವಾಗುತ್ತಾನೆ. ನಂತರ ಅವಳ ಕರಕೊಂಡು ವಜ್ರದಿಂದ ತಯಾರಿಸಿದ ಆಭರಣಗಳನ್ನು ತಂದು ಪ್ರಧಾನಿಗೆ ಕೊಟ್ಟು ಅದರಂತೆ ರಾಜ ತನ್ನ ಮಗಳನ್ನು ಅವನಿಗೆ ಕೊಟ್ಟು ವಿವಾಹ ಮಾಡಿದ.

ರಾಜ ಪ್ರಧಾನಿ ಕಥೆಯಲ್ಲಿ ರಾಜನ ಮಗ ಪ್ರಧಾನಿ ಮಗ ದೋಸ್ತಿಗಳು ರಾಜಕುಮಾರನಿಗೆ ಗುರುವಿನ ಮೇಲೆ ಅಗಾಧವಾದ ಪ್ರೇಮವಿತ್ತು. ಗುರುವಿಗೆ ಒಬ್ಬ ಮಗಳು ಇದ್ದಳು. ಅವಳಿಗೆ ರಾಜಕುಮಾರನ ಮೇಲೆ ಮನಸಾಯ್ತು. ರಾಜಕುಮಾರ ಪ್ರಧಾನಿ ಮಗ ಯಾವಾಗ ಅಗಲುತ್ತಿರುವುದನ್ನು ಮನನ ಮಾಡಿಕೊಂಡು ಹೊಳೆಯ ಹತ್ತಿರ ಹೋಗುತ್ತಾಳೆ. ಅವಳ ಮಾತಿಗೆ ಜಗ್ಗದೆ ಮತ್ತೆ ಹಳೆ ಸೀರೆ ಕುಬ್ಬಸ ಉಟ್ಟುಕೊಂಡು ರಾಜಕುಮಾರ ಅತ್ಯಾಚಾರ ಮಾಡಿದ. ಹಾಗೆ ನಟಿಸಿ ಅವಳನ್ನು ವಿವಾಹವಾಗುವುದು ಪ್ರಸ್ತುತ ಸಮಾಜಕ್ಕೆ ಪೂರಕದಂತಿದೆ.

ಶಂಕರದತ್ತನ ಕಥೆಯಲ್ಲಿ ರಾಜ ತನ್ನ ೭೦ನೇ ವಯಸ್ಸಿನಲ್ಲಿ 'ಬಂಜೆ' ಎನ್ನುವ ಸೊಲ್ಲು ಹೋಗಲಾಡಿಸಲು ದೇವರ ಮೊರೆಹೋಗುವುದು. ಇದರ ಪ್ರತಿಫಲವಾಗಿ ಗಂಡುಮಗುವಿನ ಜನನ ೧೨ ವರ್ಷದವರೆಗೆ ಮಗುವಿನ ಮುಖ ನೋಡಬಾರದೆಂದು ಜ್ಯೋತಿಷನ ಹೇಳಿಕೆ. ಅದರಂತೆ ಮಗನನ್ನು ಹೊರಗೆ ಇಡುವುದು. ನಂತರ ಮದುವೆ ಮಾಡುವ ಉದ್ದೇಶದಿಂದ ಕನ್ಯೆ ವೀಕ್ಷಣೆ ನಡೆಯುತ್ತದೆ. ಇದಕ್ಕೆ ಪ್ರತಿರೋಧವಾಗಿ ಸಾಮಾನ್ಯ ರಾಜನ ಮಗನಿಗೆ ಇಷ್ಟವಾಗಲ್ಲ. ದೇವಲೋಕದ ದೇವೇಂದ್ರನ ಮಗಳು, ನಾಗಲೋಕದ ನಾಗೇಂದ್ರನ ಮಗಳು, ಹಂಚೆ ಕೋಟೆ ಅರಸನ ಮಗಳನ್ನು ವಿವಾಹವಾಗುವ ಚಲ ರಾಜನ ಮಗನದ್ದು. ಅವನ ಅಪೇಕ್ಷೆಯಂತೆ ಈ ಮೂವರನ್ನು ವಿವಾಹವಾಗುವುದು. ಆ ಸಂದರ್ಭದಲ್ಲಿ ವಿವಾಹವಾಗುವುದಕ್ಕೆ ದೇವರು ಪ್ರತ್ಯಕ್ಷವಾಗಿ ಸಹಾಯ ಮಾಡುವುದು ಈ ಕಥೆ ಬಹುಪತ್ನಿತ್ವಕ್ಕೆ ಕೈಗನ್ನಡಿ ಎಂಬಂತೆ ತೋರುತ್ತಿದೆ.

ಮೊಲೆಹಾಲು ಮೋರೆಗೆ ಸುರಿದೋ ಕಥೆಯಲ್ಲಿ ರಾಜನಿಗೆ ಇರುವ ಒಬ್ಬನೇ ಮಗನು ಕೀಲುಕುದುರೆ ಹತ್ತಿಕೊಂಡು ದೇಶಾಂತರ ಪರ್ಯಟನೆ ಮಾಡಿ ನಂತರ ಒಂದು ಪಟ್ಟಣದಲ್ಲಿ ನೆಲೆನಿಲ್ಲುತ್ತಾನೆ. ನಂತರದಲ್ಲಿ ಆ ಊರಿನ ಅರಸನ ಮಗಳು ತುಂಬಾ ಸೌಂದರ್ಯವತಿ ಋತುಮತಿಯಾಗಿ ಹೊಸರದಲ್ಲಿ ಮಹಡಿ ಮನೆಯಲ್ಲಿ ಕೂಡಿಟ್ಟಿರುತ್ತಾರೆ. ಹೇಗಾದರೂ ಮಾಡಿ ಅವಳ ಸೌಂದರ್ಯವನ್ನು ಸವಿಯುವ ಹಂಬಲದಿಂದ ತಡರಾತ್ರಿಯಲ್ಲಿ ಹೋಗಿ ಬರುವ ದೃಶ್ಯ ಅದ್ಭುತ. ನಂತರ ರಾಜನಿಗೆ ತಿಳಿದು ಹಿಡಿಯುವ ಅಥವಾ ಕೊಲೆಗೈಯ್ಯುವ ಸಲುವಾಗಿ ಪ್ರಯತ್ನಿಸುತ್ತಾನೆ. ಕೊನೆಗೆ ರಾಜಕುಮಾರಿಯನ್ನು ಗಾಂಧರ್ವ ವಿವಾಹವಾಗಿ ಕರೆದುಕೊಂಡು ಹೋಗುವ ಪ್ರಸಂಗ ಈ ಕಥೆಯಲ್ಲಿ ಮೂಡಿಬಂದಿದೆ.

'ಅಡವಿ ಮನುಷ್ಯ' ಕಥೆಯಲ್ಲಿ ರಾಜನು ಶಿಕಾರಿ ಹೋದಂತಹ ಸಂದರ್ಭದಲ್ಲಿ ಅಡವಿಯಲ್ಲಿ ರಾಕ್ಷಸಿ ತನ್ನ ರೂಪ ಬದಲಾಯಿಸಿ ಸುಂದರ ಹೆಣ್ಣಾಗುತ್ತಾಳೆ. ಆ ಸೌಂದರ್ಯಕ್ಕೆ ಮನಸೋತು ರಾಕ್ಷಸಿಯ ಅಪೇಕ್ಷೆಯಂತೆ ಕೆಲವು ಶರತ್ತುಗಳಿಗೆ ಬದ್ಧನಾಗಿ ವಿವಾಹವಾಗುವುದು. ಎಲ್ಲಾ ಹೆಂಡತಿಯರಿಗಿಂತ ನನ್ನನ್ನು ನೀನು ತುಂಬಾ ಪ್ರೀತಿ ಮಾಡುವುದಾದರೆ ವಿವಾಹ ಆಗುವ ಶರತ್ತು ವಿಧಿಸುತ್ತಾಳೆ. ಹಾಗೆ ಅಂದರೆ ಬಹುಪತ್ನಿತ್ವ ಮತ್ತು ರಾಕ್ಷಸಿ ವಿವಾಹವನ್ನು ಈ ಕಥೆ ಬಿಂಬಿಸುತ್ತದೆ.

ನಾಗೇಂದ್ರನ ಉಂಗುರ ಕಥೆಯಲ್ಲಿ ರಾಜನಿಗೆ ೪ ಮಂದಿ ಅಣ್ಣ ತಮ್ಮಂದಿರು. ಅವರಲ್ಲಿ ಕೊನೆಯವನು ದಡ್ಡ; ಮೂವರು ಅಣ್ಣರು ವ್ಯಾಪಾರ ಮಾಡುತ್ತಾರೆ. ಅದರಂತೆ ಆ ದಡ್ಡ ಮಗನು ವ್ಯಾಪಾರ ಮಾಡುತ್ತಾನೆ. ತಂದೆ ತಾಯಿಯವರ ಒಪ್ಪಿಗೆ ಮೇರೆಗೆ ಸಂತೆಗೆ ಹೋಗಿ ಹಾವು, ಬೆಕ್ಕು ಖರೀದಿಸಿದ. ಇದಕ್ಕೆ ತಂದೆ-ತಾಯಿ ವಿರೋಧಿಸಿದಾಗ ಅವುಗಳನ್ನು ಕಾಪಾಡುವ ಸಲುವಾಗಿ ಮನೆಯಿಂದ ಹೊರಗೆ ಬಂದು ಬಿಡುತ್ತಾನೆ. ನಂತರ ಅವುಗಳನ್ನು ಬಿಟ್ಟಿದ್ದರ ಸಲುವಾಗಿ ಹಾವು ತನ್ನ ನಾಗಗುಂಪನ್ನು ತೋರಿಸಿ ಉಂಗುರ ನೀಡುತ್ತದೆ. ಇದರ ಒಂದು ಪ್ರಭಾವದಿಂದ ತನಗೆಲ್ಲಾ ಬೇಕಾದುದು ಪಡೆಯುತ್ತಾನೆ. ಒಂದು ಹೆಣ್ಣು ಸೃಷ್ಟಿಮಾಡಿ ಆ ಹೆಣ್ಣಿನ ಜೊತೆ ವಿವಾಹವಾಗುತ್ತಾನೆ.

ಚಿಕ್ಕಸಿದ್ಧ ದೊಡ್ಡಸಿದ್ಧ ಕಥೆಯಲ್ಲಿ ರಾಜನ ಮಗ ಮತ್ತು ಪ್ರಧಾನಿ ಮಗ ಇಬ್ಬರು ಗೆಳೆಯರು ರಾಜನ ಮಗನಿಗೆ ಬಾಲ್ಯವಿವಾಹವಾಗಿರುತ್ತದೆ. ನಂತರದಲ್ಲಿ ವಯಸ್ಸಿಗೆ ಬಂದಾಗ ಸೊಸೆಯನ್ನು ಕರೆಯುವ ಸಂದರ್ಭದಲ್ಲಿ ರಾಜನ ಮಗ ಪ್ರಧಾನಿ ಮಗ ಇಬ್ಬರು ಮಾವನ ಮನೆಗೆ ಹೋಗುತ್ತಾರೆ. ದಾರಿ ಮಧ್ಯೆಯಲ್ಲಿ ಮಂತ್ರಿ ಮಗ ರಾಜನ ಮಗ ವೇಷ ಧರಿಸಿ ಮಾವನ ಮನೆಗೆ ಹೋಗಿ ನಾನೇ ಅಳಿಯ ಎಂದು ಖಚಿತಪಡಿಸಿಕೊಳ್ಳುತ್ತಾನೆ. ನಂತರದಲ್ಲಿ ಇಬ್ಬರಿಗೂ ವಾಗ್ವಾದವಾದರೂ ದೇವರ ಸಹಾಯದಿಂದ ಮರುಜೀವ ಪಡೆದು ವಿವಾಹವಾಗುತ್ತಾನೆ.

ಅಪಹರಿಸಲ್ಪಟ್ಟ ರಾಜಕುಮಾರಿ ಕಥೆಯಲ್ಲಿ ರಾತ್ರಿ ಮಲಗಿದಾಗ ಹಾವು ರಾಜಕುಮಾರಿಯನ್ನು ಅಪಹರಿಸಿ ತನ್ನ ಬಿಲಕ್ಕೆ ಸಾಗಿಸಿತು. ಆಕೆ ದಾರಿಗುಂಟ ಕೊರಳ ಹಾರದ ಮುತ್ತುಗಳನ್ನು ಚೆಲ್ಲಿದ್ದರಿಂದ ನಾಯಕನು ಹಾವಿನ ಬಿಲವನ್ನು ಶೋಧಿಸಿದ. ಸಹಾಯಕರು ಒದಗಿಸಿದ ತೊಟ್ಟಿಲಲ್ಲಿ ಕುಳಿತು ಹಾವಿನ ನೆಲಮನೆಗೆ ಸಾಗಿದ ನಾಯಕಿಯನ್ನು ತೊಟ್ಟಿಲೊಳಕ್ಕೆ ಕೂಡಿಸಿ ಪಾರು ಮಾಡಿದ ನಾಯಕನನ್ನು ಬಿಲ್ಲದಲ್ಲಿಯೇ ಬಿಟ್ಟುಬಿಟ್ಟರು. ರಾಜಕುಮಾರಿಯನ್ನು ಅರಸನಲ್ಲಿಗೆ ಕೊಂಡೊಯ್ದು ಈಕೆಯನ್ನು ರಕ್ಷಿಸಿದವರು ತಾವೆಂದು ತಮ್ಮೊಡನೆ ಲಗ್ನ ಮಾಡಬೇಕೆಂದು ಕೇಳಿದರು. ರತ್ನಪಕ್ಷಿಯ ಸಹಾಯದಿಂದ ನಾಯಕ ಬಿಲದಿಂದ ಹೊರಗೆ ಬಂದನು. ಮಾರುವೇಷದಲ್ಲಿ ರಾಜಕುಮಾರಿಯ ಮದುವೆ ನಡೆದಲ್ಲಿಗೆ ಬಂದನು. ರಾಜಕುಮಾರಿಯನ್ನು ಕಾಪಾಡಿದವನು ತಾನು ಎಂದು ಆಕೆಯ ಕೊರಳಹಾರದ ಮುತ್ತುಗಳನ್ನು ತೋರಿಸಿದನು. ರಾಜಕುಮಾರಿಯನ್ನು ಕಾಪಾಡಿದಕ್ಕೆ ಬಹುಮಾನ ರೂಪವಾಗಿ ಆಕೆಯೊಂದಿಗೆ ನಾಯಕನ ಮದುವೆ ನಡೆಯಿತು.

ರಾಕ್ಷಸ ಬಾಹ್ಯಜೀವ ಗಿಳಿಯಲ್ಲಿ ಕಥೆಯಲ್ಲಿ ದೇವಕನ್ನೆಯೊಬ್ಬಳನ್ನು ರಾಕ್ಷಸ ಅಪಹರಿಸಿ ಅಡವಿಯಲ್ಲಿಟ್ಟಿತು. ಮಠದ ಗುರು ಹೆಣ್ಣನ್ನು ಅಪಹರಿಸಿ, ಮಾಟದ ಶಕ್ತಿಯಿಂದ ಮಠವನ್ನೇರುವಳು ಸಮುದ್ರಗಳಾಚೆ ಸಾಗಿಸಿದನು

ಅಥವಾ ಏಳು ಹೆಡೆಯ ಸರ್ಪವು ಕೂಸೊಂದನ್ನು ತನ್ನ ಬಿಲಕ್ಕೆ ಸಾಗಿಸಿದುದು. ರಾಜಕುಮಾರನು ತನ್ನ ಅಸಾಧಾರಣ ಸಹಾಯಕರುಗಳಾದ ಪ್ರಧಾನಿ, ಕುಮಾರ, ಬಡಿಗ, ಕುಂಬಾರರೊಂದಿಗೆ ತಿರುಗುತ್ತ ಬಂದವನು, ರಾಕ್ಷಸ ಕದ್ದ ಹೆಣ್ಣನ್ನು ಕಂಡು ಮೋಹಗೊಂಡನು. ಅಥವಾ ಅಪಹರಣವಾದ ಹೆಣ್ಣಿನ ಮಗ ಇಲ್ಲವೆ ಸಹೋದರ ಶೋಧಿಸುತ್ತಾ ಬಂದು ಮುಟ್ಟಿದರು(ಗುರುವು ಮೊದಲು ಬಂದವರನ್ನು ಬಂಡೆಗಳಾಗಿ ಪರಿವರ್ತಿಸಿದನು).

ಮತ್ತೊಬ್ಬನು ರಾಜಕುಮಾರನನ್ನು ಕೊಲ್ಲಿಸಿ ನಾಯಕಿಯನ್ನು ಒಬ್ಬ ಮುದುಕಿಯ ಸಹಾಯದಿಂದ ಅಪಹರಿಸುತ್ತಾನೆ. ರಾಜಕುಮಾರನ ಅಸಾಮಾನ್ಯ ಸಹಾಯಕರು, ಸತ್ತ ರಾಜಕುಮಾರನನ್ನು ಕಂಡರು. ಕುಂಬಾರನು ಪೆಟ್ಟಿಗೆ ತೆಗೆದರೆ ಪ್ರಧಾನಿಕುಮಾರನು ತನ್ನಲ್ಲಿರುವ ಸಂಜೀವಿನಿ ಕಡ್ಡಿಯಿಂದ ಅವನನ್ನು ಬದುಕಿಸುತ್ತಾನೆ. ನಾಯಕಿ ತನ್ನನ್ನು ಅಪಹರಿಸಿದ ರಾಜನಿಗೆ ಒಂದೇ ಕಟ್ಟಿಗೆಯಲ್ಲಿ ಏಳಂತಸ್ತಿನ ಮಹಲು ಕೆತ್ತಲು ಹೇಳುತ್ತಾಳೆ. ರಾಜಕುಮಾರನೊಂದಿಗಿದ್ದ ಬಡಿಗ ಮಹಲು ಕೆತ್ತಿದನು. ರಾಜನು ನಾಯಕಿಯೊಂದಿಗೆ ಮಂಚದ ಮೇಲೆ ಕುಳಿತಿದ್ದಾಗ ಬಡಿಗ ಮಾಟದಿಂದ ಮಂಚವನ್ನು ಆಕಾಶಕ್ಕೆ ಹಾರಿಸಿದನು. ರಾಜನನ್ನು ಸಮುದ್ರದಲ್ಲಿ ನೂಕಿದನು. ನಾಯಕಿಯನ್ನು ರಾಜಕುಮಾರನಿಗೆ ಒಪ್ಪಿಸಿದನು. ಅಥವಾ ಹಾವನ್ನು ಕೊಂದು ಸಹೋದರಿ ಯೊಂದಿಗೆ ಮನೆಗೆ ಹೊರಟಾಗೂ ಅವಳು ಹಾವಿನ ತತ್ತಿ ಇಡಹತ್ತಿದಳು. ಸಹೋದರ ಅವನ್ನು ನಾಶ ಪಡಿಸುತ್ತ ಹೊರಟನು. ಅಕಸ್ಮಾತ್ ಒಂದು ತತ್ತಿ ಮಣ್ಣಲ್ಲಿ ಹೂತು ಮುಂದೆ ಹೆಬ್ಬಾವಾಗಿ, ಊರ ಅಗಸಿಗೆ ಬಂದಿತು. ಪುನಃ ಒಂದು ಕೂಸು ಕೊಟ್ಟಾಗ ತಿರುಗಿ ಹೋಯಿತು.

ಅವಳಿ ಜವಳಿ ಸಹೋದರರು ಊರಿಗೆ ಬಂದ ಹುಲಿ ಹೊಡೆದವನಿಗೆ ಮದುವೆಯಾಗುವುದಾಗಿ ರಾಜಕುಮಾರಿ ಸಾರಿದ್ದಳು. ಹುಲಿರಾಜನು ಹುಲಿಯನ್ನು ಕೊಂದು ಅದರ ಕಿವಿ, ಬಾಲ ಕೊಯ್ದುಕೊಂಡನು. ಮತ್ತೊಬ್ಬನು ಮೊಂಡುಕಿವಿ ಒಯ್ದು ರಾಜಕುಮಾರಿಗೆ ಲಗ್ನವಾಗಲಿದ್ದನು. ಹುಲಿರಾಜನು ಕಿವಿ ಬಾಲಗಳನ್ನು ತಂದು ರಾಜನಿಗೆ ತೋರಿಸಿದನು. ತಾನು ರಾಜಕುಮಾರಿಯೊಡನೆ ಮದುವೆ ಒಪ್ಪದೆ ಬಸಣ್ಣನೊಂದಿಗೆ ಅವಳ ಮದುವೆ ಮಾಡಿದನು. ಹೂಗಿಡವೊಂದನ್ನು ನೆಟ್ಟು, ಹುಲಿರಾಜನು ಸಂಚಾರಕ್ಕೆ ಹೊರಟನು. ತಾನು ತೊಂದರೆಗೀಡಾದರೆ ಗಿಡ ಬಾಡುವುದೆಂದೂ, ಮೃತನಾದರೆ ಕಿತ್ತು ಬೀಳುವುದೆಂದೂ, ಹೇಳಿದನು. ತಾನು ಆಶ್ರಯ ಪಡೆದ ಮುದುಕಿಯ ಸಲಹೆಯಂತೆ, ಗಂಗೆಯ ಮಕ್ಕಳು ಈಜಾಡುವಲ್ಲಿಗೆ ಬಂದು ಒಬ್ಬಳ ಬಟ್ಟೆ ಕದ್ದುಕೊಂಡು ಓಡಿದನು. ಆಕೆ ಇವನೊಂದಿಗೆ ಮದುವೆಯಾದಳು. ಹೆಂಡತಿಯೊಂದಿಗೆ ತಿರುಗಿ ಬರುವಾಗ ಕಳ್ಳರ ಮನೆಯಲ್ಲಿ ವಸತಿ ಪಡೆದನು. ಏಳು ಜನ ಕಳ್ಳರ ತಾಯಿ ಆತನ ಜೀವದ ಪಟ್ಟಿಕೆ ಹತಿಯರವನ್ನು ಸುಟ್ಟಳು. ಇದರಿಂದ ಹತಿಯಾರವು ಕಪ್ಪು ಹಿಡಿದು, ನಾಯಕನ ಜೀವ ಹೋಯಿತು. ಅತ್ತ ಗಿಡ ಬಾಡಿತು. ಹುಲಿರಾಜನ ಹೆಂಡತಿಗೆ ಕಳ್ಳರು ಹಿಡಿಯಲು ಬಂದಾಗ ಹುತ್ತದ ಮಾಯವಾದಳು. ಬಂದು ಸುಟ್ಟ ಬಿದ್ದ ಹತಿಯಾರವನ್ನು ತಿಕ್ಕಿ ಸ್ವಚ್ಛಗೊಳಿಸಿದಂತೆ ಹುಲಿರಾಜ ಎಚ್ಚರಾದನು. ಹೆಂಡತಿ ತಾನು ಮಾಯವಾದ ಹುತ್ತದವರೆಗೆ ಕೊರಳಹಾರದ ಹವಳದ ವಾಣಿಗಳನ್ನು ಚೆಲ್ಲುತ್ತಾ ಹೊಂದುದರಿಂದ ಗುರುತು ಹಿಡಿದು ಅಲ್ಲಿಗೆ ಹೋಗಿ, ನನ್ನ ಸಂಗಡ ಇರುವುದಾದರೆ ಹೊರಗೆ ಬಾ ಎನ್ನಲು ಹುತ್ತದಿಂದ ಹೊರಬಂದಳು.

ಹಣ್ಣಿನಲ್ಲಿಯ ಹೆಣ್ಣು ಕಥೆಯಲ್ಲಿ ತನಗಾಗಿ ತಂದೆ ನೋಡಿದ ಹೆಣ್ಣು ಮನಸ್ಸಿಗೆ ಬರದೆ, ಅಥವಾ ಬಾಳಿಗಿಡದ ಬಾಲಾವತಿ, ಇಲ್ಲವೆ ಐದು ಮಲ್ಲಿಗೆ ಹೂವಿನ ತೂಕದ ಹೆಣ್ಣನ್ನು ಬಯಸಿ ನಾಯಕನು ಹೊರಡುತ್ತಾನೆ. ಋಷಿಯೊಬ್ಬನಿಂದ ಬಾಳೆಗಿಡದ ಬಾಲಾವತಿ ಇರುವುದೆಲ್ಲಿ ಎಂದು ಕೇಳಿ ತಿಳಿಯುತ್ತಾನೆ. ವಿಷಯ ತಿಳಿಸಿದ ಋಷಿ ಮಾಟದ ಮೂರು ಹರಳುಗಳನ್ನು ಕೊಡುತ್ತಾನೆ. ರಾಜಕುಮಾರ ಋಷಿ ಹೇಳಿದ ಸ್ಥಳಕ್ಕೆ ಹೋಗಿ, ಬಾಳೆ ಗಿಡದ ಮೂರು ಹಣ್ಣಿನಲ್ಲಿಯ ನಡುವಿನ ಹಣ್ಣನ್ನು ಅಥವಾ ಋಷಿಯ ತಲೆಯ ಮೇಲೆ ಬೆಳೆದ ಗಿಡದ ಮೂರರಲ್ಲಿಯ ನಡುವಿನ ಹಣ್ಣನ್ನು ಅಥವಾ ಋಷಿ ಕನಸಿನಲ್ಲಿ ಸೂಚಿಸಿದ ತೋಟದ ಕುಂಬಳ ಬಳ್ಳಿಯ ಮೂರು ಕಾಯಿಯಲ್ಲಿ ನಡುವಿನದನ್ನು ಕಡಿದುಕೊಂಡು ಅಥವಾ ಪೆಟ್ಟಿಗೆಯಲ್ಲಿಯೇ ಬೆಳೆದ ರಾಜಕುಮಾರಿಯನ್ನು ನೋಡದೆ ಪೆಟ್ಟಿಗೆಯೊಂದಿಗೆ, ಮದುವೆಯಾಗಿ ತನ್ನ ತೋಟಕ್ಕೆ ಬಂದು ತಂಗುತ್ತಾನೆ. ನಾಯಕ ಮಲಗಿದಾಗ ಬಾಳೆಹಣ್ಣು ಇಲ್ಲವೆ ಕುಂಬಳಕಾಯಿ ಒಡೆದು ಒಳಗಿನ ಸುಂದರಿ ಹೊರಗೆ ಬರುತ್ತಾಳೆ. ಅಥವಾ ಕುತೂಹಲದಿಂದ ಪೆಟ್ಟಿಗೆ ತೆರೆಯಲು, ರಾಜಕುಮಾರಿಯ ಸೌಂದರ್ಯಕ್ಕೆ ಮೂರ್ಛೆ ಬೀಳುತ್ತಾನೆ. ಅಥವಾ ಹೆಂಡತಿಯನ್ನು ತೋಟದಲ್ಲಿ ಬಿಟ್ಟು ಮನೆಗೆ ಸುದ್ದಿ ತಿಳಿಸಲು ಹೋಗುತ್ತಾನೆ. ಅಲ್ಲಿಗೆ ಬಂದ ಹೆಂಗಸೊಬ್ಬಳು ರಾಜಕುಮಾರಿಗೆ ನೀರು ತರುವಂತೆ ಒಡಂಬಡಿಸುತ್ತಾಳೆ. ಆಕೆ ಬಾವಿಗೆ ಇಳಿದಾಗ ಒಳಗೆ ನೂಕುತ್ತಾಳೆ. ವಧುವಿನ ವೇಷಧರಿಸಿ, ರಾಜಕುಮಾರನ ಹತ್ತಿರ ಕುಳಿತು ದಾಳಿ ಹಾಕುತ್ತಾಳೆ. ರಾಜಕುಮಾರ ಎಚ್ಚರಾದಾಗ ಹತ್ತಿರ ಕುಳಿತ ವೇಳೆ ನಿಜವಾದ ಹೆಂಡತಿಯೆಂದು ಭಾವಿಸುತ್ತಾನೆ. ಬಾವಿಗೆ ನೂಕಲ್ಪಟ್ಟ ರಾಜಕುಮಾರಿ ಕಮಲದ ಹೂವಾಗಿ ಮಾರ್ಪಡುತ್ತಾಳೆ. ಯಾರ ಕೈಗೂ ಸಿಗದ ಹೂ ರಾಜಕುಮಾರನ ಕೈಗೆ ಮಾತ್ರ ಸಿಗುತ್ತದೆ. ಕಪಟಿ ವಧು ಅದನ್ನು ತಿಕ್ಕಿ ಒಲೆಗೆ ಹಾಕಿ ಸುಟ್ಟ ಬೂದಿ ತಿಪ್ಪೆಗೆ ಚೆಲ್ಲುತ್ತಾಳೆ. ನಂತರ ಗೋಳಿ, ಮೆಂತಿ ಇತ್ಯಾದಿ ರೂಪಾಂತರಗಳ ನಂತರ ಕೊನೆಗೆ ಸಾಮಾನ್ಯವಾಗಿ ಒಂದು ಮಾವಿನ ಮರವಾಗಿ ಬೆಳೆಯುತ್ತಾಳೆ. ಬಡಿಗನೊಬ್ಬ ಆ ಮರದ ಹಣ್ಣೊಂದನ್ನು ಮನೆಗೊಯ್ದು ಕೊಯ್ಯುತ್ತಿದ್ದಂತೆ ಹೆಣ್ಣು ಕೂಸೊಂದು ಹೊರಗೆ ಬರುತ್ತದೆ.

ಮುಂದೆ ಆ ಹೆಣ್ಣನ್ನು ಕಪಟಿ ವಧು ಗುರುತಿಸಿ ಕೊಲ್ಲಿಸುತ್ತಾಳೆ. ಕೊಂದ ಸ್ಥಳದಲ್ಲಿ ಬಾಗಿಲಿಲ್ಲದ ಗುಡಿ ಅನೇಕ ಗಿಡಮರಗಳಾಗಿ ಬೆಳೆಯುತ್ತಾಳೆ. ಹೀಗೆ ಯಶಸ್ವಿ ರೂಪಾಂತರಗಳಿಂದ ಕೊಲ್ಲಲು ಮಾಡಿದ ಉಪಾಯಗಳೆಲ್ಲ ವಿಫಲವಾಗುತ್ತವೆ. ಗಿಡದಲ್ಲಿಯ ಎರಡು ಗಿಳಿಗಳು, ಕೆಳಗೆ ಮಲಗಿದ್ದ ರಾಜಕುಮಾರನ ಕಥೆಯನ್ನೇ ಹೇಳಿಕೊಂಡವು. ನಾಯಕನು ಗಿಳಿಗಳ ಸಲಹೆಯಂತೆ ನಡುರಾತ್ರಿಯಲ್ಲಿ ಸ್ನಾನ ಮಾಡಿ ಬಾಗಿಲಿಲ್ಲದ ಗುಡಿಯ ಮುಂದೆ ಕೈ ಮುಗಿದು ನಿಂತಾಗ ಗುಡಿಯ ಬಾಗಿಲು ತೆರೆಯುತ್ತದೆ. ಒಳಗಿರುವ ಹೆಂಡತಿಯ ಸೆರಗು ಹಿಡಿದು ಅವಳನ್ನು ಪಡೆಯುತ್ತಾನೆ.

ಕಪ್ಪೆಯ ರೂಪದಲ್ಲಿದ್ದ ರಾಜಕುಮಾರ ಕಥೆಯಲ್ಲಿ ಕಪ್ಪೆಯೊಂದಿಗೆ ಮದುವೆಯಾಗುವ ಒಪ್ಪಂದ ನಿರ್ಮಾಣವಾಗುತ್ತದೆ. ತನ್ನೊಂದಿಗೆ ಮದುವೆಯಾಗುವುದಾದರೆ ಬುಟ್ಟಿ ಎತ್ತುವುದಾಗಿ ಕಪ್ಪೆ ಹೇಳಿತು. ಅದಕ್ಕೆ ಹುಡುಗಿ ಒಪ್ಪಿದಳು. ತನ್ನನ್ನು ಮನೆಗೆ ಕರೆದೊಯ್ಯಬೇಕೆಂಬುದಕ್ಕೆ ಒಪ್ಪಲು ಕಪ್ಪೆ ಬುಟ್ಟಿ ಎತ್ತಿ ಆಕೆಯೊಂದಿಗೆ ಮನೆಗೆ ಬಂದಿತು. ಮನೆಯಲ್ಲಿ ಕಪ್ಪೆ ತನಗೆ ಸರಿಯಾದ ಅಡಿಗೆ, ಹಾಸಿಗೆ ಬೇಕೆಂದು

ಹಟಮಾಡಿ ಪಡೆಯಿತು. ಆಕೆಯ ಮಗ್ಗುಲಿಗೆ ಮಲಗಲು ಹೋಯಿತು. ನೆಲಕ್ಕೆ ಒಗೆಯಲು, ಇಲ್ಲವೆ ಕಲ್ಲಿನಿಂದ ಹೊಡೆಯಲು ಅದರ ಪೊರೆ ಹರಿದು ಸುಂದರ ರಾಜಕುಮಾರನಾಗುತ್ತದೆ. ಹುಡುಗಿ ರಾಜಕುಮಾರನೊಂದಿಗೆ ಮದುವೆಯಾಗುತ್ತಾಳೆ. ಋಷಿಯ ಶಾಪದಿಂದ ಕಪ್ಪೆಯಾದವ, ಹೆಂಡಿ ಹಿಡಿಯುವಾಕೆ ಕಲ್ಲು ಹಾಕಿದಾಗ ಶಾಪ ವಿಮುಕ್ತನಾಗೆಂದು ಹೇಳಿರುತ್ತಾನೆ.

ಮುಸುರೆ ತಿಕ್ಕುವವಳು ಕಥೆಯಲ್ಲಿ ಕ್ರೂರ ಮಲತಾಯಿ ಹಾಗೂ ಮಲ ಸಹೋದರಿಯರು  ಮಲ ಮಗಳನ್ನು ಮುಸುರೆ ತಿಕ್ಕುವುದು, ಕಸ ಗುಡಿಸುವುದು ಮುಂತಾಗಿ ಕೆಲಸ ಕೊಟ್ಟು ಪೀಡಿಸುತ್ತಿರುತ್ತಾರೆ. ರಾಜಕುಮಾರನೊಬ್ಬ ಹೆಂಡತಿಯನ್ನಾರಿಸಲು ಚಲುವೆಯರ ಸಭೆ ಕೂಡಿಸುತ್ತಾನೆ. ದೇವಿಯು ಮಲಮಗಳಿಗೆ ಸಹಾಯಕಳಾಗಿ, ಹೊಳೆಯುವ ಉಡುಗೆ ತೊಡುಗೆ ಒದಗಿಸಿ, ರಥ ಏರಿಸಿ ರಾಜಕುಮಾರ ಕರೆದ ಸುಂದರಿಯರ ಸಭೆಗೆ ಕಳುಹಿಸುತ್ತಾಳೆ. ಮುದ್ದಾದ ನಾಯಕಿಯನ್ನು ನೋಡಿದ ರಾಜಕುಮಾರ ಮೋಹಗೊಳ್ಳುತ್ತಾನೆ. ಎರಡನೇ ದಿನ ಕೂಡ ಆಹ್ವಾನಿಸುತ್ತಾನೆ. ದೇವಿ ನಿಷಿದ್ಧಿಸಿದ ವೇಳೆಗೆ ನಾಯಕಿ ಸಭೆಯಿಂದ ಹೊರಗಾಗುವಾಗ, ಒಂದು ಕಾಲಿನ ಗಾಜಿನ ಚಪ್ಪಲಿ ಕಳಚಿ ಬೀಳುತ್ತದೆ. ಸಿಕ್ಕ ಗಾಜಿನ ಚಪ್ಪಲಿ ಯಾರ ಕಾಲಿಗೆ ಸರಿಯಾಗಿ ಬರುವುದೋ ಅವರನ್ನೇ ಹೆಂಡತಿಯಾಗಿ ಸ್ವೀಕರಿಸುವುದಾಗಿ ರಾಜಕುಮಾರ ಹೇಳುತ್ತಾನೆ. ಚಪ್ಪಲಿಯ ಸಹಾಯದಿಂದ ನಾಯಕಿಯನ್ನು ಶೋಧಿಸುತ್ತಾನೆ. ಮುದ್ದಿನ ನಾಯಕಿ ರಾಜಕುಮಾರನನ್ನು ಮದುವೆಯಾಗುತ್ತಾಳೆ.

ಹತ್ತಂಡ್ಯೋ ಬಿಟ್ಟಂಡ್ಯೋ ಕಥೆಯಲ್ಲಿ ಊರಿನಗೌಡ ಮಗಳನ್ನು ಮನೆಯಲ್ಲಿರುವ ಅಳಿಯನಿಗೆ ಕೊಡದೆ ಬೇರೆ ವರನನ್ನು ನೋಡಲು ಕರೆಸಿ ಈತನನ್ನು ಹೊಲಕ್ಕೆ ಎಡೆ ಹೊಡೆಯಲು ಕಳುಹಿಸುತ್ತಾರೆ. ಸಾಧು ಮೂರು ಮಾಟದ ಹರಳುಗಳನ್ನು ಕೊಟ್ಟು ಅದರ ಉಪಯೋಗ ಹೇಳುತ್ತಾನೆ. ಎಡೆಕಟ್ಟಿ, ಮಾಟದ ಹರಳೊಂದನ್ನು ಅದರ ಮೇಲೆ ಇಟ್ಟು ಹರಗಿಕೊಂಡು ಬಾ ಎನ್ನಲು ಸ್ವಲ್ಪೇ ಸಮಯದಲ್ಲಿ ಹರಗುವ ಕೆಲಸ ಮುಗಿಯಿತು. ಇನ್ನೊಂದು ಕಥೆಯಲ್ಲಿ ಒಂದೇ ಊರಿನ ಹೆಣ್ಣು ಮಾಡಿಕೊಂಡ ಗೌಡ, ಹೊಲೆಯ ತಮ್ಮ ತಮ್ಮ ಹೆಂಡರನ್ನು ಕರೆಯಲು ಹೊರಟರು. ದಾರಿಯಲ್ಲಿ ಗೌಡನು ತನ್ನ ಬಟ್ಟೆ ಬಚ್ಚಿಟ್ಟು ಬಾರಿ ಹಣ್ಣು ಕಡಿಯಲು ಗಿಡ ಹತ್ತಿದಾಗ ಹೊಲೆಯನು ಅವನ ವೇಷ ತೊಟ್ಟು ಗೌಡನ ಮಾವನ ಮನೆಗೆ ಹೋದನು. ಅವರು ಅಳಿಯನೇ ಬಂದನೆಂದು ತಿಳಿದರು. ಹಿಂದಿನಿಂದ ಗೌಡನು ಹೊಲೆಯನ ವೇಷ ತೊಟ್ಟು ಬರಲು ಅವನನ್ನು ಕಟ್ಟಿಗೆ ತರಲು ಅಡವಿಗೆ ಕಳುಹಿಸಿದರು. ಅಡವಿಯಲ್ಲಿ ಶಿವನು ಸಹಾಯಕ್ಕೆ ಬಂದು ಹತ್ತಂಡ್ಯೋ ಬಿಟ್ಟಂಡ್ಯೋ ಮಂತ್ರ ಹೇಳಿ ಕೊಟ್ಟನು. ಮನೆಗೆ ಬಂದು ಬೀಗರ ಮೇಲೆ ಹರಳು ಹಾಕಿ ಹತ್ತಂಡ್ಯೋ ಎಂದಾಗ ಎಲ್ಲರೂ ನೆಲಕ್ಕೆ ಹತ್ತಿಕೊಂಡರು. ಹೊಲೆಯನಿಗೂ ಹೊರಸಿಗೂ, ಹೆಂಡತಿಗೂ ಹೊರಸಿಗೂ ಹತ್ತಂಡ್ಯೋ ಎಂದಾಗ ಮೆತ್ತಿಕೊಂಡರು. ದೇವರು ಹೇಳುವ ಮುದುಕಿಗೂ ಹಣಮಂದೇವರಿಗೂ ಹತ್ತಂಡ್ಯೋ ಎಂದನು. ಉಪಾಧ್ಯ ಮಲ ಮಗಳನ್ನು ತನಗೆ ಕೊಡುವಂತೆ ಹೇಳಿದರೆ ಕುಂಡಿಯಿಂದ ಕೊಂಬು ಬಿಡಿಸುವುದಾಗಿ ಹೇಳಿದನು. ಹಾಗೇ ಮಾಡಲು ಬಿಟ್ಟಂಡ್ಯೋ ಎಂದಾಗ ಎಲ್ಲರೂ ಮೊದಲಿನಂತಾಗುವರು. ಮಾವನ ಮಗಳೊಂದಿಗೆ ಮದುವೆಯಾಗುತ್ತಾನೆ. ಇಲ್ಲವೆ ತನ್ನ ಹೆಂಡತಿಯನ್ನು ಕರೆದುಕೊಂಡು ಊರಿಗೆ ಹೋಗುತ್ತಾನೆ.

ತಾಯಿಗಂಡ ಮಗನ ಹೆಂಡತಿ ಗಂಡನ ಸೊಸೆ ಕಥೆಯಲ್ಲಿ ಶಟವಿಯ ಮಗಳು ಮಗನೊಂದಿಗೆ ಹಾದರ ಮಾಡುವ ತನ್ನ ಭವಿಷ್ಯ ತಪ್ಪಿಸಿಕೊಳ್ಳಲು ಅಡವಿ ಸೇರುತ್ತಾಳೆ. ಅಡವಿಯಲ್ಲಿ ಅಥವಾ ಬಾವಿಯ ದಡದ ಮೇಲಿರುವ ಗಿಡದ ಮೇಲೆ ವಾಸವಾಗುತ್ತಾಳೆ. ನೀರಿನ ತತರಾಡಿಯಲ್ಲಿ ಅಥವಾ ನೀರಿಗಾಗಿ ಬಿಟ್ಟ ಕುಂಬಳ ಸೊಟ್ಟೆಯಲ್ಲಿ ರಾಜನೊಬ್ಬ ಮೂತ್ರ ವಿಸರ್ಜನೆ ಮಾಡಿರುವುದನ್ನು ಅರಿಯದೆ ಕುಡಿದು, ಗರ್ಭ ಧರಿಸಿ ಗಂಡುಮಗುವಿಗೆ ಜನ್ಮ ಕೊಡುತ್ತಾಳೆ. ಮೂಗಿನ ಮೇಲೆ ಗಾಯ ಮಾಡಿ, ಇಲ್ಲವೆ ಕೂಸನ್ನು ತನ್ನ ಸೀರೆ ಸೆರಗಿನಲ್ಲಿ ಸುತ್ತಿ ಅಲ್ಲಿಯೇ ಒಗೆದು ಬೇರೊಂದು ಊರಲ್ಲಿ ನೆಲೆಸುತ್ತಾಳೆ. ಕುರುಬನು ಆ ಮಗುವನ್ನು ಎತ್ತಿ ತನ್ನೂರ ರಾಜನಿಗೆ ಮುಟ್ಟಿಸಿದನು. ವಯಸ್ಸಿಗೆ ಬಂದ ಮಗನು ಒಂದು ಮಹಲಿನಲ್ಲಿರುವ ರೂಪವತಿಯನ್ನು ಮದುವೆಯಾಗಿ ಮಗನನ್ನು ಪಡೆದನು. ಈಕೆ ಅವನ ತಾಯಿಯೇ ಆಗಿದ್ದಳು. ಗಂಡನ ಮೂಗಿನ ಮೇಲಿರುವ ಗಾಯ ಗುರುತಿಸಿ ಅಥವಾ ತನಗೆ ಜನಿಸಿದ ಮಗುವಿನ ಮೈ ಒರೆಸಲು ಕೊಟ್ಟು ಅರಿವೆ ತಾನು ಅಡವಿಯಲ್ಲಿ ಒಗೆದ ಮಗುವಿಗೆ ಸುತ್ತಿದ ತನ್ನ ಸೀರೆಯ ಸೆರಗಾಗಿದ್ದು ತಾನು ಮದುವೆಯಾದದ್ದು ತನ್ನ ಮಗನನ್ನೇ ಎಂಬುದನ್ನು ಅರಿಯಲು ಕಾರಣವಾಯಿತು.

ಹೀಗೆ ಅನೇಕ ಕಥೆಗಳಲ್ಲಿ ವಿವಾಹದ ಸ್ವರೂಪವನ್ನು ನೋಡಬಹುದು. ಅಸಹಾಯಕ ಸನ್ನಿವೇಶಗಳಲ್ಲಿ ಅದ್ಭುತ ಕಲ್ಪನೆಗಳು ಕಾಣಿಸಿಕೊಂಡು ಕಥೆಗಳಿಗೆ ರಮ್ಯ ಆವರಣವನ್ನು ಸೃಷ್ಟಿಸುವಂಥ ಕಥೆಗಳು, ಕಥಾನಾಯಕ ಹಲವು ಸಾಹಸಗಳನ್ನೆದುರಿಸಬೇಕಾಗುತ್ತದೆ. ಸ್ವಂತ ಸಾಹಸಕ್ಕಿಂತ ಇತರರ ಸಹಾಯವನ್ನು ಆತ ಹೆಚ್ಚು ಅವಲಂಬಿಸಿರಬೇಕಾಗುತ್ತದೆ. ಕಥಾನಾಯಕನ ಧೀಮಂತಿಕೆಗೆ ಮತ್ತು ಸಚ್ಚಾರಿತ್ರ್ಯಕ್ಕೆ ಅನೇಕ ದುಷ್ಟಶಕ್ತಿಗಳು ಈತನ ನೆರವಿಗೆ ಬರುತ್ತವೆ. ಭಯಂಕರ ರಾಕ್ಷಸರು, ಮಂತ್ರವಾದಿಗಳು, ಮಾಟಗಾರರು, ಕಿನ್ನರರು ಮುಂತಾದ ಅತಿಮಾನುಷ ಶಕ್ತಿಗಳು ಕಥೆಗಳಲ್ಲಿ ಸೇರುತ್ತವೆ. ನೀತಿ ಕಥೆಗಳು, ಪ್ರಾಣಿಕಥೆಗಳು, ವಿನೋದ ಕಥೆಗಳು, ಮಾಟ ಮಂತ್ರದ ಕಥೆಗಳು, ರಮ್ಯ ಕಥೆಗಳು, ಅದ್ಭುತ ಕಥೆಗಳಲ್ಲಿ ವಿವಾಹದ ಸ್ವರೂಪವನ್ನು ಗಮನಿಸಿದಾಗ ಅಪಹರಣ, ಬಾಲ್ಯ, ಗಾಂಧರ್ವ, ರಾಕ್ಷಸಿ ವಿವಾಹ, ಮರುವಿವಾಹ, ಸೃಷ್ಟಿವಿವಾಹ ಇನ್ನು ಮುಂತಾದ ದೃಷ್ಟಿಯಿಂದ ವಿವಾಹ ಆಗಿರುವುದನ್ನು ನೋಡಬಹುದು. ಒಟ್ಟಾರೆ ಜನಪದ ಕಥೆಗಳಲ್ಲಿ ಹಲವು ಪ್ರಕಾರದ ಕಥೆಗಳು ಬಂದಿದ್ದು ಅವುಗಳಲ್ಲಿ ವಿವಾಹದ ಸ್ವರೂಪವನ್ನು ನೋಡಿದ್ದಾಗಿದೆ.

ಹೆಣ್ಣಿನ ಬಾಳಿನಲ್ಲಿ ಎರಡು ಘಟ್ಟಗಳು ತುಂಬಾ ಪ್ರಮುಖವಾದವು. ಮೊದಲನೆಯದಾಗಿ ಆಕೆಯ ದಾಂಪತ್ಯ ಜೀವನ, ಎರಡನೇಯದಾಗಿ ಆಕೆಯ ಮಾತೃತ್ವ ಇವು ಜನಪದ ಕಥೆಗಳಲ್ಲಿ ಅತ್ಯಂತ ಗಮನಾರ್ಹ ವಾಗಿ ಕಂಡುಬಂದಿದೆ. ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿ ದಾಂಪತ್ಯ ಜೀವನವನ್ನು ಗಮನಿಸಿದಾಗ ಎಲ್ಲಾ ಕಥೆಗಳು ಕೊನೆಯಲ್ಲಿ ಸುಖಾಂತ್ಯ ಕಾಣುತ್ತವೆ. ಅಲ್ಲದೆ ವಿರಹವಿರುವ ಅನೇಕ ಕಥೆಗಳು ಹೇರಳವಾಗಿ ದೊರೆಯುತ್ತವೆ. ಅನುಮಾನ, ದ್ರೋಹ, ಮಾಟಮಂತ್ರ, ಸಂಚುಗಾರಿಕೆ ಇಂಥವುಗಳಿಗೆ ಬಲಿಯಾಗಿ ಕುಟುಂಬದ ಜೀವನ ಹಾಳಾಗಿರುವುದು ಕಂಡುಬರುತ್ತದೆ. ಅದೇ ರೀತಿ ಕಥಾನಕಗಳಿಗೆ ಪೂರಕವಾಗಿ ಕಾವ್ಯಗಳು ಸಹ ನಿಲ್ಲುತ್ತವೆ. ಜನಪದ ಕಾವ್ಯದಲ್ಲಿ ದಾಂಪತ್ಯ ಜೀವನಕ್ಕೆ ಸಂಬಂಧಿಸಿದಂತೆ ಒಂದು ತ್ರಿಪದಿಯನ್ನು ನೋಡಬಹುದು.

ತಂದಿ-ತಾಯಿ ಬಿಟ್ಟ ಮಂದಿಬಳಗ ಬಿಟ್ಟು
ಬಂದೇನ ರಾಯ ನಿಮಗೂಡ ಕೈಯಾನ
ಲಿಂಗ ಮಾಡಿ ನನ್ನ ಸಲಹ್ಯರೆ[೨೦]

ತಂದೆ-ತಾಯಿ, ಬಂಧು-ಬಳಗ ಬಿಟ್ಟು ಸಂಪೂರ್ಣವಾಗಿ ನಿಮ್ಮ ಅಧೀನದಲ್ಲಿರುತ್ತೇನೆ ಎಂಬ ಮಾತನ್ನು ಹೆಂಡತಿಯು ತನ್ನ ಪತಿಯ ಮುಂದೆ ನಯ ವಿನಯದಿಂದ ಹೇಳಿಕೊಳ್ಳುತ್ತಾಳೆ.

ನಲ್ಲನ ಬಾವಲಿ ಗಲ್ಲಕ ಬಡಿದಾಗ
ಹುಲ್ಲೀನ ಕೆಳಗ ವಾಡದೀಯ ಆಡುದ ಕಂದ
ಹೂರಣಕ ಬೆಲ್ಲ ವಾರತಾಳ[೨೧]

ಸಮಾಗಮದ ಸುಖವನ್ನು ಇಲ್ಲಿ ಬಹಳ ಅರ್ಥಪೂರ್ಣವಾಗಿ ಚಿತ್ರಿಸಲಾಗಿದೆ. ಕೈ ಹಿಡಿದ ಗಂಡನಿಗಾಗಿ ಹೆಣ್ಣು ಎಷ್ಟೇ ಕಷ್ಟವಾದರೂ, ಆಯಾಸವಾದರೂ ದುಡಿಯಬಲ್ಲಳು. ಅವಳಿಗೆ ಯಾವುದೇ ರೀತಿಯ ಮುಜುಗರವಿಲ್ಲ ಹಾಗೂ ಆತ ಊರಿನಲ್ಲಿ ಇಲ್ಲದಿದ್ದರೂ ಅವಳ ಕಣ್ಣಿಗೆ ಕಾಣದಿದ್ದರೆ ಅವನಿಗಾಗಿ ಸದಾ ಕಾಯುವುದು ಜನಪದ ಗರತಿಯರ ಅಭಿಲಾಷೆಯಾಗಿತ್ತು. ಯಾವಾಗಲೂ ಆಕೆಯ ಪತಿಯು ತನ್ನ ಕಣ್ಣಂಚಿನಲ್ಲಿ ಸುಳಿದಾಡಬೇಕು ಎಂಬ ಆಶಾಭಾವನೆಯನ್ನು ಹೊಂದಿರುತ್ತಾಳೆ.

ಹೈದರಾಬಾದ್ ಜನಪದ ಕಥೆಗಳಲ್ಲಿ ಅನೇಕ ಕಥೆಗಳಲ್ಲಿ 'ಬಂಜೆ'ತನ ಎಂಬುದು ಅತ್ಯಂತ ಕರುಣಾಜನಕವಾದ ಕಥೆ ಎಪ್ಪತ್ತು ವರ್ಷ ವಯಸ್ಸಾದ ರಾಜ 'ಬಂಜೆ' ಎನ್ನುವ ಸೊಲ್ಲು ಹೋಗಲಾಡಿಸಿಕೊಳ್ಳಲು ಕೈ ಮುಗಿಯದ ದೇವರುಗಳು ಇಲ್ಲ. ಅದಕ್ಕಾಗಿ ಮಂತ್ರ-ತಂತ್ರಗಳೆನ್ನೆಲ್ಲಾ ಅರಸಿ ಪರದಾಡುವಂತಹ ಸ್ಥಿತಿ ಕಥೆಗಳಲ್ಲಿ ಕಾಣಬಹುದು. 'ಶಂಕರದತ್ತನ ಕಥೆ'ಯಲ್ಲಿ ಶಿವದತ್ತ ಮತ್ತು ತನ್ನ ಹೆಂಡತಿಗೆ ಬಹಳ ದಿನದವರೆಗೆ ಮಕ್ಕಳಾಗಿರಲಿಲ್ಲ. ೭೦ ವರ್ಷದ ಇಳೀ ವಯಸ್ಸಿನಲ್ಲೂ 'ಬಂಜೆ' ಎಂಬ ಸೊಲ್ಲು ಹೋಗಲಾಡಿಸಿ ಕೊಳ್ಳಲು ಶಿವನ ಮೊರೆಹೋಗುತ್ತಾರೆ.

ಮತ್ತೊಂದು ಕಥೆಯಲ್ಲಿ ಮಕ್ಕಳಾಗದಿದ್ದಾಗ ದೇವರ ಅಭಯಹಸ್ತದಿಂದ ಗಂಡು ಮಗುವನ್ನು ಪಡೆಯುವುದು. 'ಬೆಳಿಗ್ಗೆ ಹುಟ್ಟಿ ಸಾಯಂಕಾಲ ಸಾಯಲಿ' ಆದರೆ ಬಂಜೆ ಎಂಬ ಸೊಲ್ಲು ತೊಲಗಲಿ ಎಂಬುದು ಅವರ ಮಹಾದಾಸೆ. ದಾಸೋಹ, ಪೂಜೆ, ಪುರಸ್ಕಾರ ಮಾಡಿದರೂ ಮಗನು ಕೊನೆಯಲ್ಲಿ ಉಳಿಯುವುದಿಲ್ಲ. ಹೆಣ್ಣಿಗೆ ಅತ್ತೆಯ ಮನೆಯಲ್ಲಿ ಸ್ಥಾನ ದೊರೆಯುವುದು ತಾಯಿಯಾದಾಗ ಮಾತ್ರ. ತನ್ನ ಗಂಡನ ಮನೆಯ ವಂಶವನ್ನು ಬೆಳೆಸುವುದೇ ಆಕೆಯ ಬಾಳಿನ ಗುರಿಯೆಂಬ ಜವಾಬ್ದಾರಿ ಅವಳ ಮೇಲಿದೆ. ಕಂದ ಇದ್ದವಳಿಗೆ ಗಂಗಾದೇವಿ ಎಂದು ಇಲ್ಲದಿದ್ದರೆ ಆಕೆಯ ಬದುಕು 'ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದಂಗೆ' ಅಷ್ಟು ನಿರರ್ಥಕ. ಅದರಲ್ಲಿಯೂ ಆಕೆ ಆ ಮನೆಯ ಋಣವನ್ನು ತೀರಿಸಲು ಗಂಡು ಮಗುವನ್ನೇ ಹೆರಬೇಕು; ಗಂಡನ ಮನೆಗೆ ವಾರಸುದಾರನನ್ನು ಹೆತ್ತು ಕೊಡುವುದು ಅವಳ ಕರ್ತವ್ಯವೆಂದು ನಂಜಿಕೆಯಿತ್ತು.[೨೨] ಜನಪದರು ಸಾಂಸಾರಿಕಾ ಬದುಕಿಗೆ ಕೊಟ್ಟ ಮೌಲ್ಯ, ಅರ್ಥ ಹಾಕಿಕೊಂಡ ಚೌಕಟ್ಟು

ತಾತ್ವಿಕ ನೆಲೆಯಲ್ಲಿಯೇ ಮಾಡಿದವುಗಳಾಗಿವೆ. ದಾಂಪತ್ಯವನ್ನು ಅತ್ಯಂತ ಭಾವನಾತ್ಮಕ ಹಾಗೂ ಕ್ರಿಯಾಶೀಲವಾಗಿ ಪರಿಭಾವಿಸಿದ ಅದರಲ್ಲಿ ಹಾಸುಹೊಕ್ಕಾದ ಸರಸ, ವಿರಸ, ಪ್ರಣಯ, ಸಾಂತ್ವನ ಪರಸ್ಪರ ಅರ್ಥೈಸಿಕೊಳ್ಳುವಿಕೆ ಮನಗಾಣುವಿಕೆ ಎಲ್ಲವೂ ಕೇವಲ ಔಪಚಾರಿಕ ಭಾವಗಳಾಗಿರದೆ 'ದಾಂಪತ್ಯ' ಎನ್ನುವುದು ಒಲವು ಶೃಂಗಾರ ಇವುಗಳಿಂದ ಕೂಡಿದ ಸಮರಸದ ಸಾರ ಎನ್ನುವ ಅನುಭಾವಮೃತವನ್ನು ಜನಪದ ಕಥೆಗಳು ಬಿಂಬಿಸಿವೆ. ಜನಪದ ಸಮುದಾಯಗಳಲ್ಲಿ ಸಾಮಾನ್ಯವಾಗಿ ಗಂಡ, ಹೆಂಡತಿ ಕೌಟುಂಬಿಕ ಚೌಕಟ್ಟಿನೊಳಗೆ ಬದುಕನ್ನು ಕಟ್ಟಿಕೊಡುತ್ತಾ ಬಂದಿದ್ದಾರೆ. ಕೆಲವು ಅನಾಹುತಗಳು ಅವರನ್ನು ಸುಖವಾಗಿ ಸಂಸಾರ ಮಾಡಲು ಬಿಡುವುದಿಲ್ಲ. ಏಕೆಂದರೆ ಅವಳಿಗೆ ಮಕ್ಕಳಾಗಿರಲಿಲ್ಲ ಎಂಬ ಕಾರಣಕ್ಕೆ ಯಾವುದೇ ಸಭೆ ಸಮಾರಂಭಗಳಿಗೆ ಕರೆಯುವುದಿಲ್ಲ. ಆ ಕಾರಣದಿಂದ ಅಪಮಾನಕ್ಕೆ ಗುರಿಯಾಗುತ್ತಾರೆ. ಹೆಣ್ಣಿಗೆ ತನಗೆ ಯಾವುದಾದರೂ ಒಂದು ಕರುಳಿನ ಕುಡಿ ಬೇಕು ಏಕೆಂದರೆ ತನ್ನ ಪತಿಯು ಮಕ್ಕಳಾಗಿರಲಿಲ್ಲ ಎಂಬ ಕಾರಣವನ್ನಿಟ್ಟುಕೊಂಡು ಬೇರೆಯವರ ಸಂಘ ಮಾಡಬಹುದು ಎಂಬುದನ್ನು ಸಹ ತಾನೇ ಅರ್ಥ ಮಾಡಿಕೊಂಡು ಒಳಗೊಳಗೆ ಸಂಕಟ ಪಡುವುದುಂಟು. ನಂತರ ನಾ ಮುಂದೆ ಮುಡಿದ ಪರಿಮಳದ ಹೂವ ಅವಳೊಂದು ಘಳಿಗೆ ಮುಡಿಯಲಿ ಎಂದು ಸಮಾಧಾನ ಮಾಡಿಕೊಂಡು ಆತನ ಮೊದಲ ಪ್ರೀತಿ ಸಿಕ್ಕಿದ್ದು ತನಗೆ ಎಂಬ ಭಾವನೆಯನ್ನಿಟ್ಟುಕೊಂಡು ಗಂಡನನ್ನು ಪ್ರಶ್ನಿಸುವ ಹಕ್ಕು ಆಕೆಗಿಲ್ಲದ ಕಾರಣ ಹೀಗೆ ರಾಜಿ ಮಾಡಿಕೊಳ್ಳದೆ ಆಕೆಗೆ ಬೇರೆ ದಾರಿ ಇರಲಿಲ್ಲ. ಅವಳಿಗೆ ಮಕ್ಕಳಿಲ್ಲವೆಂಬ ನೆಪದಲ್ಲಿ ಸವತಿಯನ್ನು ತರುವುದಿದ್ದರೆ 'ಸಣ್ಣವಳ ಮ್ಯಾಲ ಸವತ್ಯಾಕ ಎಂಬ ತ್ರಿಪದಿಯಂತೆ ರಾಜಮನೆತನ ವಾರಸುದಾರರು ಬೇಕಾಗಿರುವುದರಿಂದ ಬೇರೊಬ್ಬರನ್ನು ವಿವಾಹವಾಗಲು ಸಮ್ಮತಿಸಿರುವುದನ್ನು ಸಹ ಕಥೆಗಳಲ್ಲಿ ಕಾಣಬಹುದು.

ಗಂಡನಿಗೆ ತಾನು ಇನ್ನೂ ಚಿಕ್ಕವಳು ನನಗೆ ವಯಸ್ಸು ಮೀರಿಲ್ಲ ಇನ್ನೂ ಕಾಲಾವಕಾಶವಿದೆ ಎಂದು ಹೇಳುತ್ತಾಳೆ. ಆದರೆ ಅವಳ ಮಾತಿಗೆ ಯಾರೂ ಬೆಂಬಲಿಸುವುದಿಲ್ಲ. ಆ ಕಾರಣಕ್ಕಾಗಿ ಆಕೆ ಎಷ್ಟೇ ಹಣ, ಅಂತಸ್ತು, ಐಶ್ವರ್ಯ, ಬಂಧುಬಳಗ, ಶ್ರೀಮಂತಿಕೆಯಿಂದ ಕೂಡಿದರೂ ಅವಳಿಗೆ ಪುತ್ರ ವ್ಯಾಮೋಹದಿಂದ ಹೊರಗೆ ಬರಲು ಅವಕಾಶವೇ ಇಲ್ಲ. ಸಮಾಜದಲ್ಲಿ ಅವಳ ಕುಟುಂಬ ಸುಖಕರವಾಗಿರಬೇಕಾದರೆ ಆಕೆಗೆ ಒಂದು ಮಗು ಬೇಕೆಬೇಕು ಎಂಬುದನ್ನು ಕೆಲವು ಕಥೆಗಳಲ್ಲಿ ಕಾಣಬಹುದು. ಜನಪದ ಸಂಸ್ಕೃತಿ ಶಿಷ್ಟ ಸಂಸ್ಕೃತಿಗಿಂತ ಭಿನ್ನವಾಗಿ ಕಂಡುಬರುತ್ತದೆ. ಆದ್ದರಿಂದಲೇ ದಾಂಪತ್ಯ ಜೀವನದಲ್ಲಿ ಎಲ್ಲಾ ರೀತಿಯ ಕನಸುಗಳನ್ನು ಹೊತ್ತು ತಂದಿರುತ್ತಾರೆ.

ಅಂತಹ ಸಮಯದಲ್ಲಿ ಕೆಲವು ಸಂಕಷ್ಟಗಳು ಹುಟ್ಟಿಕೊಂಡು ಅವರ ಸುಖ ಸಂಸಾರವನ್ನು ಒಡೆಯುವ ಹುನ್ನಾರ ಸಹ ಇಲ್ಲಿ ಕಂಡುಬರುತ್ತದೆ.

ತುಂಬು ಕುಟುಂಬದಲ್ಲಿ ಇರುವುದರಿಂದ ರಕ್ತಸಂಬಂಧ, ಗಂಡ ಹೆಂಡತಿಯರ ಸಂಬಂಧ ಹಾಗೂ ಮಾನವೀಯ ಸಂಬಂಧಗಳ ಅಡಿಯಲ್ಲಿ ಜನಪದರು ಬದುಕುತ್ತಾರೆ. ಅಂತಹ ಗಳಿಗೆಯಲ್ಲಿ ಬಂಜೆಯಾದವಳ ನೋವು ಯಾವ ರೀತಿಯದು ಎಂಬುದಕ್ಕೆ ಈ ಮಾತುಗಳು ಸಾಕ್ಷಿಯಾಗಿವೆ. ಅಂತಹ ಒಂದು ಕಥನಕಾವ್ಯದ ತುಣುಕು ಕಾಣಬಹುದು.

ಆರುಲೋಕವ ಆಳಿದರೇನು
ಬಂಜೆಯ ಬಾಳು ಬಾಳಲ್ಲ
ಮೂರು ಲೋಕವ ಆಳಿದರೇನು
ಬರುಡರ ಬಾಳು ಬಾಳಲ್ಲ
ಮುಕ್ಕಣ್ಣಯ್ಯನ ಬಳಿಯಲ್ಲಿ
ಅಪ್ಪಭಾಗ್ಯವ ತಂದರೇನು[೨೫]

ಶ್ರೀಮಂತಿಕೆ ಇದ್ದರೂ ಬಂಜೆಗೆ ಈ ಸಮಾಜದಲ್ಲಿ ಬೆಲೆಯಿಲ್ಲ. ಯಾವುದೇ ರಾಜ್ಯಭಾರ ಮಾಡಿದರೂ ಕೀಳಾಗಿ ನೋಡುತ್ತಾರೆ ಎಂಬ ಅಭಿಪ್ರಾಯವನ್ನು ಕಥೆಗಳು ತೋರಿಸುತ್ತದೆ. ಬೇರೆಯವರ ಮಕ್ಕಳನ್ನು ನೋಡಿ ಸಂತೋಷ ಪಡೋಣವೆಂದರೂ ಅದಕ್ಕೆ ಅನುಮತಿ ಸಿಕ್ಕುವುದಿಲ್ಲ. ಹಾಗಾಗಿ ಮಕ್ಕಳಿಲ್ಲದಿದ್ದರೆ ಎಲ್ಲವೂ ಇದ್ದು ಕಳೆದುಕೊಂಡಂತೆಯೇ, ಯಾವುದಾದರೂ ಒಂದು ಒಳ್ಳೆಯ ಕೆಲಸವನ್ನು ಮಾಡಿದರೆ ಮಕ್ಕಳಾಗುತ್ತವೆ ಎಂಬ ಕಾರಣಕ್ಕೆ ಫಲವನ್ನು ಬಿಡುವ ಸಸಿಗಳನ್ನು ಬೆಳೆಸುತ್ತಾಳೆ. ಆದರೆ ಪ್ರಾಣಿ ಪಶುಪಕ್ಷಿಗಳು ಸಹ ಆಕೆಯು ಮಾಡಿದ ಧರ್ಮಕಾರ್ಯಗಳನ್ನು ನಿರಾಕರಿಸುತ್ತವೆ.

**೫.೧. ಮದುವೆಯ ಸಂಪ್ರದಾಯಗಳು**

ಮದುವೆ ಎಂಬುದನ್ನು ವಿವಾಹ, ಪರಿಣಯ ಕಲ್ಯಾಣ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈ 'ಮದುವೆ' ಎಂದಿನಿಂದ ರೂಢಿಯಲ್ಲಿ ಬಂತು ಎಂದು ಖಚಿತವಾಗಿ ಹೇಳಲು ಆಧಾರಗಳಿಲ್ಲ. ಮದುವೆಯ ಆಚರಣೆಗಳು, ಪದ್ಧತಿಗಳು ಇಂದು ಈ ಸ್ಥಿತಿಗೆ ಬರುವ ಮುಂಚಿತವಾಗಿಯೇ ಅನೇಕ ಬದಲಾವಣೆ, ಪರಿಷ್ಕರಣೆ, ಹೊಂದಾಣಿಕೆಗಳು ಆಗಿರಬೇಕೆಂದು ಹೇಳಬಹುದು. ಹೆಣ್ಣು ಗಂಡು ಒಂದುಗೂಡಿ ವ್ಯವಸ್ಥಿತವಾಗಿ ಜೀವನ ಸಾಗಿಸಲು ಸಮಾಜದಲ್ಲಿ ಎಲ್ಲರೂ ಒಪ್ಪಿಗೆ ಸೂಚಿಸುವ ವ್ಯವಸ್ಥೆಯೇ ವಿವಾಹ. ಮುಂದೆ ಬರುಬರುತ್ತಾ ಕಟ್ಟುಪಾಡು, ನಿಷೇಧ, ನಿರ್ಬಂಧ, ಸಪ್ತಪದಿ, ಮಂತ್ರ ಪೌರೋಹಿತ್ಯ ಸೇರಿಕೊಂಡು ವಿವಾಹಕ್ಕೆ ಒಂದು ಧಾರ್ಮಿಕ ಚೌಕಟ್ಟು ಹಾಕಿದರು.

ವಿವಾಹದ ಮುಖ್ಯ ಉದ್ದೇಶ ಗಂಡು ಹೆಣ್ಣು ಒಂದುಗೂಡಿ ಲೈಂಗಿಕ ತೃಪ್ತಿ ಪಡೆಯುವುದು ಮತ್ತು ಸಂತಾನೋತ್ಪತ್ತಿ ಮಾಡುವುದು, ಸಂತಾನ ರಕ್ಷಣೆಯ ಜವಾಬ್ದಾರಿ ಹೊಂದುವುದು ಆಗಿದೆ ಎಂಬುದು ಬಹುಜನರ ಅಭಿಪ್ರಾಯವಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ವಿವಾಹ ಎಂದರೆ ಎರಡು ಆತ್ಮಗಳ ಮಿಲನ. ವಿವಾಹಗಳು ಸ್ವರ್ಗದಲ್ಲಿಯೇ ನಡೆದಿರುತ್ತವೆ. ಇಹಪರದ ಸುಖಗಳಿಗೆ ದಾಂಪತ್ಯ ಜೀವನವೇ ಮೂಲ. ಮದುವೆಯಾಗದವರ ಬಾಳು ಅಪೂರ್ಣವೆಂತಲೂ ಕರೆದಿದ್ದಾರೆ. ಧರ್ಮ, ಅರ್ಥ, ಕಾಮ, ಮೋಕ್ಷ ಸಂಪಾದಿಸಲು ವಿವಾಹ ಅಗತ್ಯವೆಂದು ನಂಬಿದರು. ಯಜ್ಞಯಾಗಗಳನ್ನು ಸಪತ್ನಿಕರಾಗಿಯೇ ಮಾಡಬೇಕೆಂದು ದಾಂಪತ್ಯಕ್ಕೆ ಹೆಚ್ಚು ಒತ್ತು ಕೊಟ್ಟರು. ರಾಮ ಸೀತೆಯನ್ನು ಕಾಡಿಗಟ್ಟಿದರೂ ಅವಳ ಸ್ಥಾನದಲ್ಲಿ ಚಿನ್ನದ ಮೂರ್ತಿ ಕೂಡಿಸಿ ಯಜ್ಞ ನೆರವೇರಿಸಿದ ಎಂದು ರಾಮಾಯಣದಲ್ಲಿ ಉಕ್ತವಾಗಿದೆ. ಇಷ್ಟೇ ಅಲ್ಲದೆ ತುಳಸಿ ಎಂಬ ಸಸ್ಯಕ್ಕೂ ಮದುವೆ ಮಾಡಿಸುತ್ತಾರೆ. ಬಾಳೆಗಿಡ, ಮಾವಿನ ಮರ, ಅಡಿಕೆ ಗಿಡ ಮೊದಲ ಸಣ್ಣ

ಫಲಬಿಟ್ಟಾಗ ಮದುವೆ ಮಾಡಿಸುತ್ತಾರೆ. ದೇವತೆಗಳಿಗೂ ಮದುವೆ, ಕಲ್ಯಾಣೋತ್ಸವ ಮಾಡಿಸುವ ಸಂಪ್ರದಾಯ ಗಳಿವೆ. ದೇಶದಿಂದ ದೇಶಕ್ಕೆ, ಸಮಾಜದಿಂದ ಸಮಾಜಕ್ಕೆ, ಜಾತಿಯಿಂದ ಜಾತಿಗೆ ಹಲವಾರು ಸಂಪ್ರದಾಯಗಳಲ್ಲಿ ವ್ಯತ್ಯಾಸಗಳಿರುವಂತೆ ವಿವಾಹ ಪದ್ಧತಿಯಲ್ಲಿಯೂ ವ್ಯತ್ಯಾಸಗಳಿವೆ. ಪ್ರಾಚೀನ ಹಿಂದೂ ಪುರಾಣ, ಧರ್ಮಶಾಸ್ತ್ರ ಗಳಲ್ಲಿ ಎಂಟು ರೀತಿಯ ವಿವಾಹ ಪದ್ಧತಿಗಳನ್ನು ಹೇಳಿದ್ದಾರೆ. ಬ್ರಹ್ಮ, ದೈವ, ಆರ್ಷ, ಪ್ರಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ ಇವುಗಳಲ್ಲಿ ಪ್ರಮುಖವಾಗಿ ಮೂರೇ ವಿವಾಹ ಪದ್ಧತಿಗಳಿವೆ. ಮೊದಲನೆಯದು ಕನ್ಯೆಯ ತಂದೆ ವಸ್ತು ಒಡವೆಗಳಿಂದ ಅಲಂಕರಿಸಿ ಯೋಗ್ಯನಾದ, ಓದು ಮುಗಿಸಿದ ಅಥವಾ ಸರಕಾರಿ ಕೆಲಸ, ಜಮೀನು ಕೂಲಿ ಕೆಲಸ ಮಾಡುವಂಥ ವರನಿಗೆ ವಧುವನ್ನು ಧಾರೆ ಎರೆದು ಕೊಡುವುದು. ಒಂದು ಗಂಡು ಒಂದು ಹೆಣ್ಣು ಪರಸ್ಪರ ಮೆಚ್ಚಿ ಪ್ರೀತಿಸಿ ಹಿರಿಯರಿಗೆ ಗೊತ್ತಾಗದಂತೆ ಮದುವೆಯಾಗುವುದು. (ಉದಾ: ನಾಗಕನ್ಯೆ, ಅವರಪ್ಪನಿಗೆ ಅವನು ಹುಟ್ಟಿದ್ದರ ಬರಲಿ, ಮೊಲೆ ಹಾಲು ಮೋರೆಗೆ ಸುರಿದೋ ಎಂಬ ಕಥೆಗಳನ್ನು ನೋಡಬಹುದು) ಇದಕ್ಕೆ ಗಾಂಧರ್ವ ವಿವಾಹ ಎಂದು ಮೊದಲಿನ ಕಾಲದಲ್ಲಿ ಕರೆದರೆ ಈಗ ಪ್ರೇಮ ವಿವಾಹವೆನ್ನುತ್ತಾರೆ. ಇನ್ನೊಂದು ರೀತಿಯ ವಿವಾಹ ಇದರಲ್ಲಿ ಕನ್ಯೆಗೆ ಇಷ್ಟವಿಲ್ಲದಿದ್ದರೂ ಅವಳ ಮನೆಯವರನ್ನು ಹೊಡೆದು ಬಡಿದು ಬಲತ್ಕಾರದಿಂದ ಕನ್ಯೆಯನ್ನು ಅಪಹರಿಸಿ ವಿವಾಹ ಮಾಡಿಕೊಳ್ಳುವುದು ರಾಕ್ಷಸ ವಿವಾಹವೆಂದು ಕರೆಯುತ್ತಾರೆ.

ಈ ಪದ್ಧತಿಗಳಲ್ಲದೆ ಕನ್ಯೆಯ ತಂದೆ–ತಾಯಿಯರಿಗೆ ಕನ್ಯಾ ಶುಲ್ಕವನ್ನು ಕೊಟ್ಟು ಮದುವೆ ಮಾಡಿಕೊಳ್ಳುವು ದುಂಟು. ಇದನ್ನು ಆರ್ಷವಿವಾಹವೆಂದು ಹಿಂದೂ ಧರ್ಮಶಾಸ್ತ್ರಗಳಲ್ಲಿ ಕರೆದರೆ, 'ತೆರ' ಕೊಟ್ಟು ವಿವಾಹ ವಾಗುವುದು ಎಂದು ಜನಪದರು ಕರೆದಿದ್ದಾರೆ. ಇಂಥ ಪದ್ಧತಿ ಹೆಚ್ಚಾಗಿ ಕೆಳಜಾತಿಯವರಲ್ಲಿ ಇಂದೂ ಅಲ್ಲಲ್ಲಿ ಕಂಡುಬರುತ್ತದೆ. ವರನಿಗೆ 'ವರದಕ್ಷಿಣೆ' ಕೊಟ್ಟು ವಿವಾಹ ಮಾಡಿಕೊಡುವ ಪದ್ಧತಿ ಹೆಚ್ಚಾಗಿ ರೂಢಿಯಲ್ಲಿ ಬರುವುದರಿಂದ 'ತೆರ' ಕಣ್ಮರೆಯಾಗುತ್ತಿದೆ.

ಈ ಎಲ್ಲಾ ವಿವಾಹ ಪದ್ಧತಿಗಳಲ್ಲಿ ವಧುವಿನ ತಂದೆ ತಾಯಿ ಮಗಳನ್ನು ಸ್ವಸಂತೋಷದಿಂದ 'ಧಾರೆ' ಎರೆದು ಕೊಡುವುದು ಸಾಮಾಜಿಕ ಮನ್ನಣೆ ಪಡೆದಿದೆ. ಇಂತಹ ಮದುವೆಗಳನ್ನು ಊರ ಹಿರಿಯರು ಬಂಧು ಬಳಗ ಸೇರಿ ಮಾಡುವುದರಿಂದ ಅದಕ್ಕೊಂದು ಸಂಭ್ರಮದ ವಾತಾವರಣ ಇರುವುದು. ನಾಲ್ಕು ಜನರ ಸಮ್ಮುಖದಲ್ಲಿ ಆಗಿರುವುದರಿಂದ ಎಲ್ಲರಿಗೂ ಮದುವೆ ವಿಷಯ ತಿಳಿದಿರಬೇಕೆಂಬುದು ಮುಖ್ಯವಾಗುತ್ತದೆ. ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ ಬಾಲ್ಯ ವಿವಾಹವೇ ಹೆಚ್ಚಾಗಿ ರೂಢಿಯಲ್ಲಿತ್ತು. ನಾಲ್ಕಾರು ಮದುವೆಗಳು ಒಟ್ಟಿಗೆ ಮಾಡುವುದರಿಂದ ದೊಡ್ಡವರ ಮದುವೆಗಳಲ್ಲಿ ಚಿಕ್ಕವರ ಮದುವೆ ಮಾಡಿ ಮುಗಿಸುತ್ತಿದ್ದರು. ಹೊಲ, ಮನೆ ಕೆಲಸಗಳಿಗೆ ಮಕ್ಕಳು ಸೊಸೆ ನೆರವಾಗಲಿ, ಮೊಮ್ಮಕ್ಕಳು ಮನೆ ತುಂಬಾ ನಲಿದಾಡಲಿ ಎಂಬ ಉದ್ದೇಶ ಒಂದೆಡೆಗಿದ್ದರೆ, ಸಾಯುತ್ತಿರುವ ಮನೆ ಹಿರಿಯರೊಬ್ಬರು ಇವನಿಗೆ ಇದೇ ಹೆಣ್ಣು ಮಾಡ ಬೇಕೆಂದು ಹಟ ಹಿಡಿದಾಗ ಅವರ ಮಾತು ಉಳಿಸುವುದಕ್ಕಾಗಿಯೂ ಬಾಲ್ಯ ವಿವಾಹ ಮಾಡಬೇಕಾಗುತ್ತಿತ್ತು. ಒಟ್ಟಿನಲ್ಲಿ ತಮ್ಮ ಅನುಕೂಲ ಗೌರವ ಪ್ರತಿಷ್ಠೆಗಳಿಗೆ ತಕ್ಕಂತೆ ಮದುವೆಗಳನ್ನು ಸಡಗರ ಸಂಭ್ರಮದಿಂದ ನೆರವೇರಿಸುತ್ತಿದ್ದರು. ಸಮಾಜದ ಉಚ್ಚವರ್ಗದ ಜನ ಧರ್ಮಶಾಸ್ತ್ರದ ಪ್ರಕಾರ ಅನುಸರಿಸಿ, ಹೋಮ,

ಸಪ್ತಪದಿ, ಮಂತ್ರಪಠಣ ಮೊದಲಾದವುಗಳನ್ನು ಕ್ರಮಬದ್ಧವಾಗಿ ಅನುಸರಿಸಿ ಮದುವೆಗಳನ್ನು ಮಾಡಿದರೆ, ಜನಪದರಲ್ಲಿ ಗ್ರಾಮೀಣ ಪರಿಸರಕ್ಕೆ, ಅನುಕೂಲವಾಗುವ ರೀತಿಯಲ್ಲಿ ತಮ್ಮದೇ ಆದ ರೂಢಿ ಸಂಪ್ರದಾಯಗಳನ್ನು ಆಚರಿಸುತ್ತಾರೆ.[೨೪]

**ಹೆಣ್ಣು ನೋಡುವುದು:** ಒಂದು ಶುಭ ದಿನವನ್ನು ನಿರ್ಧರಿಸಿ ಶುಭ ಮುಹೂರ್ತದಲ್ಲಿ ಐದು ಜನ ಇಲ್ಲವೆ ಒಂಭತ್ತು ಜನ ಹಿರಿಯರು, ಮುತ್ತೈದೆಯರು ಹೆಣ್ಣಿನ ಊರಿಗೆ ಪ್ರಯಾಣ ಮಾಡುವರು. ಮನೆಯಿಂದ ಹೊರಗೆ ಬರುವುದರಿಂದ ಮೊದಲ್ಗೊಂಡು ಶುಭ ಶಕುನಗಳನ್ನು ಗಮನಿಸುತ್ತಾರೆ. ಅಶುಭ ಶಕುನಗಳೇ ಎದುರಾದರೆ, ಆ ಕನ್ಯೆಯನ್ನು ನೋಡಲು ಹೋಗುವ ಕಾರ್ಯಕ್ರಮವನ್ನು ಕೈಬಿಡುವರು. ಇಲ್ಲವೆ ಹೆಣ್ಣು ನೋಡಿ ಬಂದರೂ ಸಂಬಂಧ ಬೆಳೆಸುವುದಿಲ್ಲ.

**ಶುಭ ಶಕುನಗಳು:** ತುಂಬಿದ ಕೊಡ ಹೊತ್ತುಕೊಂಡು ಮುತ್ತೈದೆ ಎದುರಾಗುವುದು. ಮಾರ್ಗಮಧ್ಯದಲ್ಲಿ ಮುಂಗುಸಿ, ನರಿ, ತುಂಬಿದ ಬಂಡಿ ಎದುರು ಬರುವುದು ಇತ್ಯಾದಿಗಳು.

**ಅಶುಭಶಕುನಗಳು:** ಪ್ರಯಾಣ ಹೊರಟಾಗ ಖಾಲಿ ಕೊಡ, ವಿಧವೆ ಎದುರು ಬರುವುದು, ಸಲಿಕಿ, ಗುದ್ದಲಿ, ಬಟ್ಟೆಗಳನ್ನು ತೆಗೆದುಕೊಂಡು ಬರುವುದು, ಬೆಕ್ಕು ಎಡದಿಂದ ಬಲಕ್ಕೆ ಹೋಗುವುದು, ಕಟ್ಟಿಗೆ ಹೊರೆ ಹೊತ್ತುಕೊಂಡವರು ಬರುವುದು, ಹಾವು ಕಾಣುವುದು, ಒಂಟಿ ಬ್ರಾಹ್ಮಣ, ಗಾಣಿಗ ಎದುರಾಗುವುದು, ಪ್ರಯಾಣ ಆರಂಭದಲ್ಲಿ ಒಂಟಿ ಸೀನು ಸೀನುವುದು(ಎರಡು ಸೀನು ಬಂದರೆ ಶುಭ), ಮನೆಯಿಂದ ಹೊರಗೆ ಬರುತ್ತಲೇ ಕಾಗೆ ತಲೆಗೆ ಬಡಿಯುವುದು ಇತ್ಯಾದಿಗಳು. ಇಷ್ಟೆಲ್ಲ ಅಶುಭ ಶಕುನಗಳನ್ನು ಗಮನಿಸುತ್ತಾ ಕನ್ಯೆ ಇರುವ ಊರಿಗೆ ಪ್ರಯಾಣ ಬೆಳೆಸುವುದಿಲ್ಲ.

ಹೆಣ್ಣಿನವರು ಒಂದು ಶುಭದಿನದಂದು ಪ್ರಯಾಣ ಮಾಡಿ ಹೊಲಗದ್ದೆ, ತೋಟ ಆಸ್ತಿ ಎಲ್ಲ ನೋಡಿ ಬರುವರು. ಇವರು ಬರುವಾಗಲು ಶುಭ–ಅಶುಭ ಶಕುನಗಳನ್ನು ಗಮನಿಸುತ್ತಾರೆ. ವರ, ಮನೆತನ, ಸಾಲಾವಳಿ ಕೂಡಿ ಬಂದರೆ ಅಂದೇ ಮಾತುಕತೆಯಾಡುವರು. ಹೆಣ್ಣಿನ ತಂದೆ ಗಂಡಿನ ತಂದೆಯವರು ನೇರವಾಗಿ ಭಾಗವಹಿಸದೇ ಎರಡೂ ಪಂಗಡಗಳಲ್ಲಿ ಒಬ್ಬೊಬ್ಬರು, ವರದಕ್ಷಿಣೆ ವರೋಪಚಾರ, ಸೀರೆ ಒಡವೆಗಳ ಬಗ್ಗೆ ಮಾತನಾಡಿ ಒಂದು ಒಪ್ಪಂದಕ್ಕೆ ಬಂದು ಮಾತುಕತೆಗಳನ್ನು ಮುಗಿಸುವರು. ಮನೆಯಲ್ಲಿಯ ಸಕ್ಕರೆ ತರಿಸಿ ಎಲ್ಲರಿಗೂ ಕೊಡುವರು. ಹೆಣ್ಣಿನ ತಂದೆ ಎಲೆ ಅಡಿಕೆ ಕೈಯಲ್ಲಿ ಹಿಡಿದು ದೈವ ಸಾಕ್ಷಿ ಹಾಗೂ ದೇವರ ಸಾಕ್ಷಿಯಾಗಿ, ಇವರ ಮಗನಿಗೆ ನನ್ನ ಮಗಳನ್ನು ಕೊಡಲೊಪ್ಪಿದ್ದೇನೆ ಎಂದು ಹೇಳಿ ವರನ ತಂದೆಯ ಕೈಯಲ್ಲಿ ವೀಳ್ಯ ಕೊಡುವನು. ಇದೇ ರೀತಿ ವರನ ತಂದೆಯೂ ಹೆಣ್ಣಿನ ತಂದೆಯ ಕೈಯಲ್ಲಿ ವೀಳ್ಯ ಕೊಡುವನು. ದೈವದವರ ಸಾಕ್ಷಿಯಾಗಿ ಈ ರೀತಿ ವೀಳೆ ವಿನಿಮಯ ಮಾಡಿಕೊಂಡ ಮೇಲೆ ಮದುವೆ ಸಂಪೂರ್ಣ ನಿಶ್ಚಯವಾದಂತೆ; ಅಂದು ಬಂದ ಬೀಗರಿಗೆ ಸಿಹಿ ಊಟ ಮಾತ್ರ ಕೊಡುತ್ತಾರೆ.[೨೫]

**ನಿಶ್ಚಯ ಕಾರ್ಯ:** ಇದಕ್ಕೆ "ಸಕ್ಕರಿ ಇಡುವ ಕಾರಣ"ವೆಂತಲೂ ಕರೆಯುತ್ತಾರೆ. ಹೆಣ್ಣಿನವರು ಗಂಡಿನವರು ಪರಸ್ಪರ ಒಪ್ಪಿದ ಮೇಲೆ ಶುಭದಿನ ಶುಭಮುಹೂರ್ತ ನೋಡಿ ಗಂಡಿನವರು ನಿಶ್ಚಯ

ಕಾರಣಕ್ಕಾಗಿ ಹೆಣ್ಣಿನ ಮನೆಗೆ ಬರುವರು. ಊರ ಹಿರಿಯರಿಗೆ ಕೇರಿಯ ಸುಮಂಗಲಿಯರಿಗೆ, ಅಕ್ಕಪಕ್ಕದ ಮನೆಯವರನ್ನು ಕರೆಯುವರು. ಒಂದು ಕಂಬಳಿ ಇರಿಸಿ ಅದರ ಮೇಲೆ ಹಸೆ ಬರೆದು ಎದುರಿಗೆ ಕಂಚ ಕಳಸ ಅಡ್ಡಣಿಗೆಯ ಮೇಲೆ ಇಡುವರು. ಹೆಣ್ಣು ಒಳಗಿನಿಂದ ಬರುವವರೆಗೆ ಹಸೆಯ ಮೇಲೆ ಒಬ್ಬರನ್ನು ಕೂಡಿಸುವರು. ಮುಂದಿನ ಕಾರ್ಯಕ್ರಮ ಆರಂಭವಾಗುವವರೆಗೆ ಯಾರೂ ಸೀನಬಾರದು, ಅಳಬಾರದು, ಹೆಣ್ಣನ್ನು ಬೇಗ ಕರೆತಂದು ಹಸೆಯ ಮೇಲೆ ಕೂಡಿಸುವರು. ಕುಂಕುಮವಿಟ್ಟು ಬಂಗಾರದ ಉಂಗುರ ಇನ್ನಿತರ ಒಡವೆ ತಂದಿದ್ದರೆ ಅವನ್ನೆಲ್ಲ ಹಾಕಿ, ಸೀರೆಗೆ ಕುಂಕುಮ ಹಚ್ಚಿ ಉಡಿಸುವವಳೇ ಮೊದಲು ತನ್ನ ತಲೆಯ ಮೇಲೆ ಸೀರೆಯ ಸೆರಗು ಹೊದ್ದುಕೊಂಡು ಅನಂತರ ಅವಳಿಗೆ ಉಡಿಸುವಳು. ಇದಾದ ಮೇಲೆ ತಲೆಗೆ ದಂಡಿಕಟ್ಟಿ ಉಡಿಯಕ್ಕಿ ಹಾಕಿ ಅನಂತರ ಬೀಗರಿಗೂ, ತಮಗೆ ಬೇಕಾದ ಊರ ಹಿರಿಯರು, ಬಂಧು-ಬಳಗದವರಿಗೂ ಊಟ ಮಾಡಿಸುವರು. ನಿಶ್ಚಯ ಕಾರಣ ಮುಗಿದ ಮೇಲೆ ತಮಗೆ ಅನುಕೂಲವಾದ ದಿನಗಳಲ್ಲಿ ಒಂದು ದಿನ ಮದುವೆ ಇಟ್ಟುಕೊಳ್ಳುವರು.

ಮದುವೆ ಸಿದ್ಧತೆಗಳನ್ನು ಭರದಿಂದ ಮಾಡುವರು. ಮನೆಗೆ ಸುಣ್ಣ ಬಣ್ಣ ಬಳೆಯುವರು. ಮನೆ ಶುಚಿಗೊಳಿಸಿ ಬಟ್ಟೆ ಬರೆಗಳೆಲ್ಲ ಒಗೆದು ಶುದ್ಧರಾಗಿ ತಮ್ಮ ಮನೆ ದೇವರ ವಿಶೇಷವಾದ ಪೂಜೆ ಮಾಡುವರು. ಇವುಗಳಲ್ಲಿ ಮನೆಯ ಲಕ್ಷ್ಮಿ ಮಾಡುವರು, ಇಷ್ಟೆಲ್ಲ ಸಿದ್ಧತೆಗಳಾದ ಮೇಲೆ ಲಗ್ನಪತ್ರಿಕೆ ತೆಗೆಸುವರು. ಮನೆಯ ಗುರುಗಳಿಂದ ಲಗ್ನ ಪತ್ರಿಕೆ ಬರೆಯಿಸಿ, ಎಣ್ಣೆ ಕುಂಕುಮವಿಟ್ಟು ಪೂಜಿಸುವರು. ಅದಕ್ಕೆ ಅಕ್ಷತೆ ಹಾಕಿ ಮುತ್ತೈದೆಯರು ಅದಕ್ಕೆ ಆರತಿ ಬೆಳಗುವರು. ಆ ಪತ್ರಿಕೆಯನ್ನು ವಧುವಿನ ಮನೆಗೆ ಒಬ್ಬರು ಒಯ್ದು ಕೊಡುವರು. ಇಂದಿನ ದಿನವೇ ಕಳಸಗಿತ್ತಿಯ ಹೆಸರು ಸೂಚಿಸಲಾಗುತ್ತದೆ. ಮದುವೆಯ ಪ್ರತಿಯೊಂದು ಸಂದರ್ಭದಲ್ಲೂ ಕಳಸಗಿತ್ತಿಯೇ ಮುಂದೆ ಇರುತ್ತಾಳೆ. ಕುಂಕುಮ ಹಚ್ಚುವಾಗ, ಸುರಗಿ ಸುತ್ತುವಾಗ, ಕುಂಬಾರನ ಮನೆಗೆ ಹೋಗುವಾಗ, ಐರಾಣಿ ತರುವಾಗ ಮುಂತಾದ ಸಮಾರಂಭಗಳಲ್ಲಿ ಕಳಸಗಿತ್ತಿ ಮುಂದು ಇರುತ್ತಾಳೆ. ಕಳಸಗಿತ್ತಿ ಸಾಮಾನ್ಯವಾಗಿ ವರನ ಅಕ್ಕ-ತಂಗಿ, ಸೋದರತ್ತೆಯಾಗಿರುವಳು. ಅವಳು ಮುತ್ತೈದೆಯಾಗಿರಬೇಕು. ಯಾವ ಅಂಗಾಂಗಳು ಊನವಾಗಿರಬಾರದು ಎಂಬ ನಿರ್ಬಂಧಗಳಿವೆ.

**ಒಳಕಲ್ ಪೂಜೆ:** ಒರಳು ಒನಕೆ ಮತ್ತು ಬೀಸುವ ಕಲ್ಲುಗಳು ಜನಪದರಿಗೆ ಅವಶ್ಯಕವಾಗಿ ಬೇಕಾಗುವ ಸಾಮಗ್ರಿಗಳು. ಅವುಗಳನ್ನು ಜನಪದರು ಪೂಜ್ಯಭಾವನೆಯಿಂದ ಕಾಣುತ್ತಾರೆ. ಅದೇ ರೀತಿ ಅಡುಗೆ ಮಾಡುವ ಒಲೆಯನ್ನು ಕೂಡ ಪೂಜಿಸುತ್ತಾರೆ. ಮದುವೆಯ ಸಿದ್ಧತೆಯ ಕಾಲಕ್ಕೆ ಹಳೆಯ ಒಲೆಗಳು ತೆಗೆದು ಹೊಸ ಒಲೆಗಳನ್ನು ಹಾಕಿ ಪೂಜಿಸಿಯೇ ಮದುವೆಯ ಅಡುಗೆ ಮಾಡುವರು. ಒಳಕಲ್ ಪೂಜೆ ದಿನದಂದು ಒರಳು ಒನಕೆಗಳನ್ನು ಚೆನ್ನಾಗಿ ತೊಳೆದು, ಸುಣ್ಣ ಮತ್ತು ಜಾಜಗಳಿಂದ ಕೆಂಪು ಬಿಳಿಸಾಲುಗಳನ್ನು ಒಂದರ ಬದಿಗೆ ಇನ್ನೊಂದು ಬರುವಂತೆ ಬರೆಯುತ್ತಾರೆ. ಒಂದು ಬಿಳಿ ವಸ್ತ್ರದಲ್ಲಿ ಅರಿಶಿಣದ ತುಂಡು ಕಟ್ಟಿ ಅದನ್ನು ಒನಕೆಗೆ ಕಟ್ಟುವರು. ಅದರಂತೆ ಬೀಸುವ ಕಲ್ಲು ಸ್ವಚ್ಛವಾಗಿ ತೊಳೆದು ಕೆಂಪು ಬಿಳಿ ಎಳೆಗಳು ಬರುವಂತೆ ಸುಣ್ಣ ಜಾಜದಿಂದ ಗೆರೆ ಎಳೆಯುವರು. ಒಂದು ಬಿಳಿ ವಸ್ತ್ರದಲ್ಲಿ ಅರಿಶಿಣದ ತುಂಡು ಕಟ್ಟಿ ಬೀಸುವ ಕಲ್ಲಿನ ಬಾಯಿಗೆ ಕಟ್ಟುವರು. ಇದಾದ ಮೇಲೆ ಕುಟ್ಟಲು ಐದು ಜನ ಮುತ್ತೈದೆಯರು, ಬೀಸಲು

ಐದು ಜನ ಮುತ್ತೈದೆಯರು ಒರಳು ಕಲ್ಲಿಗೆ ಕುಂಕುಮ ವಿಭೂತಿಗಳಿಂದ ಪೂಜಿಸಿ, ಹೂ ಧರಿಸಿ ಊದಿನಕಡ್ಡಿ ಬೆಳಗಿ ತಾವೂ ಹೂವಿನ ದಂಡಿಯನ್ನು ತಲೆಗೆ ಮುಡಿದುಕೊಂಡು ವೀಳ್ಯ ಎಲೆಯ ಮೇಲೆ ನೆನೆಯಿಸಿದ ಕಡಲೆ ಬೇಳೆಗಳನ್ನು ಇಟ್ಟು ಪೂಜಿಸಿ ಹಾಡುತ್ತ ಕುಟ್ಟುವರು. ಆದರೆ ಈಗ ಕುಟ್ಟುವ, ಬೀಸುವ ಶ್ರಮವಿಲ್ಲದೆ ಗಿರಣಿಗಳಲ್ಲಿ ಬೀಸಿಕೊಂಡು ಬರುವರು. ಆದರೂ ಶಾಸ್ತ್ರಕ್ಕೆ ಈ ಸಂಪ್ರದಾಯವಿದೆ. ನೆರೆಹೊರೆಯವರನ್ನು ಕರೆದು, ಬಂಧು ಬಳಗದವರ ಜೊತೆಗೂಡಿ ಹೆಂಗಸರೆಲ್ಲ ಕೆಲಸ ಕಾರ್ಯ ಮಾಡಲು ಇದೊಂದು ಮದುವೆಯ ಸಿದ್ಧತೆಯ ಸಂಪ್ರದಾಯವಾಗಿ ಉಳಿದಿದೆ.

**ಶಾವಿಗೆ ಮಾಡುವುದು:** ಶಾವಿಗೆ ಸಿಹಿ ಅಡುಗೆಯಲ್ಲಿ ಬಹು ಪ್ರಸಿದ್ಧವಾದುದು. ನೈವೇದ್ಯಕ್ಕೆ ಈ ಪಾಯಸ ಮುಖ್ಯವಾದದ್ದು. ಅದರಂತೆ ಮದುಮಕ್ಕಳಿಗೆ ಊಟಕ್ಕೆ ಶಾವಿಗೆ ಪಾಯಸ ಕೊಡುವುದೊಂದು ವಿಶೇಷ ಪದ್ಧತಿ ಇದೆ. ಹೀಗಾಗಿ ಮದುವೆಯ ಮುಂಚೆ ಹತ್ತು-ಇಪ್ಪತ್ತು ಸೇರು ಗೋದಿಯ ಶಾವಿಗೆ ಮಾಡಿ ಹರವಿಯಲ್ಲಿ ತುಂಬಿಡುತ್ತಾರೆ. ಶಾವಿಗೆ ಮಣೆಗಳನ್ನು ತೊಳೆದು, ಅವುಗಳಿಗೆ ವಿಭೂತಿ ಕುಂಕುಮಗಳಿಂದ ಪೂಜಿಸಿ, ಗಂಧದ ಕಡ್ಡಿ ಬೆಳಗಿ ವೀಳ್ಯದ ಎಲೆಯ ಮೇಲೆ ಕಡಲೆ ಬೇಳೆಗಳನ್ನಿಟ್ಟು ಶಾವಿಗೆ ಮಾಡುವವರಿಗೆ ಕೊಡುವರು. ಶಾವಿಗೆ ಮಾಡುವವರೂ ಒಬ್ಬರಿಗೊಬ್ಬರು ಕುಂಕುಮ ಹಚ್ಚಿ, ದಂಡಿ ಕಟ್ಟಿಕೊಂಡು ಶಾವಿಗೆ ಮಾಡಲು ಕುಳಿತುಕೊಳ್ಳುತ್ತಾರೆ. ಒಂದೊಂದು ಮಣೆಗೆ ಇಬ್ಬಿಬ್ಬರು ಬೇಕು. ಒಬ್ಬರು ಹಿಟ್ಟು ಹೊಸೆಯುವವರಾದರೆ ಇನ್ನೊಬ್ಬರು ಕೆಳಗೆ ಬಂದ ಎಳೆಗಳನ್ನು ಕೋಲಿನ ಮೇಲೆ ಅಥವಾ ಬಿದಿರಿನ ಬುಟ್ಟಿಯ ಮೇಲೆ ಹಾಕುವರು. ಶಾವಿಗೆ ಮಾಡಲು ಬಂದವರಿಗೆ ಪಾನಕ, ಚಹಾ ಮುಂತಾದ ಪಾನೀಯಗಳನ್ನು ಕುಡಿಯಲು ಕೊಟ್ಟು ಎಲೆ ಅಡಿಕೆ ಕೊಟ್ಟು ಸತ್ಕರಿಸುವರು. ಈ ಸಂಪ್ರದಾಯವೂ ಕೂಡ ಪಟ್ಟಣದಲ್ಲಿ (ನಗರಗಳಲ್ಲಿ) ನಿಂತುಹೋಗಿದೆ. ಹಳ್ಳಿಗಳಲ್ಲಿ ಕೆಲವೆಡೆ ಉಳಿದಿದೆ. ಶಾವಿಗೆಯನ್ನು ಕೈಯಿಂದ ಹೊಸೆಯದೆ ಯಂತ್ರದಲ್ಲಿ ಮಾಡಿಕೊಂಡಿರುತ್ತಾರೆ. ಇಲ್ಲವೆ ಅಂಗಡಿಯಿಂದ ತಂದು ಸಂಗ್ರಹಿಸಿಟ್ಟುಕೊಂಡಿರುವರು.[೨]

**ಕುಂಕುಮ ಹಚ್ಚುವ (ಉಡಿ ತುಂಬುವ) ಕಾರ್ಯ:** ಈ ಕಾರ್ಯಕ್ರಮವು ವಧುವಿನ ಮನೆಯಲ್ಲಿ ನಡೆಯುತ್ತದೆ. ಸಾಯಂಕಾಲ ಹೊಲಗದ್ದೆಗಳಿಂದ ಜನ ಬಂದ ಮೇಲೆ ಮುಂದಿನ ಕಾರ್ಯಕ್ರಮಗಳನ್ನು ಪ್ರಾರಂಭಿಸುವರು. ಊರಿನ ಹಿರಿಯರನ್ನು ಕರೆಯಿಸುವರು. ಅದೇ ರೀತಿ ಹೆಣ್ಣುಮಕ್ಕಳಿಗೂ ಬರಹೇಳುವರು. ಜನ ನೆರೆದ ಮೇಲೆ ಒಂದು ಕಂಬಳಿ ಹಾಸಿ ಅದರ ಮೇಲೆ ಹಸೆ ಬರೆದು ಹೆಣ್ಣನ್ನು ಅದರ ಮೇಲೆ ಕೂಡಿಸುವರು. ಅವಳ ಪಕ್ಕದಲ್ಲಿ ಎಡಕ್ಕೆ ಹತ್ತು ಹನ್ನೆರಡಕ್ಕಿಂತ ಚಿಕ್ಕವಳಾದ ಹೆಣ್ಣು ಮಗಳನ್ನು ಕೂಡಿಸುವರು. ಕನ್ಯೆಗೆ ಕುಂಕುಮ ಹಚ್ಚಿ, ಗಂಡಿನವರು ತಂದ ಬಂಗಾರದ ಒಡವೆ ಹಾಕಿ ಹೊಸ ಸೀರೆ ರವಿಗೆ ಉಡಿಸಿ, ಹೂವಿನ ದಂಡಿ ಕಟ್ಟಿ ಉಡಿಯಕ್ಕಿ ಹಾಕುವರು. ಉಡಿಯಕ್ಕಿ ಸಾಮಗ್ರಿಗಳು, ಐದು ಪಾವು ಅಕ್ಕಿ, ಐದು ಕೊಬ್ಬರಿ, ಅಡಿಕೆ ಅರಿಶಿಣ ಕೊಂಬುಗಳು, ಉತ್ತತ್ತಿ, ಎಲೆ ಈ ಎಲ್ಲಾ ವಸ್ತುಗಳನ್ನು ಒಂದೇ ಸಲಕ್ಕೆ ಸುರಿಯದೆ ಎರಡು ಸಲ ಅವಳ ಉಡಿಯಲ್ಲಿ ಹಾಕುವರು. ಅವಳು ಒಂದು ಹಿಡಿ ಅಕ್ಕಿ ಕೈಯಲ್ಲಿ ತೆಗೆದುಕೊಂಡು ಉಡಿಯಕ್ಕಿ ಇಟ್ಟ ತಟ್ಟೆಯಲ್ಲಿ ಎರಡು ಸಲ ಸ್ವಲ್ಪ ಸ್ವಲ್ಪವಾಗಿ ಹಾಕುವಳು. ಆರತಿ ಮಾಡುವರು. ಎಡಕ್ಕೆ ಕೂತವಳಿಗೂ ಸೀರೆ ಕುಬಸದ ಕಣ ಕೊಡುವರು. ಅವಳಿಗೂ ದಂಡಿ ಕಟ್ಟಿ ಆರತಿ ಮಾಡುವರು. ಹೊರಗೆ

ಮಂಗಳ ವಾದ್ಯಗಳು ಮೊಳಗುತ್ತಿರುವುವು. ಗಂಡಿನವರು ತಂದ ಒಂಭತ್ತು ಕುಬಸದ ಕಣಗಳನ್ನು ಹೆಣ್ಣಿನ ಬಳಗದ ಮುತ್ತೈದೆಯರಿಗೆ ಕುಂಕುಮ ಹಚ್ಚಿ ಕೊಡುವರು. ವಧುವಿನ ತಾಯಿಗೆ ಎರಡು ಕುಬಸದ ಕಣಗಳನ್ನು ಮಾಡುವರು. ಆರತಿ ಮಾಡಿ ಊರಿನ ಹಿರಿಯರಿಗೆ ಸಿಹಿಯೂಟ ಮಾಡಿಸಿ ಎಲೆ ಅಡಿಕೆ ಕೊಡುವರು. ಅಲ್ಲಿ ನೆರೆದವರಿಗೆ ಊಟ ಮಾಡಿಸಿ ಕಳುಹಿಸುವರು.

**ಹಂದರ ಹಾಕುವುದು:** ಮದುವೆಯ ಮನೆಯ ಅಂಗಳದಲ್ಲಿ ಹಂದರ ಹಾಕುತ್ತಾರೆ. ತಲಬಾಗಿಲ ಬಲಭಾಗದಲ್ಲಿ ಪೂರ್ವದಿಕ್ಕಿಗೆ ಮುಖವಾಗಿರುವಂತೆ ಹಂದರ ವ್ಯವಸ್ಥೆ ಮಾಡುವರು. ಒಂದು ಚಚ್ಚೌಕಾಕಾರದ ಸ್ಥಳದಲ್ಲಿ ನೆಲವನ್ನು ಸಮಗೊಳಿಸಿ ಬಸರಿಯ, ಆಲದ ಮರದ ಉದ್ದನೆಯ ಕಟ್ಟಿಗೆಗಳನ್ನು ತಂದು ನಾಲ್ಕು ಕಂಬಗಳನ್ನು ನೆಡುವರು. ಮೇಲೆ ಚಪ್ಪರವಾಗುವಂತೆ ಅಡ್ಡಾದಿಡ್ಡಿಯಾಗಿ ಪುಂಡಿಕಟ್ಟಿಗೆಗಳನ್ನು ಮಾವಿನ ಮರದ ಎಲೆಗಳನ್ನು ಹಾಗೂ ತೆಂಗಿನ ಮರದ ಟೊಂಗೆಗಳನ್ನು ಹಾಕಿ ಕಟ್ಟುವುದರಿಂದ ಹಸಿರು ಚಪ್ಪರ ವಾಗಿ ಕಾಣುತ್ತದೆ. (ಇದ್ದಂಥವರು ಮುತ್ತಿನ ಹಂದರವನ್ನು ಹಾಕಿಸುತ್ತಾರೆ.) ಈ ಕಂಬಗಳ ಮಧ್ಯದಲ್ಲಿರುವ ಸ್ಥಳದಲ್ಲಿ ನೆಲಮಟ್ಟದಿಂದ ಸ್ವಲ್ಪ ಎತ್ತರವಾಗಿ ಮಾಡಿ ಕಟ್ಟೆಯಂತೆ ಕಟ್ಟುವರು. ಇದಕ್ಕೆ 'ಹಸಿಗಟ್ಟೆ' 'ಹಸೆಯ ಕಟ್ಟೆ' ಎಂದು ಕರೆಯುವರು. ಹಿಂದಿನ ಗೋಡೆಗೆ ಸುಣ್ಣ ಬಳಿದು ಜಾಜದಿಂದ ಸೂರ್ಯ ಚಂದ್ರ ಬಳ್ಳಿ ಮೊದಲಾದ ಚಿತ್ರ ಬಿಡಿಸುವರು. ಹಂದರ ಹಾಕಿದವರಿಗೆ ಸಿಹಿಯೂಟ ಬಡಿಸುವರು. ಮುಂಭಾಗದ ಮಧ್ಯದಲ್ಲಿ ನೊಗ ನೆಡುತ್ತಾರೆ. ಈ ಕಂಬದ ಹತ್ತಿರ ಮುಂದೆ ಹಾಲಗಂಬ ತಂದಾಗ ನೆಡುವರು. ನೊಗಕ್ಕೆ ಒಂದು ಮಗಿಯ ಮೇಲೆ ಮುಚ್ಚಳವಿಟ್ಟು ಕಟ್ಟಲಾಗಿರುತ್ತಾರೆ. ಅದರಲ್ಲಿ ದೀಪ ಹಚ್ಚಿರುತ್ತಾರೆ. ಮದುವೆಯ ಎಲ್ಲಾ ಕಾರ್ಯಕಲಾಪಗಳು ಮುಗಿಯುವವರೆಗೂ ದೀಪ ಉರಿಯುತ್ತಲೇ ಇರುತ್ತದೆ. ಹಂದರ ಹಾಕುವುದು ಮದುವೆಯ ಮುಖ್ಯ ಕಾರ್ಯಕ್ರಮವಾಗಿದೆ.

**ಹಾಲುಗಂಬ ತರುವುದು:** ಹಂದರದ ಹಾಲುಗಂಬ ತರುವುದು ಮದುವೆಯ ಸಮಾರಂಭದಲ್ಲಿ ಒಂದು ಮುಖ್ಯವಾದ ಕೆಲಸವಾದರೂ ಅದನ್ನು ತರುವವ ವರನ ಸೋದರಮಾವ. ಅಡವಿಯಿಂದ ಆಲದ ಅಥವಾ ಅಳ್ಳಿಗಿಡದ ಒಂದು ಟೊಂಗೆ ಕಡಿದುಕೊಂಡು ಕಂಬಳಿಯಿಂದ ಮುಸುಕು ಹಾಕಿಕೊಂಡು ಬಂದು ಹನುಮಂತ ದೇವರ ಗುಡಿಯಲ್ಲಿ ಕುಳಿತಿರುವನು. ಅವನನ್ನು ಕರೆತರಲು ವಾದ್ಯಗಳೊಂದಿಗೆ ಆರತಿ ಹಿಡಿದುಕೊಂಡು ಕೆಲವರು ಹೋಗುವರು. ದೇವರ ಗುಡಿಯಲ್ಲಿ ದೀಪ ಹಚ್ಚಿ ನಮಸ್ಕರಿಸಿ ವಾದ್ಯಗಳನ್ನು ಬಾರಿಸುತ್ತ ಅವನನ್ನು ಕರೆತರುವರು. ಹಂದರದಲ್ಲಿನ ಮುಂದಿನ ಮಧ್ಯದಲ್ಲಿರುವ ಕಂಬದ ಪಕ್ಕದಲ್ಲಿ ಅದನ್ನು ನೆಡುವರು. ಮೊದಲು ಸ್ವಲ್ಪ ತಗ್ಗು ತೋಡಿ ಅದರಲ್ಲಿ ಹಾಲು, ತುಪ್ಪ ಚೂರು ಚಿನ್ನ ಬೆಳ್ಳಿ ಮುತ್ತು ಯಾವುದಾದರೊಂದು ಹಾಕಿ ನೆಡುವರು. ಅವನಿಗೆ ಹಂದರದಲ್ಲಿಯೇ ಕೂಡಿಸಿ ಸಿಹಿಯೂಟ ಮಾಡಿಸುವರು.

**ಬಾಸಿಂಗ ತರುವುದು:** ಹೂಗಾರರ ಮನೆಗೆ ಕಳಸಗಿತ್ತಿ ಇತರೆ ಮುತ್ತೈದೆಯರು ಮಕ್ಕಳು ಗಂಡಸರು ಕೂಡಿ, ಮುಂದೆ ವಾದ್ಯ ಬಾರಿಸುವವರು, ಹಿಂದೆ ಇವರೆಲ್ಲರೂ ಹೋಗುವರು. ಈ ಮೊದಲೇ ಹೂಗಾರರಿಗೆ ಸೂಚನೆ ಕೊಟ್ಟಿರುತ್ತಾರೆ. ಹೀಗಾಗಿ ಅವರು ಮೊದಲೇ ಬಾಸಿಂಗ ದಂಡಿ ಕಟ್ಟಿ ತಯಾರು ಮಾಡಿ ಇಟ್ಟಿರುತ್ತಾರೆ. ಹೂಗಾರರಿಗೆ ಹಿಟ್ಟು, ಅಕ್ಕಿ, ಬೆಲ್ಲ, ಬೇಳೆ ಮುಂತಾದ ಧಾನ್ಯಗಳ 'ಪಡಿ' ಕೊಟ್ಟು ಅವನಿಂದ

ಮಾಡಲ್ಪಟ್ಟ ಹೂವಿನ ಹಾರ, ದಂಡಿ ಬಾಸಿಂಗಗಳನ್ನು ಹೊಸ ಮೊರದಲ್ಲಿರಿಸಿದ ಮೇಲೆ ಹೊಸ ಬಟ್ಟೆ ಹೊದಿಸಿ ಮುಚ್ಚಿಕೊಂಡು ಬರುತ್ತಾರೆ.

**ಐರಾಣಿ ಕೊಡ ತರುವುದು:** ಸುರಗಿ ನೀರಿಗೆ ಬೇಕಾಗುವ ಎರಡು ಗಡಿಗೆ, ನಾಲ್ಕು ಸಣ್ಣ ಮಗಿಗಳು, ಅವುಗಳ ಮೇಲೆ ಮುಚ್ಚಳ ಇವುಗಳನ್ನು ಕುಂಬಾರನ ಮನೆಯಿಂದ ತರುವರು. ಈಗಲೂ ವಾದ್ಯ ಮೇಳ ಕಳಸಗಿತ್ತಿ, ಮಕ್ಕಳು, ಮುತ್ತೈದೆಯರು, ಇಬ್ಬರು ದಂಪತಿಗಳು ಹೋಗುತ್ತಾರೆ. ಇವನಿಗೂ ಅಕ್ಕಿ, ಬೇಳೆ, ಬೆಲ್ಲ ಮುಂತಾದ ಧಾನ್ಯಗಳ 'ಪಡಿ' ಕೊಟ್ಟು ತರುವರು. ಕುಂಬಾರನ ಮನೆಯ ಅಂಗಳದಲ್ಲಿ ಒಂದು ಕಂಬಳಿ ಹಾಸಿ ಅದರ ಮೇಲೆ ಅವುಗಳನ್ನೆಲ್ಲ ಇಟ್ಟಿರುವರು. ಪೂಜಿಸಿಟ್ಟ ಐರಾಣಿಗಳನ್ನು ತರುವರು. ತಂದವರಿಗೆ ಗಂಡನಿಗೆ ಶಲ್ಯ ಟೊಪ್ಪಿಗೆ, ಹೆಂಡತಿಗೆ ಒಂದು ಕುಪ್ಪಸದ ಕಣ ಕೊಡುವರು. ಮುಂದೆ ಮದುವೆಯಾದ ಒಂದು ವರುಷದವರೆಗೂ ಹೊಸ ಮಡಕೆಗಳನ್ನು ತರುವುದಿಲ್ಲ.

**ಎದುರು ನೀರು ತರುವುದು:** ಸುರಗಿಯ ಕೊಡಗಳು ಕುಂಬಾರನ ಮನೆಯಿಂದ ತಂದ ಮೇಲೆ ಬಾವಿಗೆ ನೀರು ತರಲು ಹೋಗುವರು. ಇದಕ್ಕೆ "ಗಂಗಿ ಪೂಜೆಗೆ" ಹೋಗುವುದು ಎಂದು ಕರೆಯುತ್ತಾರೆ. ಈಗಲೂ ವಾದ್ಯಗಳು, ಕಳಸಗಿತ್ತಿ ಐದು ಜನ ಕೊಡ ಹೊರುವಂಥ ಮುತ್ತೈದೆಯರು, ಐದು ತಾಮ್ರದ ಕೊಡಗಳನ್ನು ತೆಗೆದುಕೊಂಡು ಹೋಗುವುದು. ಮಕ್ಕಳು ಗಂಡಸರೂ ಜೊತೆಯಲ್ಲಿ ಇದ್ದೇ ಇರುತ್ತಾರೆ. ಬಾವಿಗೆ ಹೋದ ಮೇಲೆ ನೀರು ಸೇದುವ ಗಿರಿಕಿಯ ಭಾಗದಲ್ಲಿ ಇರುವ ಹೊಸ್ತಿಲಂಥ ಕಟ್ಟೆಗೆ ಸ್ವಲ್ಪವೇ ನೀರು ಸೇದಿಕೊಂಡು ತೊಳೆಯುವರು. ವಿಭೂತಿ ಕುಂಕುಮ ಹಚ್ಚಿ ವೀಳ್ಯದೆಲೆಯ ಮೇಲೆ ನೆನೆ ಹಾಕಿದ ಕಡಲೆಬೇಳೆ ಇಟ್ಟು ಪೂಜಿಸಿ ಊದಿನ ಕಡ್ಡಿಯಿಂದ ಬೆಳಗಿ ಕೊಡಗಳನ್ನು ತುಂಬಿಕೊಂಡು ಅವುಗಳಿಗೂ ಕುಂಕುಮ ಹೂಗಳಿಂದ ಪೂಜಿಸಿ ಮನೆಗೆ ಹೊತ್ತುಕೊಂಡು ಬರುವರು. ಮದುವೆಯ ಮನೆ ತಲುಪುವವರೆಗೂ ಹಾಡುತ್ತ ಬರುವರು. 'ಜಲವು' ದೇವತೆಯ ಸಮಾನ. ಮದುಮಕ್ಕಳನ್ನು ಕೂಡಿಸಿ ನೀರೆರೆಯಲು ಬಾವಿಗೆ ಪೂಜೆ ಸಲ್ಲಿಸಿ, ಪವಿತ್ರವಾದ ನೀರು ತಂದರೆ ಒಳಿತಾಗುವುದೆಂಬ ಕಾರಣವೂ ಇದ್ದಿರಬೇಕು.

**ಅರಿಸಿಣ ಎಣ್ಣೆ ಹಚ್ಚುವ ಕಾರ್ಯ:** ವಧುವರರಿಬ್ಬರನ್ನು ಕೂಡಿಸಿ ಮಾಡುವ ಮೊದಲ ಶಾಸ್ತ್ರವಿದು. ಮನೆಯ ಅಂಗಳದಲ್ಲಿ ಹಂದರದ ಮುಂದೆ ನಾಲ್ಕಾರು ಜನ ಒಳಗೆ ಕುಳಿತುಕೊಳ್ಳುವಂತೆ ಚಚ್ಚೌಕಾಕಾರದ ಸ್ಥಳದಲ್ಲಿ ನಾಲ್ಕು ಮೂಲೆಗೆ ನಾಲ್ಕು ಮಗಿಗಳು ಮುಂದಿನ ಸಾಲಿನಲ್ಲಿ ಮಧ್ಯದಲ್ಲೊಂದು ಮಗಿ ಅಥವಾ ತಂಬಿಗೆ ಮಧ್ಯದಲ್ಲೊಂದು ಕಳಸ ಇಡುವರು. ಇವುಗಳ ಕೆಳಗೆ ಅಕ್ಕಿ ಇಲ್ಲವೆ ಜೋಳ ಹಾಕಿ ಇಟ್ಟಿರುತ್ತಾರೆ. ಸುರಗಿ ಸುತ್ತುವುದಕ್ಕಾಗಿಯೇ ಇರುವ ವಿಶಿಷ್ಟವಾದ ದಾರವನ್ನು ತೆಗೆದುಕೊಂಡು ಬಲದಿಂದ ಸುತ್ತುತ್ತ ಐದು ತಂಬಿಗೆಗಳು, ಮಣೆಗಳನ್ನು ಇಟ್ಟಿರುತ್ತಾರೆ. ದಾರ ಸುತ್ತಿರುವುದಕ್ಕೆ ಸುರಗಿ ಎಂದು ಕರೆಯುವರು. ಸುರಗಿಯ ದಾರ ತುಳಿಯಬಾರದು ನೆಲಕ್ಕೆ ತಾಗುವಂತೆಯೂ ಹಿಡಿಯಬಾರದು. ಮದುಮಕ್ಕಳು ಬರುವವರೆಗೆ ಸುರಗಿ ಸುತ್ತಿದ ಒಳಗೆ ಎಂಟು ಅಥವಾ ಹತ್ತು ವರುಷದ ಮಕ್ಕಳನ್ನು ಕೂಡಿಸುತ್ತಾರೆ. ಮದುಮಕ್ಕಳು ಬರುವಾಗ ಎರಡೆರಡು ವೀಳ್ಯದೆಲೆಯ ಮೇಲೊಂದು ಅಡಿಕೆ ಇಟ್ಟು ಸುರಗಿಗೆ ನಮಸ್ಕರಿಸಿ ಬಲಗಾಲು ಮುಂದಿಟ್ಟು ಒಳಗೆ ಬರುವರು. ವರನನ್ನು ಬಲಕ್ಕೆ ವಧುವಿಗೆ ಎಡಗಡೆ ಕೂಡಿಸುವರು. ಒಂದು ಬಟ್ಟಲಲ್ಲಿ

ಕೊಬ್ಬರಿ ಎಣ್ಣೆ ಇಲ್ಲವೆ ಹಾಲು ತುಪ್ಪಗಳನ್ನು ಹಾಕಿ ತಲೆಗೆ ತಾಗುವಂತೆ ಐದು ಜನ ಮುತ್ತೈದೆಯರು ದಂಡಿಗೆ ಹಿಡಿದು ಹಾಡುತ್ತಾ ಮೊದಲು ವರನಿಗೆ ಅನಂತರ ವಧುವಿಗೆ ಎಣ್ಣೆ ಹಚ್ಚುವರು. ಕೈಯಲ್ಲಿ ಸ್ವಲ್ಪ ಅರಿಶಿಣ ತೆಗೆದುಕೊಂಡು ನೀರು ಹಾಕಿ ವಧುವರರಿಗೂ ಮುಖ ಕೈ ಕಾಲುಗಳಿಗೆ ಅರಿಶಿಣ ಹಚ್ಚುವರು. ಅನಂತರ ಧಾರಾಕಾರವಾಗಿ ನೀರು ಹಾಕಿ ಹೊಸ ಬಟ್ಟೆ ತೊಡಿಸಿ ವರನಿಗೆ ಬಾಸಿಂಗ ಕಟ್ಟುವರು. ವಧುವಿಗೆ ಸೀರೆ ಕುಪ್ಪಸ ಮಾಡಿ, ದಂಡಿ ಬಾಸಿಂಗ ಕಟ್ಟಿ ಉಡಿಯಲ್ಲಿ ಒಂದು ಕೊಬ್ಬರಿಯಲ್ಲಿ ಅರಿಶಿಣ ಕೊಂಬು, ಒಂದು ಹಿಡಿ ಅಕ್ಕಿ ಕಾಳು, ಒಂದೊಂದು ಉತ್ತತ್ತಿ, ಬಾದಾಮಿ ಹಾಕಿ ಉಡಿಯಲ್ಲಿ ಕಟ್ಟುವರು. ಮೊದಲು ಐದು ದಿನಗಳ ಮದುವೆ ಮಾಡುವುದರಿಂದ 'ಅರಿಶಿಣ ಹಚ್ಚುವ ಕಾರಣ' ಒಂದು ದಿನ ಮಾಡುತ್ತಿದ್ದರು. ಆದರೆ ಈಗ ಮದುವೆಗಳು ಒಂದೇ ದಿನದಲ್ಲಿ ಮುಗಿಯುವುದರಿಂದ ಅರಿಶಿಣ ಹಚ್ಚುವುದು ತಾಯಿ ಮಕ್ಕಳು ಮೀಯುವುದು ಏಕಕಾಲಕ್ಕೆ ಮಾಡುತ್ತಾರೆ. ಮದುಮಕ್ಕಳು ಸುರಗಿಯ ಒಳಗೆ ಬರುವಾಗ ವಧುವರರ ಕೈ ಹಿಡಿದು ಅವರ ತಾಯಿ, ಚಿಕ್ಕಮ್ಮ, ಅತ್ತಿಗೆ, ಅಕ್ಕ ಯಾರಾದರೊಬ್ಬರು ಬರುವರು. ಮದುಮಕ್ಕಳಿಗೂ ಹಾಕಿ ಹೊಸ ಸೀರೆ ರವಿಕೆ ಕಣ ಕೊಟ್ಟು ದಂಡಿ ಕಟ್ಟಿ ಕಂಕಣ ಕಟ್ಟುವರು. ಕಂಕಣ ಕಟ್ಟಿಯಾದ ಮೇಲೆ ಸೋದರಮಾವ ವಧುವರರನ್ನು ಒಳಗೆ ಕರೆದುಕೊಂಡು ಹೋಗುವನು.

**ಅಕ್ಕಿ ಕಾಳು ಹಾಕುವುದು:** ಅಕ್ಷತಾರೋಹಣ, ಮಾಂಗಲ್ಯಧಾರಣವೆಂತಲೂ ಕರೆಯುತ್ತಾರೆ. ಮದುಮಕ್ಕಳಿಗೆ ಹೊಸ ಬಟ್ಟೆ ಉಡಿಸುತ್ತಾರೆ. ಕೆಲವೊಮ್ಮೆ ಅರಿಶಿಣ ಹಚ್ಚಿದ ಬಟ್ಟೆಯಲ್ಲಿಯೇ ಅಕ್ಕಿ ಕಾಳು ಹಾಕಿ ಅನಂತರ ಇನ್ನೊಂದು ಜೊತೆ ಬಟ್ಟೆ ತೊಡಿಸುವ ಸಂಪ್ರದಾಯವೂ ಇದೆ. ಹೊರಗೆ ನೆರೆದ ಎಲ್ಲರಿಗೂ 'ಅಕ್ಕಿ ಕಾಳು' ಕೊಟ್ಟಿರುತ್ತಾರೆ. ಅಯ್ಯನವರು ಇಲ್ಲವೇ ಪುರೋಹಿತ ಮಂಟಪದಲ್ಲಿ ಕುಳಿತಿರುವರು. ಅವರ ಎದುರಿಗೆ ವಧುವರರಿಬ್ಬರನ್ನು ಕರೆತಂದು ಕೂಡಿಸುವರು. ಅಯ್ಯನವರು ಕೊಬ್ಬರಿ ಬಟ್ಟಲಂತಿರುವ ತಾಳಿ (ಕರಿ ಮಣಿ ಸರದಲ್ಲಿ ಮಧ್ಯದಲ್ಲಿ ಬಂಗಾರದ ಚಿಕ್ಕ ಆಕಾರದ ಬಟ್ಟಲನಂತಿರುವ ತಾಳಿ ಹಾಕಿ ಪೋಣಿಸಿದುದಕ್ಕೆ ತಾಳಿ ಎನ್ನುತ್ತಾರೆ) ಕಾಲುಂಗುರಗಳನ್ನಿಟ್ಟು ದೈವದವರಿಗೆಲ್ಲ ತೋರಿಸುವರು. ಅವರೆಲ್ಲ ಮುಟ್ಟಿ ನಮಸ್ಕರಿಸಿದ ಮಾಂಗಲ್ಯ ಪವಿತ್ರವಾದುದೆಂಬ ಕಾರಣವಿರಬೇಕು. ನೆರೆದ ಜನರಿಂದ ನಮಸ್ಕರಿಸಲ್ಪಟ್ಟ ಕೊಬ್ಬರಿಯಲ್ಲಿಯ ಮಾಂಗಲ್ಯವನ್ನು ವರನ ಕೈಗೆ ಕೊಡಲಾಗುವುದು. 'ಸುಲಗ್ನೆ ಸಾವಧಾನ' ಮಂತ್ರವನ್ನೋದುತ್ತಿರುವಂತೆ ವರನಿಗೆ ವಧುವಿನ ಕೊರಳಲ್ಲಿ ಮಾಂಗಲ್ಯ ಕಟ್ಟುವಂತೆ ಹೇಳುತ್ತಾರೆ. ಮಾಂಗಲ್ಯ ಕಟ್ಟುವಾಗಲೇ ನೆರೆದ ಜನರೆಲ್ಲ ವಧುವರರ ಮೇಲೆ ಅಕ್ಕಿಕಾಳು ಹಾಕುತ್ತಾರೆ. ವಧುವಿನ ಕಾಲಿನ ಎರಡನೆಯ ಬೆರಳಿಗೆ ಕಾಲುಂಗುರ ತೊಡಿಸುವರು. ಅಕ್ಕಿಕಾಳು ಹಾಕುವ ಉದ್ದೇಶ ನೆರೆದ ಜನರ ಸಾಕ್ಷಿಯಾಗಿ ಮದುವೆಯಾಯಿತು ಎಂಬುದು ಒಂದಾದರೆ, ಹಿರಿಯರೆಲ್ಲರ ಆಶೀರ್ವಾದ ನವದಂಪತಿಗಳಿಗಿರಲಿ, ಅವರೆಲ್ಲರ ಆಶೀರ್ವಾದದಿಂದ ಇವರ ದಾಂಪತ್ಯ ಸುಖಮಯವಾಗಲಿ ಎಂಬ ಹಾರೈಕೆ ಇನ್ನೊಂದಾಗಿದೆ.

ತಾಳಿ ಕಟ್ಟುವುದು ಮದುವೆಯ ಮಹತ್ವದ ಘಟ್ಟ. ಪತಿಯ ಕೈಯಿಂದ ಕುತ್ತಿಗೆಗೆ ಕಟ್ಟಿಸಿಕೊಂಡ ತಾಳಿ ಹೆಣ್ಣಿಗೆ ಬಂಧನದ ಸಂಕೇತವೆಂದೂ ಹೇಳುತ್ತಾರೆ. ಕುತ್ತಿಗೆಯವರೆಗೆ ಕಷ್ಟಗಳ ಸರಮಾಲೆಯೇ ಬರಲಿ, ಹೆಂಡತಿಯಾದವಳು ಅವುಗಳನ್ನೆಲ್ಲ ತಾಳಿಕೊಂಡು ಗೃಹಸ್ಥ ಧರ್ಮ ಪಾಲಿಸಲು ಬದ್ಧಳಾಗುವುದು ಇವರ

ಒಂದು ಉದ್ದೇಶವಿರುವಂತಿದೆ. ಹೆಣ್ಣಿಗೆ ಮದುವೆಯಾದುದರ ಸಂಕೇತವಾದ ಮಾಂಗಲ್ಯ ಮತ್ತು ಕಾಲುಂಗುರಗಳು, ಸೌಭಾಗ್ಯದ ವಸ್ತುಗಳಾಗಿವೆ. ತಾಳಿ ಕಟ್ಟಿದ ಮೇಲೆ ನೆರೆದ ಜನರೆಲ್ಲ ಅಕ್ಷತೆ ಹಾಕಿ ಆಶೀರ್ವದಿಸಿ, ಇಷ್ಟ ಮಿತ್ರರು ನೆರೆದವರೆಲ್ಲ ವಧುವರರಿಗೆ ಕಾಣಿಕೆ(ಉಡುಗೊರೆ)ಗಳನ್ನು ಕೊಡುವರು. ಅವರ ತಂದೆ ತಾಯಿ, ಅಣ್ಣ ಅತ್ತಿಗೆ ತಮಗೆ ಬೇಕಾದವರಿಗೆಲ್ಲ ಬಟ್ಟೆಗಳನ್ನು ಉಡುಗೊರೆಯಾಗಿ ಕೊಡುವರು. ವರನಿಗೆ ಬಂಗಾರ, ಕೈಗಡಿಯಾರ ವರದಕ್ಷಿಣೆ ಏನೆಲ್ಲಾ ಕೊಡಬೇಕಾಗಿದೆಯೋ ಅದನ್ನೆಲ್ಲ ಇದೆ ಸಮಯದಲ್ಲಿ ವಧುವಿನ ತಂದೆ ಅಥವಾ ಅಣ್ಣ ಕೊಡುವರು.[೨೭]

**ಧಾರೆ ಎರೆಯುವುದು:** ದಾನ ಧರ್ಮಗಳನ್ನು ಮಾಡುವಾಗ ನೀರನ್ನು ಧಾರೆಯಾಗಿ ಹರಿಸಿ ಕೊಡುವುದು ಸಂಪ್ರದಾಯ. ಮದುವೆಯೂ ಕನ್ಯಾದಾನವೆಂದು ತಿಳಿದು ಈ ಸಂಪ್ರದಾಯವಿಟ್ಟಿರಬೇಕು. ದಾನದ ವಸ್ತುಗಳಲ್ಲಿ 'ಹೆಣ್ಣು' ಕೂಡ ಒಂದೆಂದು ಪರಿಗಣಿಸಲಾಗಿದೆ. ಅಕ್ಕಿ ಕಾಳು ಹಾಕಿದ ಮೇಲೆ ವಧುವಿನ ಅಣ್ಣ ಅತ್ತಿಗೆ, ಸೋದರಮಾವ, ಅವನ ಹೆಂಡತಿ, ಚಿಕ್ಕಪ್ಪ, ಚಿಕ್ಕಮ್ಮ ಅಥವಾ ತಂದೆ–ತಾಯಿ ಯಾರಾದರೊಬ್ಬರು ದಂಪತಿಗಳಿಗೆ ವರನ ಪಕ್ಷದವರು ಬಟ್ಟೆ ತಂದಿರುತ್ತಾರೆ. ಆ ಹೊಸ ಬಟ್ಟೆಗಳನ್ನುಟ್ಟುಕೊಂಡು ಒಂದು ತಟ್ಟೆ ಹಾಗೂ ಒಂದು ತುಂಬಿದ ಕೊಡ ಇಲ್ಲವೆ ತಂಬಿಗೆಯಲ್ಲಿ ನೀರು ತರುವರು. ವಧು ವರರ ಕಾಲು ತೊಳೆದು ಕುಂಕುಮ ಹಚ್ಚಿ ನಮಸ್ಕರಿಸುವರು. ತಮ್ಮ ಮಗಳನ್ನು ಒಳ್ಳೆಯ ರೀತಿಯಿಂದ ನೋಡಿಕೊಳ್ಳಬೇಕೆಂದು ವಧುವಿನ ಬಂಧುಗಳು ಬೇಡಿಕೊಂಡಂತೆ ಇದೆ ಈ ಕಾರ್ಯಕ್ರಮ. ಧಾರೆ ಎರೆದ ಮೇಲೆ ಮದುವೆಯ ಮುಖ್ಯ ಕಾರ್ಯಗಳು ಮುಗಿದಂತಾಗುವುದು. ಉಳಿದ ಚಿಕ್ಕ ಪುಟ್ಟ ಕಾರ್ಯಕ್ರಮಗಳು ಇರುತ್ತವೆ.

**ಭೂಮ ಕೊಡುವುದು:** ಮದುವೆಯ ಮುಖ್ಯ ಪ್ರಕ್ರಿಯೆಗಳೆಲ್ಲ ಮುಗಿದ ಮೇಲೆ ಒಂದೆರಡು ತಾಸುಗಳ ನಂತರ ಹೆಣ್ಣಿನವರು ತಾವು ಇಳಿದುಕೊಂಡಿರುವ ಬಿಡಕಿಯ ಮನೆಯಿಂದ ಬಗೆ ಬಗೆಯ ಅಡುಗೆ ಮಾಡಿ ತಂದು ಕೊಡುವರು. ಭೂಮಿಯ ಪೂಜೆಯೇ ಭೂಮವಾಗಿದೆ. ಎಲ್ಲ ರೀತಿಯ ಅಡುಗೆ ಪದಾರ್ಥಗಳಿರು ವುದರಿಂದ ನವ ದಂಪತಿಗಳ ಮುಂದಿನ ಜೀವನದಲ್ಲಿ ಸಿಹಿ ಕಹಿಗಳೆದುರಾದರೂ ಸಮಭಾವದಿಂದ ಸ್ವೀಕರಿಸಬೇಕೆಂದು ಷಡ್ರಸ್ನಾನಗಳನ್ನು ಒಳಗೊಂಡಿರುವ ಊಟವಾಗಿದೆ. ಇದೊಂದು ರೀತಿಯ ಮದುವೆಯ ಶಾಂತಿ ಎಂದೇ ಹೇಳಬಹುದು. ಈವರೆಗೂ ಸಾಂಗವಾಗಿ ಜರುಗಿದ ಮದುವೆಯ ಕೊನೆಗೆ ಬೀಗರು, ಊರ ಹಿರಿಯರು ಒಂದುಗೂಡಿ ಊಟ ಮಾಡುವುದರಿಂದ ಸಾಮರಸ್ಯದ ಜೊತೆಗೆ ನವದಂಪತಿಗಳ ಮುಂದಿನ ಜೀವನ ಸುಖಮಯವಾಗಿ ಸಾಗಲಿ ಎಂದು ಹರಸುವ ಧೋರಣೆ ಇದ್ದಂತಿದೆ.

ಭೂಮ ಕೊಡುವುದರಲ್ಲೂ ಹಲವಾರು ವಿಧಗಳಿವೆ. ಎರಡೆರಡು ಸಲ ಭೂಮ ಕೊಡುವುದೂ ಉಂಟು. 'ಶಾಸಿ ಭೂಮ', 'ಮೆರವಣಿಗೆಯ ಭೂಮ'ವೆಂದು ಎರಡು ಸಲ ಭೂಮ ಕೊಡುವ ಪದ್ಧತಿಯೂ ಇದೆ. ನೆಲಭೂಮ, ಬುಟ್ಟಿ ಭೂಮವೆಂದು ಇನ್ನೊಂದು ರೀತಿಯಾಗಿಯೂ ಕೊಡುವರು. ಬುಟ್ಟಿಭೂಮವೆಂದರೆ ಬುಟ್ಟಿಯಲ್ಲಿ ಹೋಳಿಗೆ, ಹಪ್ಪಳ, ಸಂಡಿಗೆ, ತುಪ್ಪ, ಅನ್ನ, ಬದನೆಕಾಯಿ ಪಲ್ಯ ಮೊದಲಾದವುಗಳನ್ನು ಇಟ್ಟುಕೊಂಡು ತರುವರು. ನೆಲಭೂಮದಲ್ಲಿ ಮದುವೆ ಮನೆಯ ದೇವರ ಕೋಣೆಯಲ್ಲಿ ಒಂದು ಕಂಬಳಿ ಹಾಸಿ, ಅದರ ಮೇಲೆ ಶುಭ್ರ ವಸ್ತ್ರ ಹರಡಿ ಹೋಳಿಗೆ, ತುಪ್ಪ, ಹಪ್ಪಳ ಮುಂತಾದವುಗಳನ್ನು ಇಟ್ಟಿರುವರು.

ಊರ ಅಥವಾ ಜಾತಿಯ ಪ್ರಮುಖರು, ಬಂಧುಗಳು ಊಟ ಮಾಡಿದ ಮೇಲೆಯೇ ಉಳಿದವರು ಭೂಮದ ಊಟ ಮಾಡಬೇಕು. ಅಲ್ಲಿಯವರೆಗೆ ಇತರರು ಊಟ ಮಾಡುವಂತಿಲ್ಲ. ಕೆಲವು ಪ್ರದೇಶದಲ್ಲಿ ಅಡುಗೆ ಮಾಡದೇ ಒಣಭತ್ತ ಕೊಡುವ ಸಂಪ್ರದಾಯವಿದೆ.

**ಕೂಸೊಪ್ಪಿಸುವುದು:** ಮದುವೆಯಾದ ಮೇಲೆ ಮಗಳನ್ನು ಗಂಡನ ಮನೆಗೆ ಕಳುಹಿಸುವ ಸಂಪ್ರದಾಯ ಎಲ್ಲೆಡೆಗೂ ಇದೆ. ಮದುವೆ ಕಾರ್ಯಕ್ರಮಗಳು ಮುಗಿಯುತ್ತಿರುವಂತೆಯೇ ಹೆಣ್ಣಿನವರು ತಮ್ಮ ಊರಿಗೆ ಹೊರಡುವ ತಯಾರಿ ಮಾಡುವ ಮೊದಲು ತಮ್ಮ ಮಗಳನ್ನು ಗಂಡನ ಮನೆಯಲ್ಲಿ ಬಿಟ್ಟು ಹೋಗಬೇಕಾದ ಸಂದರ್ಭದಲ್ಲಿ ಹೆಣ್ಣಿನವರ ಆತಂಕ ಹೇಳತೀರದು. ಇಷ್ಟು ದಿನಗಳವರೆಗೆ ಸಾಕಿ ಸಲುಹಿದ ಮಗಳನ್ನು ಹೊಸದಾಗಿರುವ ಬೀಗರ ಹತ್ತಿರ ಬಿಟ್ಟು ಹೋಗಬೇಕಾದಾಗ ಒಂದು ಕಡೆ ಸಂಭ್ರಮ ಇನ್ನೊಂದು ಕಡೆ ಆತಂಕವಿರುತ್ತದೆ. ಹೆಣ್ಣು ಹಡೆಯಲೇಬಾರದೆಂಬ ಭಾವನೆ ಬರುತ್ತದೆ. ಗಂಡು ಹುಟ್ಟಿದರೆ ಒಬ್ಬ ಸೊಸೆ ಮನೆಗೆ ಬರುವಳು. ಅದು ಮಗಳು ಬಂದಂತೆಯೇ. ಆದರೆ ಹೆಣ್ಣು ಹೆತ್ತವರು ತಮ್ಮ ಮಗಳನ್ನು ಕಳುಹಿಸಬೇಕಲ್ಲಾ "ಹೆಣ್ಣಿನ ಜನ್ಮ ಸುಡಲಿ" ಎಂದು ಉದ್ಗಾರ ತೆಗೆದಿದ್ದಾರೆ. ಆದರೂ ಮಗಳನ್ನು ಹಡೆದ ಮೇಲೆ ಗಂಡನ ಮನೆಗೆ ಕಳುಹಿಸಬೇಕಲ್ಲ. ಅತ್ತೆ, ನಾದಿನಿಯರು, ನೆಗೆಣ್ಣೆ(ಅಕ್ಕತಂಗಿಯರು)ಯರಿಗೆಲ್ಲ ತಮ್ಮ ಮಗಳನ್ನು ಚೆನ್ನಾಗಿ ನೋಡಿಕೊಳ್ಳಿರಿ ಎಂದು ಎಲ್ಲರಿಗೂ ಹೇಳಿ ತಮ್ಮ ದುಗುಡ, ಆತಂಕವನ್ನು ಸಂತೈಸಿಕೊಂಡು ಮಗಳಿಗೆ ಕೂಡ ಬುದ್ಧಿವಾದ ಹೇಳುವರು.

**ಮೆರವಣಿಗೆ:** ಹೆಣ್ಣಿನ ಮನೆಯಲ್ಲಿ ಮದುವೆಯಾದರೆ ಮದುಮಗಳನ್ನು ಕರೆದುಕೊಂಡು ವರನ ಊರಿಗೆ ಹೊರಡುತ್ತಾರೆ. ತಮ್ಮ ಊರಿಗೆ ಹೋದ ಮೇಲೆ ದೇವಸ್ಥಾನದಿಂದ ಪ್ರಮುಖ ಓಣಿಗಳಲ್ಲಿ ಹಾದು, ಮನೆಯವರೆಗೆ ಮೆರವಣಿಗೆ ಹೋಗುತ್ತಾರೆ. ವರನ ಮನೆಯಲ್ಲಿಯೇ ಮದುವೆಯಾದರೆ ಅಕ್ಷತೆಯ ದಿನ ರಾತ್ರಿ ದೇವಸ್ಥಾನದವರೆಗೂ ಮೆರವಣಿಗೆಯಲ್ಲಿ ಹೋಗುವರು. ತೆರೆದ ಕಾರಿನಲ್ಲಿ, ಜೀಪುಗಳಲ್ಲಿ ಸಾಧ್ಯವಾಗದಿದ್ದರೆ ಹಳ್ಳಿಯಲ್ಲಿ ಎತ್ತಿನ ಬಂಡಿಯಲ್ಲಿ ಕುಳಿತು ಇಲ್ಲವೆ ಕೆಲವು ಕಡೆ ವಧುವರರನ್ನು ನಡೆಸಿಕೊಂಡೇ ಮೆರವಣಿಗೆ ಮಾಡುವರು. ಮೆರವಣಿಗೆಯ ಉದ್ದೇಶ ಮದುಮಕ್ಕಳನ್ನು ಎಲ್ಲರೂ ನೋಡಲಿ ಎಂಬುದೇ ಆಗಿದೆ. ಜೊತೆಗೆ ದೇವಸ್ಥಾನಕ್ಕೆ ಮದುಮಕ್ಕಳು ಹೋಗಿಬರಲಿ ಎಂಬುದಾಗಿದೆ. ಮೆರವಣಿಗೆಯಿಂದ ಮನೆಗೆ ಬಂದಾಗ ಮದುಮಕ್ಕಳು ದೇವರ ಮನೆಯಲ್ಲಿ ಹೋಗಿ ದೇವರಿಗೆ ನಮಸ್ಕರಿಸುವರು. ಮೆರವಣಿಗೆ ಮುಗಿದ ಮೇಲೆ ಮದುಮಕ್ಕಳಿಗೆ ಯಾರಾದರೊಬ್ಬರು ಯಜಮಾನರು ದೃಷ್ಟಿ ತೆಗೆದು ಒಳಗಡೆ ಕರೆದುಕೊಳ್ಳುವರು.

**ಬಾಗಿಲ ತಡೆಯುವುದು:** ಇದೊಂದು ಆತ್ಮೀಯ ಹಾಸ್ಯಮಯವಾದ ಸನ್ನಿವೇಶ. ಬಾಗಿಲಲ್ಲಿ ನಿಂತವಳ ಅಣ್ಣ ಇಲ್ಲವೇ ತಮ್ಮ ಈಗ ತಾನೆ ಮದುವೆಯಾಗಿದ್ದಾನೆ. ಆದರೆ ಅವನಿಗೆ ಹುಟ್ಟುವ ಮೊದಲ ಮಗಳನ್ನು ತನ್ನ ಮಗನಿಗೆ ಕೊಡಬೇಕೆಂದು ಈಗಲೇ ಭಾಷೆ ಕೇಳುತ್ತಾಳೆ. ಈ ಸನ್ನಿವೇಶದಲ್ಲಿ ಅಕ್ಕ ತಂಗಿಯ ಪ್ರೀತಿಯ ಜೊತೆಗೆ ಅತ್ತಿಗೆ ತಮ್ಮನ್ನೆಲ್ಲಿ ದೂರ ಮಾಡುವಳೋ, ಪ್ರೀತಿಯಿಂದ ಕಾಣಲಿಕ್ಕಿಲ್ಲವೋ ಎಂಬ ಭಾವನೆಯಿಂದ, ಮಗಳನ್ನು ಕೊಟ್ಟರೆ ಬಾಂಧವ್ಯದ ಬೆಸುಗೆಯಿಂದ ಪ್ರೀತಿಯಿಂದ ತಮ್ಮನ್ನು ತವರಿಗೆ ಕರೆಯುವಳೆಂದು,

ತವರಿನ ಹಂಬಲ ಬಿಡದೆ ಈಗಲೇ ಅಣ್ಣನಿಂದ ಅಥವಾ ತಮ್ಮನಿಂದ ಮಗಳನ್ನು ಕೊಡುವನೆಂಬ ಭಾಷೆ ಪಡೆಯುವಲ್ಲಿ ಸೋದರಿಯ ಪ್ರೀತಿ ವ್ಯಕ್ತವಾಗುತ್ತದೆ. ಇಲ್ಲಿ ಅಣ್ಣ ತಂಗಿಯರ ಸರಸ ಪ್ರೀತಿ ಹಾಸ್ಯದ ಜೊತೆಗೆ ವಾತ್ಸಲ್ಯವನ್ನು ಕಾಣುತ್ತೇವೆ. ಅದೇ ರೀತಿ ಭೂಮಿ, ಸೀಮೆ, ಭತ್ತ, ಭರಣ, ಆಕಳು, ಎಮ್ಮೆ, ಎತ್ತು ಕೊಡುವೆ ಬಾಗಿಲ ಬಿಡು ಎಂದು ನಾನಾ ರೀತಿಯಲ್ಲಿ ಕೇಳಿಕೊಳ್ಳುವನು. ಕೊನೆಗೆ ಮುತ್ತಿನಂಥ ನನ ಮಗಳ ಕೊಡುವೆ ಬಾಗಿಲ ಬಿಡು ನನ್ನ ತಂಗಿ–ಅಕ್ಕ ಎಂದು ಹೇಳಿದ ಮೇಲೆ ಬಾಗಿಲ ಒಳಗೆ ಮದುಮಕ್ಕಳನ್ನು ಬಿಡುವರು.

**ಆರತಿ ಮಾಡುವುದು:** ಪ್ರತಿಯೊಂದು ಕಾರ್ಯಕ್ರಮಗಳಲ್ಲಿ ಕೊನೆಗೆ ಆರತಿ ಮಾಡಿಯೇ ಆ ಸಮಾರಂಭ ಗಳನ್ನು ಮುಗಿಸುವರು. ಆರತಿಯ ಉದ್ದೇಶ ಅಮಂಗಳ ನಿವಾರಣೆ ಮತ್ತು ಶುಭ ಹಾರೈಕೆ. ಕ್ರೂರ ಕಣ್ಣಿನವರ ದೃಷ್ಟಿ ತಾಗಿದರೆ ಕಲ್ಲು ಕೂಡ ಸೀಳುತ್ತದೆ. ನಳನಳಿಸುವ ಮರ ಒಣಗಿ ಬೀಳುತ್ತದೆ. ಮಕ್ಕಳು ಅತ್ತು ರಂಪ ಮಾಡುತ್ತವೆಂಬ ನಂಬಿಕೆ ಜನಮನದಲ್ಲಿ ಬೇರೂರಿದೆ. ಅದರಂತೆ ಮದುವೆ ಮುಂತಾದ ಸಂದರ್ಭಗಳಲ್ಲಿ ವಧುವರರಿಗೆ ಯಾವ ಕೆಡುಕು ಆಗದಿರಲಿ, ಮಂಗಳದ ಜೊತೆಗೆ ಕ್ರೂರದೃಷ್ಟಿ ದೋಷ ಪರಿಹಾರವಾಗಲಿ ಎಂಬ ಉದ್ದೇಶದಿಂದ ಆರತಿ ಮಾಡುವರು. ಅಲ್ಲದೆ ದೀಪ ಬೆಳಗುವುದು ಹಿಂದೂ ಸಂಸ್ಕೃತಿಯಲ್ಲಿ ಶುಭದಾಯಕವೆಂದು ನಂಬಿಕೆ ಇದೆ.

**ಗಂಡನ ಹೆಸರು ಕೇಳುವುದು:** ಪ್ರತಿಯೊಂದು ಸಂತೋಷದ ಸಮಾರಂಭದಲ್ಲಿ ಆರತಿ ಮಾಡಿದ ಮೇಲೆ ಅಲ್ಲಿ ಸೇರಿರುವ ಹೆಂಗಳೆಯರೆಲ್ಲ ಮೊದಲು ಆರತಿ ಮಾಡುತ್ತಿರುವವರಿಗೆ, ಅನಂತರ ಮಾಡುವವರಿಗೆ, ಗಂಡನ ಹೆಸರು ಕೇಳುವರು. ಉಳಿದವರಿಗೆ ಬಾಗಿಲಿನಿಂದ ಹೊರಕ್ಕೆ ಹೋಗಲು ಬಿಡದೆ ಬಾಗಿಲಿಗೆ ಅಡ್ಡವಾಗಿ ನಿಂತು ಒಬ್ಬೊಬ್ಬರ ಹೆಸರು ಕೇಳಿಯೇ ಹೊರಕ್ಕೆ ಬಿಡುವರು. ಮದುವೆಯಾದವರು ಎಷ್ಟೇ ಚಿಕ್ಕವರಿರಲಿ ಎಷ್ಟೇ ವಯಸ್ಸಾದವರಿರಲಿ ಅವರ ಗಂಡನ ಹೆಸರು ಕೇಳದೆ ಬಿಡಲಾರರು. ಬಹುವಾಗಿ ನಾಚಿಕೊಳ್ಳುವ ಸ್ವಭಾವದ ಹೆಂಗಸರಿರುವುದರಿಂದ ಒಬ್ಬರಿಗೊಬ್ಬರು ಹಿರಿಯರೆದುರಿಗೆ ಮಾತಾಡಲು ಹೆದರುವ ದಿನಗಳಲ್ಲಿ ಅವಳು ಎಲ್ಲರೆದುರಿಗೆ ಗಂಡನ ಹೆಸರು ಹೇಳಲಿ ಎಂಬ ಉದ್ದೇಶದಿಂದ, ಹೆಸರು ಕೇಳುವ ಸಂಪ್ರದಾಯ ಬೆಳೆದು ಬಂದಿರಬೇಕು. ಇಲ್ಲಿ ಮುಖ್ಯವಾಗಿರುವುದು ಹಾಸ್ಯ, ಮನೋರಂಜನೆ. ಅದೇ ರೀತಿ ಗಂಡಸರಿದ್ದರೆ ಹೆಂಡತಿಯ ಹೆಸರೂ ಕೇಳುವುದುಂಟು. ಆಗ ಕೆಲವರು ಒಗಟು ಹೇಳಿ ಹೆಸರು ಹೇಳಿದರೆ, ಕೆಲವರು ಬರೀ ಹೆಸರು ಹೇಳುವುದುಂಟು. ಹೆಂಡತಿಯ ಹೆಸರನ್ನು ಸಂಕ್ಷಿಪ್ತಗೊಳಿಸಿಯೂ ಹೇಳುತ್ತಾರೆ. ಹೆಂಗಸರು ನಾಚಿ ಮೆಲ್ಲನೆ ಹೇಳಿದಾಗ, ನಮಗೆ ಕೇಳಿಸಿಲ್ಲ ಇನ್ನೊಂದು ಸಲ ಹೇಳಿರಿ ಎಂದು ಕೇಳುವುದೂ ಉಂಟು.

**ಸೋಬನ ಕಾರ್ಯಕ್ರಮ:** ಶುಭವನ್ನು ಕೋರುವುದು ಸೋಬನವೆಂತಲೂ ಹಾಗೂ ಗಂಡ ಹೆಂಡಿರನ್ನು ಒಂದುಗೂಡಿಸುವ ಕಾರ್ಯಕ್ರಮವನ್ನು ಸೋಬನವೆಂತಲೂ ಕರೆಯುತ್ತಾರೆ. ಬಾಲ್ಯವಿವಾಹ ಪದ್ಧತಿ ಇರುವಾಗ ಮದುವೆಯಾದ ಮೇಲೆ ತವರಿನಲ್ಲಿಯೇ ಹೆಣ್ಣು ಇರುತ್ತಿದ್ದಳು. ಅವಳು ಮೈನೆರೆದ ವಿಷಯ ಗಂಡನ ಮನೆಯವರಿಗೆ ಹೇಳಿ ಕಳುಹಿಸುತ್ತಿದ್ದರು. ಹದಿನಾರನೆಯ ದಿನ ಅಥವಾ ಎರಡು ಮೂರು ತಿಂಗಳ

ನಂತರ ಈ ಕಾರ್ಯ ಇಟ್ಟುಕೊಳ್ಳುತ್ತಿದ್ದರು. ಈಗ ವಯಸ್ಕರಾದ ಮೇಲೆ ಮದುವೆಗಳು ಜರುಗುತ್ತವೆಯಾದ ಕಾರಣ ಮದುವೆಯ ದಿನದಂದು ಅಥವಾ ಎರಡು ಮೂರು ದಿನಗಳ ಒಳಗಾಗಿ ಸೋಬನ ಇಟ್ಟುಕೊಳ್ಳುವುದುಂಟು. ಹಳ್ಳಿಯಲ್ಲಿ ಸೋಬನ ಮಾಡುವ ಐದಾರು ದಿನ ಮೊದಲು ಗಂಡ ಹೆಂಡತಿಯರನ್ನು ಸಿಂಗರಿಸಿದ ಮಂಟಪದಲ್ಲಿ ಕೂಡಿಸಿ ಹಾಡಿಸುವರು. ಕೊನೆಯ ದಿನ ತಮ್ಮ ಆಪ್ತ ಬಂಧುಗಳನ್ನು ಊಟಕ್ಕೆ ಕರೆಯುವರು. ಅಳಿಯನಿಗೆ, ಮಗಳಿಗೆ ಒಂದು ಜೊತೆ ಬಟ್ಟೆಯನ್ನು ಹೆಣ್ಣಿನ ತಂದೆಯೇ ತರಬೇಕು. ಹಾಸಿಗೆ ಮಂಚ ಕೂಡ ಕೊಡುವರು. ಹೆಣ್ಣಿಗೆ ಗಂಡನ ಮನೆಯವರು ಸೀರೆ ಕುಪ್ಪಸ ತರುವರು. ಅಕ್ಕಿಕಾಳು ಉಡಿಯಕ್ಕಿ ಹಾಕಿ ತೆಂಗಿನ ಫಲಗಳನ್ನು ಉಡಿಯಲ್ಲಿ ಹಾಕುವರು. ಅವಳು ಮೈನೆರೆದಾಗ ಯಾರು ನೀರು ಹಾಕಿರುತ್ತಾರೋ ಅವಳಿಗೆ ಗಂಡನ ಮನೆಯವರು ಒಂದು ಸೀರೆ ಕುಪ್ಪಸ ಕೊಡಬೇಕು. ಆರತಿ ಮಾಡಿ ಗಂಡ ಹೆಂಡತಿಯರ ಹೆಸರು ಕೇಳುವರು. ಅನಂತರ ದೇವರ ಮನೆಯಲ್ಲಿ ದೇವರಿಗೆ ನಮಸ್ಕರಿಸಿ ದಂಪತಿಗಳು ಕೋಣೆ ಸೇರುವರು.

ಕೆಲವರ ಮನೆತನದಲ್ಲಿ 'ಸೋಬನ' ಮಾಡುವ ಸಾಂಪ್ರದಾಯವೇ ಇರುವುದಿಲ್ಲ. ಮದುವೆಯಾದ ಮೇಲೆ ಶುಭ ದಿನದಂದು ದೇವರಿಗೆ ಹೋಗಿ ಬಂದ ಮೇಲೆ ದಂಪತಿಗಳನ್ನು ಒಂದುಗೂಡಿಸುತ್ತಾರೆ. ಸೋಬನದ ಉದ್ದೇಶ ಮದುವೆಯಾದ ದಂಪತಿಗಳು, ಒಂದುಗೂಡುವುದು, ಸಂತಾನವನ್ನು ಪಡೆಯುವುದು ಒಳ್ಳೆಯ ಗೃಹಸ್ಥರಾಗುವುದಕ್ಕೆ ಅಡಿಪಾಯ ಹಾಕುವುದಾಗಿದೆ.[೨೮]

ಒಟ್ಟಾರೆಯಾಗಿ ಹೇಳಬೇಕೆಂದರೆ ಒಂದು ಹೆಣ್ಣು ಗಂಡಿನ ಜೀವನದಲ್ಲಿ ಮದುವೆಯಾಗಿ ಸೋಬನವಾಗುವರೆಗಿನ ಸಂಪ್ರದಾಯಗಳನ್ನು ಆಚರಿಸುವುದು ಒಂದು ಘಟ್ಟವಾದರೆ, ಚೊಚ್ಚಲ ಗರ್ಭಿಣಿಯಾಗಿ ಗಂಡನ ಮನೆಯ ವಂಶ ಬೆಳೆಯಿಸುವ ಘಟ್ಟ ಮುಂದಿನದು ಎಂದು ಹೇಳಬಹುದು.

### ೫.೨. ವಿವಾಹ ಬಾಹಿರ ಸಂಬಂಧಗಳು

ವಿವಾಹದ ಚೌಕಟ್ಟಿನ ಹೊರಗೆ ಇರಬಹುದಾದ ಸಂಬಂಧಗಳ ಗ್ರಹಿಕೆಯನ್ನು ನೋಡುವ ಪ್ರಯತ್ನ ಇದಾಗಿದೆ. ಹೆಂಡತಿ ಮನೆಯಲ್ಲಿದ್ದರೂ ಅವಳ ಕಣ್ಣು ತಪ್ಪಿಸಿ ಇನ್ನೊಬ್ಬಳ ಜೊತೆಗೆ ಸಂಬಂಧ ಬೆಳೆಸುವುದು. ಅದೇ ರೀತಿ ಹೆಣ್ಣು ಕೂಡ ಮದುವೆಯಾಗಿ ಗಂಡನ ಜೊತೆಗೆ ಸಂಸಾರ ಮಾಡುತ್ತಲೇ ಇನ್ನೊಬ್ಬ ಪರಪುರುಷನ ಜೊತೆ ಸಂಬಂಧ ಬೆಳೆಸುವುದು. ಮದುವೆಯಾದ ಮೇಲೆ ಇರುವ ಸಂಬಂಧಗಳ ಮುಂದುವರಿಯುವುದನ್ನು ಹಾಗೂ ಸಮಾಜದ ಚೌಕಟ್ಟನ್ನು ಮೀರಿ ಇವರ ಪ್ರೇಮ ಅಮರವಾದದ್ದು ಹಾಗೂ ಶಾಶ್ವತವಾದದ್ದು ಎಂಬುದು ಇಲ್ಲಿ ಚರ್ಚೆಗೆ ಒಳಪಡುವ ಸಂಗತಿಯಾಗಿದೆ.

ಪ್ರೀತಿ, ಪ್ರೇಮ, ಪ್ರಣಯ ಭಾವಗಳು ಪ್ರತಿಯೊಂದು ಜೀವಿಗಳಿಗೆ ಉಸಿರಾಟದಷ್ಟೇ ಸ್ವಾಭಾವಿಕ. ಭೂಲೋಕದಲ್ಲಿ ಪ್ರಣಯಾನುಭವ ಇಲ್ಲದವರನ್ನು ಕಾಣಬಹುದೇನೋ, ಆದರೆ ಪ್ರಣಯ ಭಾವನೆ ಇಲ್ಲದವರು ವಿರಳವೆಂದೇ ಹೇಳಬಹುದು. ಜೀವನದಲ್ಲಿ ಶೃಂಗಾರ-ಪ್ರಣಯ ಭಾವನೆಗಳನ್ನು ನಿಸ್ಸಂಕೋಚವಾಗಿ ಅಭಿವ್ಯಕ್ತಿಸುವ ಜನಪದರಲ್ಲಿ ಅದು ತುಂಬಾ ಮೈದುಂಬಿಕೊಂಡಿದೆ ಎಂದು ಹೇಳಬಹುದು. ಸಾಮಾಜಿಕವಾಗಿ

ಮನ್ನಣೆಗೊಂಡಿರುವ ಹೆಣ್ಣು–ಗಂಡಿನ ಸಂಬಂಧ ಸಾಮಾಜಿಕ ಕಟ್ಟುಪಾಡುಗಳನ್ನು ಮೀರಿ ಒಂದಾಗುವ ಗಂಡು ಹೆಣ್ಣಿನ ಪ್ರೇಮ ಸಂಬಂಧ ಗಾಢತೆಯನ್ನು ಅದರಿಂದ ಉಂಟಾಗುವ ಅನೇಕ ಬಗೆಯ ತೊಂದರೆಗಳು ಇಲ್ಲಿ ಎದುರಾಗುತ್ತವೆ. ಆದರೆ ಜನಪದ ಸಾಹಿತ್ಯದಲ್ಲಿ ಬಹುಪಾಲು ಪ್ರೇಮ, ಪ್ರೀತಿ ಇವುಗಳಿಗೆ ಹೆಚ್ಚಿನ ಬೆಂಬಲ ಸಿಗುವಂತಹದನ್ನು ಕಾಣುತ್ತೇವೆ. ಜನಪದ ಕಥೆಗಳಲ್ಲಿ ಹೆಣ್ಣಿಗೆ ಗಂಡನೇ ದೇವರು ಅವಳು ಅವನನ್ನೇ ಆರಾಧಿಸಬೇಕು ಎಂದು ದಾಂಪತ್ಯದಲ್ಲಿ ಆಕೆಯೊಬ್ಬಳಿಗೆ ನಿಷ್ಠೆಯ ವ್ರತವನ್ನು ಹೊರಿಸಲಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ಬದುಕುವ ಹೆಣ್ಣಿಗೆ ಉಳಿಗಾಲವಿಲ್ಲ ಎಂದು ಅಭಿವ್ಯಕ್ತವಾಗಿದೆ. ಆದರೆ ಆಶ್ಚರ್ಯಕರ ಸಂಗತಿ ಎಂದರೆ ಹೆಣ್ಣಿನ ಅನೈತಿಕ ಸಂಬಂಧಗಳನ್ನು ಜನಪದ ಕಥೆಗಳು ಯಾವುದೇ ಅಳುಕಿಲ್ಲದೆ ಮುಜುಗರವಿಲ್ಲದೆ ದಾಖಲಿಸಿವೆ. ಕಾನೂನು ದಂಡನೆಗಳಿಗಿಂತ ಬದುಕೇ ದೊಡ್ಡದು ಎಂಬ ತೀರ್ಮಾನ ಇದರ ಹಿಂದಿರಬಹುದು. ಏಕೆಂದರೆ ಇಷ್ಟವಿಲ್ಲದವನೊಡನೆ ಸಾಯುವತನಕ ಕೊರಗಿನಲ್ಲಿರುವುದಕ್ಕಿಂತ ಇಷ್ಟಪಟ್ಟವನೊಡನೆ ಕ್ಷಣಕಾಲ ಇರಲು ಬಯಸುತ್ತಾಳೆ. ಸಮಾಜದಲ್ಲಿ ಹೆಣ್ಣಿಗೆ ತನ್ನ ಮನಸ್ಸಿನಲ್ಲಿರುವ ಭಾವನೆಗಳನ್ನು ಹೇಳಿಕೊಳ್ಳುವುದಕ್ಕೆ ಯಾವುದೇ ಅಧಿಕಾರವಿಲ್ಲ. ಕೆಲವು ಸಮಯದಲ್ಲಿ ಮದುವೆಯಾದ ಗಂಡನು ತನ್ನ ಬಳಿಯಿದ್ದರೂ ತಾನು ಬಯಸಿದಂತೆ ಪ್ರಿಯಕರನಿಗಾಗಿ ಅವಳು ಪರಿತಪಿಸುವ ದುಗುಡ ಇವು ಬಹಳ ಚಿಂತಾಜನಕವಾಗಿ ಕಾಡುತ್ತವೆ. ವಿರಹವೇದನೆ ಪ್ರೀತಿಸಿದವನನ್ನು ಸೇರುವ ಹಂಬಲ ಜೊತೆಗೆ ಸಮುದಾಯವನ್ನು ವಂಚಿಸುವ ರೀತಿ ಇವೆಲ್ಲವೂ ಜನಪದ ಸಮಾಜದಲ್ಲಿ ಪ್ರಮುಖವಾಗಿ ಕಂಡುಬರುತ್ತದೆ.

ಜನಪದರಲ್ಲಿ ಸಂಸಾರದ ಚೌಕಟ್ಟನ್ನು ಮೀರಿ ಬೆಳೆಯುವಂತಹ ಸಂಬಂಧಗಳು ವಿರಳವಾಗಿ ಕಂಡುಬರುತ್ತವೆ. ಕಾರಣ ಮನಸ್ಸಿನಲ್ಲಿದ್ದವರ ಜೊತೆಯಲ್ಲಿ ಮದುವೆ ಮಾಡಿ ಇಬ್ಬರಲ್ಲೂ ಅಸಮಾಧಾನ ಹಾಗೂ ಎರಡು ಕುಟುಂಬಗಳು ನೆಮ್ಮದಿಯಿಂದ ಇರಲು ಸಾಧ್ಯವಿಲ್ಲ. ಇಲ್ಲಿ ಜನಪದ ಕಥೆಗಾರರು ಆಶಯಗಳ ಮೂಲಕ ಸಂದರ್ಭಕ್ಕೆ ಹೊಂದಿಕೊಂಡಂತೆ ಕಥೆಯನ್ನು ಹೆಣೆಯುವ ಚಾತುರ್ಯವನ್ನು ಮೆರೆದಿದ್ದಾರೆ. ಜನಪದ ಸಮುದಾಯದಲ್ಲಿ ಎಲ್ಲಾ ಸಂಬಂಧಗಳನ್ನು ತೊರೆದು ಮೆಚ್ಚಿದವನನ್ನು ಕೂಡಬೇಕೆಂಬ ಬಯಕೆಯಾಗುತ್ತದೆ. ಜನಪದ ಸಮೂಹ ಮುಕ್ತವಾಗಿ ಕಂಡುಬಂದರೂ ಕೆಲವು ವಿಚಾರಗಳಲ್ಲಿ ಮಾತ್ರ ಕಟ್ಟುನಿಟ್ಟಿನ ಚೌಕಟ್ಟನ್ನು ಮೀರಿ ನಡೆಯುವಂತಿಲ್ಲ. ಏಕೆಂದರೆ ಜನಪದ ಸಮಾಜ ಅಂತಹದನ್ನು ಬಹಳವಾಗಿ ಖಂಡಿಸುತ್ತದೆ. ಇಲ್ಲಿಯೂ ಸಮಾಜದ ಕಣ್ಣಿಗೆ ಮಣ್ಣೆರಚಿ ಸಮುದಾಯನ್ನು ಮೀರಿ ವರ್ತಿಸುವ ಅನೈತಿಕ ಸಂಬಂಧ ಎಂಬುದನ್ನು ಸಾಬೀತುಪಡಿಸುವ ಜನಪದ ಸಮಾಜವನ್ನು ಜಾನಪದ ವಿದ್ವಾಂಸರು ಕಥೆಯ ಸಂದರ್ಭ ಸನ್ನಿವೇಶ ಇವುಗಳ ಮೂಲಕ ತಮ್ಮ ಜಾಣತನವನ್ನು ತೋರಿಸುವ ಪ್ರಯತ್ನ ಮಾಡಿದ್ದಾರೆ.

ಚಿಕ್ಕಸಿದ್ಧ ದೊಡ್ಡ ಸಿದ್ಧ ಕಥೆಯಲ್ಲಿ ಹೆಣ್ಣು ಗಂಡಿನ ಸಂಬಂಧ ಶಾಶ್ವತವಾಗಿ ಉಳಿಯಬೇಕು ಹಾಗೂ ಅವರ ಸುಖ ದುಃಖಗಳಲ್ಲಿ ಒಬ್ಬರನ್ನೊಬ್ಬರು ಅರಿತುಕೊಂಡ ಮೇಲೆ ನಿರಂತರವಾಗಿ ಸಂಬಂಧಗಳು ಮುಂದುವರಿದುಕೊಂಡು ಬರುವಂತಾಗಬೇಕು. ಏಕೆಂದರೆ ಇವತ್ತಿನ ಸಮಾಜದಲ್ಲಿ ಸಂಬಂಧಗಳು ಅಲ್ಲಲ್ಲಿ ಕಂಡುಬರುತ್ತಿದ್ದರೂ ಅವು ನಶಿಸಿ ಹೋಗುವಂತಹ ನಿಟ್ಟಿನಲ್ಲಿ ಇದೆ. ಎಲ್ಲರಿಗೂ ಕಾಣುವಂತೆಯೇ ದಾಂಪತ್ಯ ಸಂಬಂಧವನ್ನು ಉಲ್ಲಂಘಿಸಲು ಗಂಡಿಗೆ ಸಮಾಜವೇ ಅನುಮತಿ ನೀಡಿತ್ತು. ಆದರೆ ಹೆಣ್ಣಿಗೆ

ಅದು ದೂರದ ಮಾತಾಗಿತ್ತು. ತಮಗೆ ಸಮಾಜದಲ್ಲಿ ಒಟ್ಟಾಗಿ ಇರಲು ಬಿಡದಿದ್ದಾಗ ಎಲ್ಲೋ ಒಂದು ಕಡೆ ನಿರ್ಜನ ಪ್ರದೇಶದಲ್ಲಿ ಜೀವನ ಸಾಗಿಸಬೇಕು ಎಂಬ ಅಭಿಪ್ರಾಯಕ್ಕೆ ಬರುವುದನ್ನು ಕಾಣುತ್ತೇವೆ. ಸಮಾಜದಲ್ಲಿ ಬದುಕುವುದು ಕಷ್ಟ, ಏಕೆಂದರೆ ವಿವಾಹವಾದ ಮೇಲೆ ತಮ್ಮ ಇಷ್ಟ ಇರಲಿ ಇಲ್ಲದಿರಲಿ ತಾಳಿ ಕಟ್ಟಿದ ಗಂಡನ ಜೊತೆಯಲ್ಲಿ ಮೂಕ ಪ್ರಾಣಿಯಂತೆ ಕಾಲ ಕಳೆಯಬೇಕಾಗುತ್ತದೆ.

ಜನಪದ ಸಮುದಾಯವು ಯಾವಾಗಲೂ ಅವಿಭಕ್ತ ಕುಟುಂಬದಲ್ಲಿ ಹಾಗೂ ನೈಸರ್ಗಿಕ ಮಡಿಲಲ್ಲಿ ವಾಸಿಸಬೇಕು ಎಂಬ ಚಿಂತನೆಯನ್ನು ಮಾಡುತ್ತದೆ. ಆದರೆ ಮದುವೆಯಾದವರ ಸಂಗಡ ಬಾಳಲು ಹಿಂಜರಿದಾಗ ಈ ರೀತಿಯ ಪ್ರೇಮ ಸಂಬಂಧಗಳಿಗೆ ಮುಂದಾಗುವುದು ಸಹಜ. ಕೆಲವು ಸಮಯದಲ್ಲಿ ಒಂದೇ ಕಡೆ ಇದ್ದು ಸಂಪರ್ಕಿಸಲು ಕಷ್ಟವಾದಾಗ ಕುಟುಂಬವನ್ನು ಹಾಗೂ ಸಮೂಹವನ್ನು ತೊರೆಯುವ ತೀರ್ಮಾನ ತೆಗೆದುಕೊಳ್ಳುತ್ತಾರೆ. ಅಂತಹ ಸಮಯದಲ್ಲಿ ತಮ್ಮ ಪ್ರೇಮವನ್ನು ಸ್ವೀಕರಿಸುವ ಹೆಣ್ಣು ಇನ್ನು ಮುಂದಿನ ಅಂದರೆ ಮುಂದೆ ಬರುವ ತೊಂದರೆಗಳನ್ನು ಎದುರಿಸಲು ಮಾನಸಿಕವಾಗಿ ಸಿದ್ಧಳಾಗುತ್ತಾಳೆ. ಕುಟುಂಬದ ಚೌಕಟ್ಟನ್ನು ದಾಟಿ ತಮ್ಮ ಸಂಬಂಧವನ್ನು ಎಲ್ಲಿಯೂ ಹೇಳಿಕೊಳ್ಳುವಂತಿಲ್ಲ. ಏಕೆಂದರೆ ಜನಪದ ಸಮಾಜವು ಯಾವಾಗಲೂ ಹೆಣ್ಣಿಗೆ ಶೀಲ, ತ್ಯಾಗ, ಪತಿವ್ರತೆ ಮೌಲ್ಯದ ಬಗ್ಗೆಯೇ ಆಲೋಚನೆ ಮಾಡುವಂತಹ ಅಮಾನವೀಯ ಸಂಪ್ರದಾಯಗಳು ತಲೆಮಾರಿನಿಂದ ತಲೆಮಾರಿಗೆ ಸಾಗಿಕೊಂಡು ಬಂದಿವೆ. ಇದಕ್ಕೆ ಉದಾಹರಣೆಯಾಗಿ ಸಮೇದೊಳಗಿನ ಮಿಂಡ, ತೋರುಮುತ್ತು, ಹನ್ನೆರಡು ಊಟದ ಎಲೆಗಳು, ಹಾದರಾ ಹೇಗೆ ಮಾಡಬೇಕು? ಆರು ಊಟದ ಎಲೆಗಳು ಎಂಬ ಕಥೆಗಳನ್ನು ನೋಡಬಹುದು.

ಒಲ್ಲದ ಗಂಡಿನೊಡನೆ ಮದುವೆ ಮಾಡಿಕೊಂಡು ಸಂಕಟ ಪಡುವುದು ಮತ್ತು ಆಕೆಯನ್ನು ಯಾವುದೇ ಸ್ವಾತಂತ್ರ್ಯಕ್ಕೂ ಮುಂದಾಗುವಂತೆ ಬಿಡುವುದಿಲ್ಲ. ಆ ಹಿನ್ನೆಲೆಯಿಂದಲೇ ಮದುವೆಯಾದ ಗಂಡನ ಜೊತೆ ಸಂಸಾರ ಮಾಡಲು ಇಷ್ಟ ಇಲ್ಲದಂತಹ ಸಂದರ್ಭದಲ್ಲಿ ಇಂತಹ ಅನೈತಿಕ ಪ್ರೇಮ ಪಾಶಕ್ಕೆ ಸಿಲುಕಿ ಜೀವನದಲ್ಲಿ ಬದುಕಲು ಸಾಧ್ಯವಿಲ್ಲದೆ ಹಾಗೂ ಸಾಯಲು ಇಷ್ಟವಿಲ್ಲದೆ ಹಲವಾರು ತೊಂದರೆಗಳನ್ನು ಎದುರಿಸಿ ನಂತರ ಒಳಗೊಳಗೆ ಮಾನಸಿಕವಾಗಿ ಹಾಗೂ ದೈಹಿಕವಾಗಿ ಸಂಕಟಪಡುವುದು ಎಂತಹ ವಿಚಿತ್ರ ಎನಿಸುತ್ತದೆ. ಕೆಲವು ಕಥೆಗಳಲ್ಲಿ ಹೆಣ್ಣು ಬಂದ ತೊಂದರೆಗಳನ್ನು ಎದುರಿಸಿ ತನ್ನ ಪ್ರಿಯಕರನನ್ನು ಉಳಿಸಿಕೊಂಡದ್ದನ್ನು ನೋಡಬಹುದು.

ಜನಪದ ಕಥೆಗಳಲ್ಲಿ ಬರುವ ಗಂಡು ಹೆಣ್ಣಿನ ಸಂಬಂಧಗಳು ಕುಟುಂಬದ ಹೊರಗೆ ತಮ್ಮದೇ ಆದ ಕಲ್ಪನಾಲೋಕದಲ್ಲಿ ಇರುವಂಥದ್ದು ಸರ್ವೇಸಾಮಾನ್ಯ ಮಾತು. ಸಮಾಜದ ಇತಿಮಿತಿಯನ್ನು ಮೀರಿ ಜನರ ಕಣ್ಣಿಗೆ ಬೀಳದಂತೆ ತಾನೊಬ್ಬಳೇ ನೋವನ್ನು ಅನುಭವಿಸುವ ರೀತಿಯನ್ನು ನೋಡಿದರೆ ಅವಳಲ್ಲಿ ಎಂತಹ ನಿಷ್ಕಳಂಕ ಪ್ರೇಮ, ಪ್ರೀತಿ, ಸಹನೆ ಇತ್ತು ಎಂಬುದರ ಅರಿವಾಗುತ್ತದೆ. ಹಾಗೂ ಜನಪದ ಸಮಾಜವು ಯಾವಾಗಲೂ ಒಂದು ಚೌಕಟ್ಟನ್ನು ನಿರ್ಮಿಸಿಕೊಂಡಿರುತ್ತದೆ. ಅದನ್ನು ಸರಿಸಿ ನಿಂತವರಿಗೆ ಸಮಾಜದಲ್ಲಿ ಯಾವುದೇ ಬೆಂಬಲ ದೊರಕಲು ಸಾಧ್ಯವಿಲ್ಲ. ಹೀಗೆ ಈ ಕಥೆಗಳಲ್ಲಿ ಮಾನಸಿಕ ಹೋರಾಟದ ಜೊತೆಗೆ ಸಮಾಜದ ನಿಂದನೆಗಳೆಲ್ಲವೂ ಗೋಚರವಾಗುತ್ತದೆ. ಒಂದು ಕುಟುಂಬದಲ್ಲಿ ಜನಿಸಿ ಬಾಲ್ಯಾವಸ್ಥೆಯಿಂದ

ಪ್ರೌಢಾವಸ್ಥೆಗೆ ಬಂದ ಮೇಲೆ ನಂತರ ಮದುವೆಯಾಗಿ ದಾಂಪತ್ಯ ಜೀವನದಲ್ಲಿ ಹಲವಾರು ಬಗೆಯ ಕನಸುಗಳನ್ನು ಹೊತ್ತು ಬಂದಿರುತ್ತಾಳೆ. ಇವು ಆಕೆಗೆ ಕೈಗೂಡದೆ ಹೋದಾಗ ಆಕೆಯ ದಾಂಪತ್ಯ ಜೀವನ ನಶ್ವರ ಎಂದು ತಿಳಿದು ಪ್ರಪಂಚದಲ್ಲಿ ಬದುಕು ನಡೆಸುವುದೇ ಬೇಡ ಎನ್ನುವಂತಹ ಸ್ಥಿತಿಗೆ ತಲುಪುತ್ತಾಳೆ. ಅಂತಹ ಪರಿಸ್ಥಿತಿಯಲ್ಲಿ ಸಮಾಜದ ಒಳಗೆ ಎಲ್ಲಾ ಆಚಾರ-ವಿಚಾರ, ನೀತಿ-ನಿಯಮ, ಸಂಪ್ರದಾಯ ಇವೆಲ್ಲವೂ ಒಂದು ಕಡೆ ಇದ್ದರೂ ಅವನ್ನು ಬದಿಗೆ ಹಾಕಿ ಎಷ್ಟೇ ಅಡಚಣೆಗಳು ಬಂದರೂ ಒಂದಾಗುವುದಕ್ಕೆ ಬಯಸುತ್ತಾರೆ. ಜನಪದ ಕೆಲವು ಕಥೆಗಳು ವೈವಾಹಿಕ ಚೌಕಟ್ಟನ್ನು ಅತ್ತ ಸರಿಸಿ ಮಾನವೀಯ ನೆಲೆಯಲ್ಲಿ ಪ್ರೀತಿಯ ಸಂಬಂಧವನ್ನು ಹೆಣ್ಣು ಪಡೆಯುವುದನ್ನು ಸಂಭ್ರಮದಿಂದ ನಿರೂಪಿಸುತ್ತವೆ. ಇಲ್ಲಿ ಹಾದರದ ಜೋಡಿಗಳು ಅಸಂಭವವಲ್ಲ. ಒಂದು ಕಥೆಯಲ್ಲಿ ಪಂಥದಿಂದಲೇ ರಾಜನು ಮದುವೆಯಾಗಿ "ಗಂಡನಿಗೆ ತಿಳಿದು ಆರು ತಿಂಗಳ ಹಾದರ ಮಾಡಿ, ಗಂಡನಿಗೆ ತಿಳಿಯದಂತೆ ಆರು ತಿಂಗಳ ಹಾದರ ಮಾಡಿ, ಆಮೇಲೆ ಗಂಡನ ಜೊತೆಗೆ ಸುಖವಾಗಿ ಸಂಸಾರ ಮಾಡಬೇಕು" ಎಂದಿದ್ದನ್ನು ಗೆದ್ದು ತೋರಿಸಿದ ದಿಟ್ಟ ಮಹಿಳೆಯನ್ನು ನೋಡಬಹುದು.

ಜನಪದ ಕಥೆಗಳಲ್ಲಿ ಕಂಡುಬರುವ ವಸ್ತು ವೈವಿಧ್ಯ ಮತ್ತು ಅನುಭವ ವ್ಯಾಪಕತೆ ಅದಕ್ಕೂ ಕಿಷ್ಟ ಕಾವ್ಯಕ್ಕೂ ಇರುವ ಪ್ರಮುಖ ವ್ಯತ್ಯಾಸಗಳಲ್ಲಿ ಒಂದು ಸಮಾಜದ ಹಾಗೂ ವ್ಯಕ್ತಿಯ ಜೀವನದ ಎಲ್ಲಾ ಮಗ್ಗಲುಗಳನ್ನು ಜನಪದ ಕಥೆ ತನ್ನ ಪರಿಧಿಗೆ ಬಳಸಿಕೊಂಡಿದೆ. ಬದುಕಿನ ಎಲ್ಲಾ ಕಷ್ಟ ನಷ್ಟಗಳಲ್ಲಿ ಸುಖ ಸಂತೋಷಗಳು ಅದರಲ್ಲಿ ಅಭಿವ್ಯಕ್ತಿ ಪಡೆದಿವೆ. ಕೇವಲ ಸದ್ಗುಣ ಗುಣವನ್ನೇ ಚಿತ್ರಿಸುವ ತುಷಾರದವಳ ಜಗತ್ತಲ್ಲ ಅದು, ಸಮಾಜದಲ್ಲಿರತಕ್ಕದ್ದನ್ನೆಲ್ಲ ಅದು ಪ್ರಾಮಾಣಿಕವಾಗಿ ಹೇಳಬಯಸುತ್ತದೆ. ಜನಪದ ಕಥೆಗಳಲ್ಲಿ ಸಾಮಾಜಿಕ ಪ್ರಜ್ಞೆಯ ಎರಡು ಮುಖಗಳನ್ನು ಕಾಣುತ್ತೇವೆ. ಅದು ಕೆಟ್ಟದ್ದನ್ನು ಚಿತ್ರಿಸುವಾಗಲೂ ಸಮಾಜದ ಮೇಲೆ ದುಷ್ಪರಿಣಾಮವಾಗದ ರೀತಿಯಲ್ಲಿ ತನ್ನ ಕಾರ್ಯವನ್ನು ನಿರ್ವಹಿಸುತ್ತದೆ. ಹೀಗೆ ಜನಪದ ಸಮಾಜ ಎಲ್ಲಾ ಬಗೆಯ ವಿಷಯಗಳನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಚಿಂತನೆ ಮಾಡುತ್ತದೆ.[೨೯]

ಜನಪದರಲ್ಲಿ ಯಾವುದೇ ಮೋಸ, ಕಪಟ, ಗೋಚರವಾಗುವುದಿಲ್ಲ. ಇದ್ದದ್ದನ್ನು ಇದ್ದ ಹಾಗೆ ಹೇಳುವ ಮನೋಸ್ಥೈರ್ಯವನ್ನು ಹೊಂದಿದವರಾಗಿರುತ್ತಾರೆ. ಇವರು ಯಾವಾಗಲೂ ವಿವಾಹದ ಚೌಕಟ್ಟಿನೊಳಗೆ ನಡೆಯಬೇಕಾದಂಥ ಗಂಡ ಹೆಂಡತಿಯರ ಸಂಬಂಧಗಳು ಹೊರಗೆ ಕಾಣಿಸಿಕೊಂಡಾಗ ಎಂಥವರಿಗೂ ಅಸಮಾಧಾನವಾಗುತ್ತದೆ. ಆದರೆ ಅದನ್ನು ತೋರಿಸಿಕೊಳ್ಳುವಂತಿಲ್ಲ. ಸಮಾಜ ಇಂತಹವರನ್ನು ತಿರಸ್ಕರಿಸುತ್ತದೆ. ಕುಟುಂಬದಲ್ಲಿ ಯಾವುದೇ ರೀತಿಯ ವಿಶ್ವಾಸ ನಂಬಿಕೆಗಳು ಇರುವುದಿಲ್ಲ. ಇಲ್ಲಿ ಎಷ್ಟೇ ಚೆನ್ನಾಗಿ ಗಂಡ-ಹೆಂಡತಿ ನಡುವೆ ಅನ್ಯೋನ್ಯವಾಗಿ ಇದ್ದರೂ ಕೂಡ ಕೆಲವು ವಿಷಯಗಳಲ್ಲಿ ಸಮಾಜದ ರೀತಿ ನೀತಿಗಳಿಗೆ ತಲೆಬಾಗಬೇಕಾಗುತ್ತದೆ. ವಿವಾಹೋತ್ತರ ಸಂಬಂಧಗಳಲ್ಲಿ ಮದುವೆಯಾದ ಮೇಲೆ ಬೇರೆ ಗಂಡಸಿನ ಸಂಬಂಧವಿರುವುದು ಕಂಡುಬಂದರೂ ಅವುಗಳನ್ನು ಅನಿವಾರ್ಯವಾಗಿ ಸ್ವೀಕರಿಸಬೇಕಾಗುತ್ತದೆ. ದಾಂಪತ್ಯದಲ್ಲಿ ಒಲಿದವನ ಜೊತೆ ಕೂಡುವ ಹಂಬಲದಿಂದ ಅನೇಕ ರೀತಿಯ ತೊಂದರೆಗಳನ್ನು ಸವಾಲಾಗಿ ಸ್ವೀಕರಿಸಿ

ವ್ಯವಸ್ಥೆಯನ್ನು ಎದುರಿಸಿ ಒಂದಾಗುವ ಪ್ರಯತ್ನ ಮಾಡಬೇಕಾಗುತ್ತದೆ. ಅದಕ್ಕೆ ಜನಪದ ಗರತಿಯರು 'ಕೈಲಾಗದ ಗಂಡ ಮನೆಯಲ್ಲಿದ್ದರೇನು ಪ್ರಯೋಜನ' ಎಂಬ ಮಾತನ್ನು ಯಾವುದೇ ಮುಜುಗರವಿಲ್ಲದೆ ಅಭಿಪ್ರಾಯ ವ್ಯಕ್ತಪಡಿಸಿರುವುದುಂಟು. ಆದ್ದರಿಂದ ಇಲ್ಲಿ ಸಹಜವಾಗಿ ತಾವು ಪ್ರೀತಿಸಿದವರನ್ನೇ ಸೇರುವ ಬಯಕೆಯನ್ನು ಕಥೆಗಳನ್ನು ಹೊಂದಿರುವುದನ್ನು ಕಾಣಬಹುದು.

ಮದುವೆಯಾದ ಮೇಲೆ ಮತ್ತೊಬ್ಬನನ್ನು ಆಸೆ ಪಡುವುದು ಸಮಾಜಬಾಹಿರ ಎಂದು ತಿಳಿದರೂ ಅವುಗಳನ್ನು ಗಾಳಿಗೆ ತೂರಿ ಮೆಚ್ಚಿದವನನ್ನು ಕೂಡಬೇಕು ಎಂಬ ಅಭಿಪ್ರಾಯ ಮೂಡುತ್ತದೆ. ಜನಪದ ಸಮಾಜ ಇಂತಹ ಅನೈತಿಕ ಚಟುವಟಿಕೆಗಳಿಗೆ ನೀಡುವುದಿಲ್ಲ. ಜೊತೆಗೆ ವಿವಾಹದ ಮೇಲೆ ಇಂಥ ಸಂಬಂಧಗಳಿಗೆ ಪ್ರಾಮುಖ್ಯತೆ ಇರುವುದಿಲ್ಲ. ಆ ಕಾರಣದಿಂದ ಪಾಲಿಗೆ ಬಂದದ್ದು ಪಂಚಾಮೃತ ಎಂಬಂತೆ ಕೌಟುಂಬಿಕ ವಾತಾವರಣದಲ್ಲಿ ಕಾಲ ತಳ್ಳಬೇಕಾಗುತ್ತದೆ.

"ಜನಪದರಲ್ಲಿ ಸುಖ ಬಂದಾಗ ಮುಂದೆ ಬರಲಿರುವ ದುಃಖವನ್ನು ನೆನೆದು ಶುಷ್ಕ ಜೀವನವನ್ನು ನಡೆಸುವುದು ವೇದಾಂತವೂ ಅಲ್ಲ, ಜೀವನದ ಜಾಣ್ಮೆಯೂ ಅಲ್ಲ, ರೈತ ಆ ಜೀವನದ ರಹಸ್ಯವನ್ನು ಬಲ್ಲವನು ತಾನೇ ನಿರ್ಮಿಸಿಕೊಂಡ ಸಾಮಾಜಿಕ ಚೌಕಟ್ಟಿನೊಳಗೆ ಜೀವನದ ಸಾರವನ್ನು ಸವಿಯಬಲ್ಲನು" ಮದುವೆಯಾದ ಹೆಣ್ಣು ಸಾಮಾಜಿಕ ವಿಧಿ ವಿಧಾನವನ್ನು ಬದಿಗೊತ್ತಿ ತನ್ನ ಪ್ರಿಯಕರನಿಗಾಗಿ ಗಾಳಿ, ಮಳೆ, ಚಳಿ ಎನ್ನದೇ ಕಾಯುವುದು ಹಾಗೂ ಕುಟುಂಬದವರನ್ನು ವಂಚಿಸಿ ಗುಪ್ತವಾಗಿ ತನ್ನ ಹೃದಯದಲ್ಲಿ ಆರಾಧಿಸುವುದು ಪತಿಯ ಸಂಗಡವಿದ್ದರೂ ಅವನ ನೆನಪಿನಲ್ಲಿ ಕಾಲ ಕಳೆಯುವುದು ಸರ್ವೇಸಾಮಾನ್ಯವಾಗಿ ಇರುವುದು ಕಥೆಗಳಲ್ಲಿ ದಾಖಲಾಗಿದೆ. ಜನಪದರಲ್ಲಿ ಯಾವಾಗಲೂ ಅವಿಭಕ್ತ ಕುಟುಂಬ ಪದ್ಧತಿಯನ್ನೇ ಅನುಸರಿಸಿಕೊಂಡು ಬಂದಿರುವುದರಿಂದ ಮದುವೆಯಾಗಿ ಬಂದ ಮನೆಯಲ್ಲಿ ಹೆಣ್ಣು ಯಾವುದೇ ಅಹಿತಕರ ಘಟನೆಗಳು ನಡೆದರೂ ಅವೆಲ್ಲವನ್ನು ಹೊಟ್ಟೆಯೊಳಗೆ ಹಾಕಿಕೊಂಡು ಸಂಸಾರ ನಡೆಸಬೇಕು ಎನ್ನುವ ಮಾತಿದೆ. ಆದರೆ ಇಲ್ಲಿ ಚಿಕ್ಕಸಿದ್ದ ದೊಡ್ಡ ಸಿದ್ಧ ಕಥೆಯಲ್ಲಿ ಗಂಡ ಇದ್ದು ಇನ್ನೊಬ್ಬ ರಾಜನ ಹಿಂದೆ ಸಂಸಾರವನ್ನು ತೊರೆದು ಅವನ ಹಿಂದೆ ಹೋಗಲು ಕಾತುರದಿಂದ ಕಾಯುತ್ತಿದ್ದಳು. ಜನಪದ ಸಮಾಜದಲ್ಲಿ ಈ ರೀತಿಯ ಸಂಬಂಧಗಳಿಗೆ ಎರಡು ಕಾರಣಗಳನ್ನು ನೀಡಬಹುದು. ಒಂದು ಮದುವೆಯಾದ ಗಂಡ ತನ್ನ ಆಸೆ ಆಕಾಂಕ್ಷೆಗಳನ್ನು ಪೂರೈಸದಿದ್ದಾಗ ಬೇರೆಯವರನ್ನು ಕೂಡಲು ಮುಂದಾಗುತ್ತಾಳೆ. ಎರಡನೆಯದು ತಾನು ಇಷ್ಟಪಡದೆ ಬಲವಂತವಾಗಿ ಮದುವೆ ಮಾಡಿದರೆ ಅಂತಹ ಸಂದರ್ಭದಲ್ಲಿ ಹೆಣ್ಣು ಮುಂದಾಗುತ್ತಾಳೆ.

ಗಂಡು-ಹೆಣ್ಣುಗಳ ಪರಸ್ಪರ ಆಕರ್ಷಣೆಯೇ ಜೀವ ಸೃಷ್ಟಿಯ ಮೂಲ ಸೂತ್ರ. ಪ್ರೇಮ-ಕಾಮಗಳೆರಡು ಒಂದೇ ನಾಣ್ಯದ ಎರಡು ಮುಖಗಳು. ಹಿಂದೂ ಧರ್ಮಶಾಸ್ತ್ರಗಳಲ್ಲಿ ಚತುರ್ವಿಧ ಪುರುಷಾರ್ಥಗಳಲ್ಲಿ ಕಾಮಕ್ಕೆ ತೃತೀಯ ಸ್ಥಾನ ನೀಡಿದೆಯಾದರೂ ಪ್ರಾಯ್ಡ್‌ನಂಥ ಮಾನವಶಾಸ್ತ್ರಜ್ಞರು ಕಾಮಕ್ಕೆ ಮೊದಲ ಸ್ಥಾನ ನೀಡಿದ್ದಾರೆ. ಹೆಣ್ಣು-ಗಂಡುಗಳಲ್ಲಿ ಪರಸ್ಪರ ಆಕರ್ಷಣೆ ಪ್ರೇಮ, ಪ್ರೀತಿ, ಒಲವು ಇಲ್ಲದಿದ್ದರೆ ಈ ಜಗತ್ತಿನಲ್ಲಿ ಕುಟುಂಬವಾಗಲೀ ಸಮಾಜವಾಗಲೀ ಉದಯಿಸುತ್ತಿರಲಿಲ್ಲ. ಮಾನವನ ಇಂದಿನ ಎಲ್ಲಾ ಅಭಿವೃದ್ಧಿಗೂ ಹೆಣ್ಣು-ಗಂಡುಗಳ ಪರಸ್ಪರ ಪ್ರೇಮ ಅನುರಾಗವೇ ಪ್ರಮುಖ ಕಾರಣ ಹಾಗೂ ಮಾನವನ

ಸಾಹಸ ಸಾಧನೆಗಳಿಗೂ ಇದೇ ಮೂಲ ಎಂಬುದಾಗಿ ಹೇಳಬಹುದು. ಸಾಮಾನ್ಯವಾಗಿ ಹೆಣ್ಣು ಮಕ್ಕಳು ಪರಪುರುಷನಿಗೆ ಒಲಿಯುವುದು ಅವನ ಹಾಡಿನ ಚಮತ್ಕಾರ, ನೋಟ, ಕುಣಿತ ಮತ್ತು ಅವನ ಸೌಂದರ್ಯಕ್ಕೆ ಹಾಗೂ ಅವನ ಆಡುವ ಮಾತುಗಳಿಗೆ ತಲೆಬಾಗಿ ಅವನನ್ನು ಸಂಪೂರ್ಣವಾಗಿ ತನ್ನೊಳಗೆ ಸೇರಿಸಿಕೊಳ್ಳಬೇಕೆಂಬ ಬಯಕೆ ಹುಟ್ಟುತ್ತದೆ.[೩೦]

"ಗಂಡು ಹೆಣ್ಣು ಇವುಗಳ ವ್ಯಕ್ತಿತ್ವದ ಬೇರುಗಳನ್ನೇ ಅಲ್ಲಾಡಿಸುವ ಕಾಮ ಪ್ರವೃತ್ತಿ ಅನೇಕ ಕುಟುಂಬಗಳ ಸ್ವಾಸ್ಥ್ಯಕ್ಕೆ ಕೊಳ್ಳಿಯಿಟ್ಟಿದೆ. ಹೆಣ್ಣೋ, ಗಂಡೋ ಯಾವುದು ಅದಕ್ಕೆ ಸೆರೆಸಿಕ್ಕಿತೋ ಅದು ನಾಶವಾಗುತ್ತದೆ. ಸಾಮಾಜಿಕ ಜೀವನದ ಸ್ವೀಕೃತ ವ್ಯವಸ್ಥೆ ಅಲ್ಲೋಲ-ಕಲ್ಲೋಲವಾಗುತ್ತದೆ. ವಿವಾಹ ಬಾಹಿರ ಲೈಂಗಿಕ ಸ್ವೇಚ್ಛೆ ಮಾರಕ ಎಂದು ಮನೋವಿಜ್ಞಾನ, ಸಮಾಜಶಾಸ್ತ್ರಜ್ಞರು ಅನೇಕ ಸಂಶೋಧನೆಗಳನ್ನು ಮಾಡಿ ನೀತಿಸೂತ್ರಗಳನ್ನು ನಿರೂಪಿಸಿದರೂ, ಮಾನವ ಸ್ವಭಾವದ ಸಂಕೀರ್ಣತೆ ಅರ್ಥಕ್ಕೆ ವಿಶ್ಲೇಷಣೆಗೆ ನಿಲುಕದಂತೆ ರೂಪುಗೊಳ್ಳುತ್ತ ಬಂದಿದೆ.[೩೧]

ಹೆಣ್ಣು ಗಂಡುಗಳ ನಡುವಿನ ಒಂದು ಅದಮ್ಯವಾದ ಕಾಮ, ವಿಕೃತಿ, ಮೋಹ ವಿಕೃತಿ, ಉನ್ಮಾದ ಭ್ರಮೆಗಳು, ಮುಗಿಬಿದ್ದು ಸೆರೆಹಿಡಿಯುವ ಸಂಬಂಧಗಳನ್ನು ಗಂಡು ಹೆಣ್ಣು ಅಯಸ್ಕಾಂತದ ಎರಡು ಮುಖಗಳಂತೆ ಧ್ರುವಗಳಂತೆ ಒಂದನ್ನೊಂದು ಒಂದಲ್ಲ ಒಂದು ಹಂತದಲ್ಲಿ ಆಶ್ರಯಿಸಿಕೊಂಡೇ ಬದುಕುತ್ತವೆ. ಆದರೆ ಅತೃಪ್ತ ವಿಕಾರಗಳು ಕಾಮದ ಸೆಳೆತ ಹೆಣ್ಣಿನಲ್ಲಿ ವಿಜೃಂಭಿಸಿದಾಗ ಅವಳಿಗೆ ಬದುಕಿನಲ್ಲಿ ನಿಯಂತ್ರಣ ತಪ್ಪುತ್ತದೆ. ಸಮಾಜದ ಸ್ವೀಕರಿಸಿದ ನೀತಿ, ನಿಯಮಗಳ ಚೌಕಟ್ಟನ್ನು ದಾಟಬೇಕಾಗುತ್ತದೆ. ಜನಪದ ಸಮುದಾಯದಲ್ಲಿ ಒಂದು ಸಾರಿ ಮನೆಬಿಟ್ಟ ಹೆಣ್ಣು ಮಗಳಿಗೆ ಮತ್ತೆ ಯಾವುದೇ ರೀತಿಯ ಸ್ಥಾನಮಾನ ದೊರೆಯುವುದಿಲ್ಲ. ಜನಪದರಲ್ಲಿ ಒಂದು ಮಾತು 'ನಾಯಿ ಮುಟ್ಟಿದ್ದನ್ನು ನಾಯಿಗೆ ಹಾಕಿ' ಇದು ಸಾಮಾನ್ಯವಾಗಿ ಎಲ್ಲಾ ಕಡೆ ಪ್ರಚಲಿತದಲ್ಲಿದೆ.

ಜನಪದ ಕಥೆಗಳಲ್ಲಿ ವಿವಾಹ ನಂತರದ ಸಂಬಂಧಗಳಿಗೆ ಹೇರಳವಾಗಿ ಉದಾಹರಣೆಗಳು ದೊರೆಯುತ್ತವೆ. ಇಲ್ಲಿ ದಾಂಪತ್ಯ ಜೀವನದಲ್ಲಿ ಗಂಡ ಹೆಂಡತಿ ಮಕ್ಕಳ ಜೊತೆ ಅನ್ಯೋನ್ಯತೆಯಿಂದ ಕೂಡಿದ್ದು ಕೆಲವು ಸಂದರ್ಭದಲ್ಲಿ ಬೇರೆ ಗಂಡಸಿನ ಮಾತುಗಾರಿಕೆಗೆ ಬಲಿಯಾಗುವಂಥದ್ದು ಮತ್ತು ಶ್ರೀಮಂತಿಕೆಗೆ ತಲೆಬಾಗು ವಂಥದ್ದು. ಇಲ್ಲವೇ ಅವನ ನಯವಿನಯದ ಮಾತು ಗುಣ, ನಡತೆ ಇವೆಲ್ಲವೂ ಇಲ್ಲಿ ಕೆಲಸಕ್ಕೆ ಬರುತ್ತವೆ. ಕೆಲವು ಸಮಯದಲ್ಲಿ ಪ್ರಿಯತಮನು ಬಾಯಾರಿ ಬಂದು ನೀರು ಕೇಳುವುದು; ಇಲ್ಲಿ ನೀರು ಹೆಣ್ಣಿನ ಸಂಕೇತ, ಬಾವಿಯ ನೀರು ಅವಿವಾಹಿತಳಿಗೂ ಹಾಗೂ ಕೆರೆಯ ನೀರನ್ನು ವಿವಾಹಿತಳಿಗೂ ಮತ್ತು ಹರಿಯುವ ನೀರನ್ನು ವೇಶ್ಯೆಗೂ ಹೋಲಿಸಲಾಗಿದೆ.

ಮೆಚ್ಚಿದವನಿಗೆ ಹೆಣ್ಣು ಏನು ಬೇಕಾದರೂ ಕೊಡುವಂತಹ ಪರಿಸ್ಥಿತಿಯನ್ನು ನೋಡಬಹುದು. ಗಂಡ ಮನೆಯಲ್ಲಿದ್ದರೂ ಅವನ ಕಣ್ಣು ತಪ್ಪಿಸಿ ಪ್ರೀತಿಯಿಂದ ಸಲಿಗೆಯಿಂದ ಇರುವಂಥದ್ದು ಕಂಡುಬರುತ್ತದೆ. ಸಾಮಾನ್ಯವಾಗಿ ವಿವಾಹವಾದರೂ ಮೆಚ್ಚಿದವನನ್ನು ಕೂಡಲು ತುದಿಗಾಲಿನಲ್ಲಿ ನಿಂತಿರುತ್ತಾರೆ. ಏಕೆಂದರೆ ಅವನ ಆಕರ್ಷಕ ಮಾತುಗಳು, ನಡೆಯುವ ಭಂಗಿ, ಅವನು ಅವಳನ್ನು ಹಣ್ಣು ಹಂಪಲುಗಳಿಗೆ ಹೋಲಿಸಿ

ಮಾತಾಡುವುದು, ಶೃಂಗಾರ, ಒಲವು ಇನ್ನೂ ಮುಂತಾದ ರೀತಿಯಲ್ಲಿ ಬಣ್ಣಿಸುವುದನ್ನು ಕಾಣಬಹುದಾಗಿದೆ. ಈ ಜನಪದ ಸಮಾಜದಲ್ಲಿ ಯಾವಾಗಲೂ ನೀರು ಇಂತಹ ಸಂಕೇತಗಳ ಮುಖಾಂತರ ಪ್ರೀತಿ-ಪ್ರಣಯ ಆರಂಭವಾಗುತ್ತದೆ. "ತೋರುಮುತ್ತು" ಕಥೆಯಲ್ಲಿ ಗಂಡನಿದ್ದು ತನ್ನ ಪ್ರಿಯಕರನನ್ನು ಭೇಟಿಯಾಗಲು ನೀರು ತರುವ ಉಪಾಯ ಒಡ್ಡಿ ಹೋಗುವುದು. ಗಂಡ ಅವಳ ಹಿಂದಿನಿಂದ ಬಂದು ಅವರ ಪ್ರಣಯ ದಾಟವನ್ನು ನೋಡಿ, ಬೇಸರವಾಗಿ ಮನೆಬಿಟ್ಟು ಅಡವಿ ಸೇರುವುದು; ಹೀಗೆ ಸಮಾಜದ ಎಷ್ಟು ಕಾನೂನು ನೀತಿ ನಿಯಮಗಳು ಇದ್ದರೂ ಅವನ್ನು ಮೀರಿ ಬರುವಂತೆ ಮಾಡುತ್ತದೆ ಪ್ರೀತಿ. ವಿವಾಹವಾದ ಹೆಣ್ಣು ಮಗಳು ತನ್ನ ಪತಿಯು ಮನೆಯಲ್ಲಿದ್ದರೂ ಬೇರೆಯವರನ್ನು ಬಯಸುವುದು. ಅನಂತರ ಸಮಾಜದಿಂದ ಅವರನ್ನು ದೂರವಿಡುವುದು ಇವೆಲ್ಲ ಸಮಸ್ಯೆಯನ್ನು ತಾವೇ ಎಳೆದುಕೊಂಡಂತೆ ಕೆಲವು ಸಮಯದಲ್ಲಿ ಮದುವೆಯಾಗುವಂತಹ ಪತಿರಾಯ ತನಗೆ ಸುಖ ಸಂತೋಷಗಳನ್ನು ಕೊಡದಿದ್ದಾಗ ಅವಳು ಬೇರೆ ದಾರಿ ಕಾಣದೆ ಸಮಾಜದ ನೀತಿ ನಿಯಮಗಳನ್ನು ಮೀರಬೇಕಾಗುತ್ತದೆ. ಹೀಗೆ ಸಮಾಜದಲ್ಲಿ ಅವಿಭಕ್ತ ಕುಟುಂಬದಲ್ಲಿ ಬದುಕುವವರಿಗೆ ಕೆಲವಾರು ಸಮಸ್ಯೆಗಳು ದೈಹಿಕವಾಗಿ ಹಾಗೂ ಲೈಂಗಿಕವಾಗಿ ಕಂಡುಬರುವುದುಂಟು.

**ಚಿಕ್ಕಸಿದ್ಧ ದೊಡ್ಡಸಿದ್ಧ:** ಈ ಕಥೆಯಲ್ಲಿ ರಾಜನ ಮಗ ಮತ್ತು ಪ್ರಧಾನಿ ಮಗ ಸ್ನೇಹ ಸಂಬಂಧವನ್ನು ಚಿತ್ರಿಸಲಾಗಿದೆ. ಇವರ ಸ್ನೇಹವನ್ನು ಬಿಡಿಸಿದವರಿಗೆ ಬಂಗಾರದ ನಾಣ್ಯವನ್ನು ಬಹುಮಾನ ಕೊಡುವುದಾಗಿ ರಾಜ ಡಂಗೂರ ಬಾರಿಸುತ್ತಾನೆ. ಇಲ್ಲಿ ಅಜ್ಜಿಯ ಜಾಣ್ಮೆಯನ್ನು ನೋಡಬೇಕು. ಒಂದೇ ಗಳಿಗೇಲಿ ಅವರ ಸ್ನೇಹವನ್ನು ಬಿಡಿಸುತ್ತಾಳೆ. ಒಂದೂ ಮಾತನಾಡದೇ ಅವರಿಬ್ಬರನ್ನು ದೂರ ಮಾಡುವುದು ಮತ್ತೆ ಅದೇ ಅಜ್ಜಿ ರಾಜನ ಮಗನ ಆಸೆಯನ್ನು ಪೂರೈಸಲು ಸಹಾಯಕಳಾಗುವುದು.

ಊರಿನ ಗೌಡನ ಸೊಸೆಯ ಜೊತೆಗೆ ಗುಪ್ತ ಸಂಬಂಧವನ್ನು ಬೆಳೆಸುವುದು. ಇಲ್ಲಿ ಒಬ್ಬ ಹೆಣ್ಣು ತನ್ನ ಕೌಟುಂಬಿಕ ಜೀವನದಾಚೆಗೂ ಇನ್ನೊಬ್ಬರನ್ನು ಇಷ್ಟಪಡುವಂಥದ್ದು. ಅವನಿಂದ ತನ್ನ ಆಸೆಯನ್ನು ಪೂರೈಸಿಕೊಳ್ಳುವಂಥದ್ದು. ಈ ಕಥೆಯಲ್ಲಿ ಗೌಡನ ಸೊಸೆ ರಾಜಕುಮಾರನ ಜೊತೆ ಹಾದರ ಸಂಬಂಧ ಮಾಡುವುದನ್ನು ಕಾಣಬಹುದು. ಈ ಕಥೆಯ ಮಧ್ಯದಲ್ಲಿ ಎಲ್ಲಿಯೂ ಗೌಡನ ಮಗನ ಪಾತ್ರ ಬರುವುದಿಲ್ಲ. ಇಲ್ಲಿ ಗೌಡನ ಸೊಸೆ ಎಷ್ಟು ಕುತಂತ್ರದಿಂದ ತನ್ನ ಇರುವಿಕೆಯನ್ನು ಹೇಳುತ್ತಾಳೆಂದರೆ "ಒಂದು ಕಲ್ಲು, ಕಲ್ಲ ಮೇಲೆ ಹುಲ್ಲು, ಹುಲ್ಲಿನ ಮೇಲೆ ಅರಿಶಿಣ ಕೊಂಬು ಅರಿಶಿಣದ ಮೇಲೆ ಬಳೆಚೂರು ಇಟ್ಟು ಚಕ್ಕಡಿ ಹತ್ತಿ ಹೋಗುತ್ತಾಳೆ". ಇದರ ಅರ್ಥ ತಿಳಿಯದ ರಾಜಕುಮಾರ ಮತ್ತೆ ಪ್ರಧಾನಿ ಮಗನ ಜೊತೆ ಸ್ನೇಹ ಬೆಳೆಸುವನು. ನಡೆದ ಘಟನೆಯನ್ನು ತಿಳಿಸಿದಾಗ, ಗೆಳೆಯ ಯೋಚನೆ ಮಾಡಿ ಹೀಗೆ ಅರ್ಥ ವಿವರಿಸುತ್ತಾನೆ. "ಕೊಟ್ಟೂರು ಕಲ್ಲೂರು, ಹುಟ್ಟೂರು, ಹುಲ್ಲೂರು, ಅರಿಶಿಣ ಮನೆಯವರು". ಇಲ್ಲಿ ಬಳೆಚೂರಿನ ಸಂಕೇತ ಗಂಡಸಾದ್ರೆ ಬಾ, ಹೆಂಗಸಾದ್ರೆ ಬಿಡು ಅಂತ. ಮತ್ತೊಂದು ಸನ್ನಿವೇಶ ಕಥೆಯಲ್ಲಿ ಜೀರಸಂಗವ್ವ ಬಾವಿಯವರು ಬಂದಾರೆಂದು ಹೇಳಿದಾಗ, ಆಕೆಗೆ ಯಡಹಸ್ತದಿಂದ ಒಡೆಯುತ್ತಾಳೆ. ಇದರ ಅರ್ಥ ಮುಟ್ಟಾಗಿದ್ದೀನಿ ಮೂರು ದಿನ ಬಿಟ್ಟು ಬರೋಕೆ ಹೇಳು ಅಂತ. ಕಥೆ ಮುಂದುವರೆಯುತ್ತದೆ. ರಾಜಕುಮಾರ ಅವಳನ್ನು ಸೇರೋಕೆ ಹೋದರೆ ಮಿಡಿನಾಗರ ಹಾವು ಬಂದು ಕಚ್ಚುತ್ತದೆ ಎಂದು ಮರದ ಮೇಲಿನ ಎರಡು ಗಿಳಿಗಳು

ಮಾತಾಡೋದನ್ನು ಕೇಳಿದ ಪ್ರಧಾನಿ ಮಗ ಅವರ ಜೀವ ಉಳಿಸಲು ಹೋಗಿ ತನ್ನ ಮೇಲೆ ತಪ್ಪು ಭಾವನೆ ಮೂಡಿ, ರುಂಡ ತೆಗೆಯುವ ಹಂತಕ್ಕೆ ಕಥೆ ತಿರುವು ಪಡೆಯುತ್ತದೆ. ಚಂದ್ರಾಯುಧ ಮೇಲಕ್ಕೆತ್ತಿದರೆ ಹೂಮಾಲೆಯಾಗಿ ಅವನ ಕೊರಳಿಗೆ ಬೀಳುತ್ತದೆ. ಇಲ್ಲಿ ಸತ್ಯಕ್ಕೆ ಎಂದಿಗೂ ಸಾವಿಲ್ಲ ಎಂಬುದನ್ನು ತಿಳಿಯಬಹುದು. ತನ್ನ ಪ್ರಾಣಕ್ಕಿಂತ, ಸ್ನೇಹಿತನ ಪ್ರಾಣವನ್ನು ರಕ್ಷಿಸಲು ಹೋದವನನ್ನು ನಿಂದಿಸುವುದು. ಈ ಕಥೆಯಲ್ಲಿ ಹೆಣ್ಣನ್ನು ಒಂದು ಮಾರಾಟದ ವಸ್ತುವನ್ನಾಗಿ ನೋಡಲಾಗಿದೆ. ಗೌಡ ಸೊಸೆಯ ಬದಲಿಗೆ ತನ್ನ ಸೊಸೆಯನ್ನು ಕಳುಹಿಸುವುದು. ಮತ್ತು ಸ್ನೇಹ ಸಂಬಂಧ ಬಹಳ ಪವಿತ್ರವಾದದ್ದು, ಚಿರಾಯುವಾದದ್ದು. ಸ್ನೇಹಿತರಲ್ಲಿ ಯಾವುದೇ ಬೇಧ ಭಾವನೆಗಳಿರುವುದಿಲ್ಲ. ಮೇಲು-ಕೀಳು, ಶ್ರೀಮಂತ-ಬಡವ ಎಂಬ ಭಾವನೆಗಳಿರುವುದಿಲ್ಲ. ಇಲ್ಲಿ ಹೆಣ್ಣು ತನ್ನ ಆಸೆಯನ್ನು ಪೂರೈಸಿಕೊಳ್ಳಲು ಏನಾದರೂ ಮಾಡಬಲ್ಲಳು ಎಂಬುದನ್ನು ನೋಡಬಹುದು.

**ಸಮೇದೊಳಗಿನ ಮಿಂಡ**

ಒಂದೂರಲ್ಲಿ ಒಬ್ಬ ರಾಜ ಮಗನ ಮದುವೆ ಮಾಡಬೇಕೆಂದು ಎಲ್ಲಾ ಕಡೆ ಹೆಣ್ಣು ನೋಡಿದನು. ಅವನಿಗೆ ಯಾವ ಹೆಣ್ಣು ಮನಸ್ಸಿಗೆ ಬರಲಿಲ್ಲ. ರಾಜಕುಮಾರ ಊರಲ್ಲಿನ ಗರ್ಭಿಣಿ ಸ್ತ್ರೀಯರನ್ನೆಲ್ಲ ಅರಮನೆಗೆ ಕರೆಯಿಸಿ ಜೋಯಿಸರನ್ನು ಕರೆದು ಒಳ್ಳೆಯ ಲಕ್ಷಣಗಳುಳ್ಳ ಹೆಣ್ಣು ಹಡೆಯುವವಳನ್ನು ಅರಮನೆಯಲ್ಲಿಯೇ ಇಟ್ಟುಕೊಂಡು ಬೆಳೆಸಿದ. ಆ ಹೆಣ್ಣು ಯಾರ ಕಣ್ಣಿಗೂ ಬೀಳದಂತೆ ರಾಜಕುಮಾರ ಬೆಳೆಸಿದ. ಅವಳು ಮೈನೆರೆದು ದೊಡ್ಡವಳಾದ ಮೇಲೆ ರಾಜಕುಮಾರ ಅವಳನ್ನೇ ಮದುವೆ ಮಾಡಿಕೊಂಡ. ಅಕ್ಕಿ ಕಾಳು ಬೀಳುವಾಗಲೂ ಅವಳನ್ನು ಹೊರಗೆ ಕರೆತರಲಿಲ್ಲ. "ಅವಳೆಂಥ ಹೆಣ್ಣು ಇರಬೇಕು?" ಎಂದು ಜನ ಮಾತಾಡಿಕೊಳ್ಳುತ್ತಿದ್ದರು.

ಆ ಊರಲ್ಲಿ ಬಡಿಗೆರ ಹುಡುಗ ಒಂದು ಗಂಧದ ಮರದ ಸಮೇ ಮಾಡಿದ. ಅದರ ಹೊರ ಮೈಯಲ್ಲಿ ನಾನಾ ತರಹದ ಗೊಂಬೆಗಳನ್ನು ಕೆತ್ತಿದ. ಆ ಸಮೇ ಬಹಳ ಸುಂದರವಾಗಿತ್ತು. ಅದನ್ನು ಬಜಾರಕ್ಕೆ ಒಯ್ದ. ಅದನ್ನು ನೋಡಿದ ಜನರಿಗೆಲ್ಲ ಬಹಳ ಆಶ್ಚರ್ಯವಾಯಿತು. ಅಂಥದನ್ನು ಈ ಮೊದಲು ಯಾರೂ ಕಂಡಿರಲಿಲ್ಲ. ತನ್ನ ಹೆಂಡತಿ ಒಬ್ಬಳೇ ಮನೆಯಲ್ಲಿರುತ್ತಾಳೆ ಆ ಸುಂದರವಾದ ಸಮೇ ನೋಡುತ್ತಾ ಹೊತ್ತು ಗಳೆದಾಳು ಎಂದು ಯೋಚಿಸಿ ಐವತ್ತು ಸಾವಿರ ರೂಪಾಯಿ ಕೊಟ್ಟು ತರಲು ಮಂತ್ರಿಗೆ ಹೇಳಿದ. ಮಂತ್ರಿ ಮರುದಿನ ಹೋಗುವಷ್ಟರಲ್ಲಿ ಬಡಿಗ ಒಂದು ಉಪಾಯ ಮಾಡಿದ್ದ. ಆ ಸಮೇದಲ್ಲಿ ಒಳಗೆ ಒಬ್ಬರು ಕೂಡುವಷ್ಟು ಜಾಗ ಬಿಟ್ಟು ಒಂದು ಕೀಲು ಮಾಡಿದ್ದ. ತಿರುವಿದರೆ ಸಮೆ ಬಾಯಿ ತೆಗೆಯುತ್ತಿತ್ತು. ಮತ್ತೆ ತಿರುವಿದರೆ ಮುಚ್ಚಿಕೊಳ್ಳುತ್ತಿತ್ತು. ಹಾಗೆ ಬಡಿಗ ಸಮೆದೊಳಗೆ ಕೂತ. ಮಂತ್ರಿ ಆ ಸಮೇ ನೇರವಾಗಿ ಒಯ್ದು ರಾಜಕುಮಾರನಿಗೆ ನೀಡಿದ. ಅವನು ತನ್ನ ರಾಣಿಯ ಅರಮನೆಗೆ ಕಳುಹಿಸಿದ. ತಾನು ಬೇಟೆಯಾಡಲು ಅರಣ್ಯಕ್ಕೆ ಹೋದ. ರಾಣಿಗೆ ಅದನ್ನು ನೋಡಿ ಆಶ್ಚರ್ಯವಾಯಿತು. ಹೊರಗಿನ ಪ್ರಪಂಚವನ್ನು ನೋಡದವಳು, ಸಮೇದ ಮೇಲಿದ್ದ ಗೊಂಬೆಗಳನ್ನು ನೋಡಿಯಾದರೂ ಪ್ರಪಂಚ ಹೀಗೆ ಇದೆಯೆಂದು ತಿಳಿದುದಕ್ಕಾಗಿ ಅವಳಿಗೆ ಬಹಳ ಸಂತೋಷವಾಯಿತು. ಅವಳು ತನ್ನಷ್ಟಕ್ಕೆ "ಈ ಸಮೇ ಇಷ್ಟು ಸುಂದರವಾಗಿರಬೇಕಾದರೆ

ಇದನ್ನು ಮಾಡಿದವನು ಎಷ್ಟು ಸುಂದರನಾಗಿರಬಾರದು?" ಎಂದು ಅನ್ನುತ್ತಿದ್ದಳು. ಇದನ್ನು ಒಳಗೆ ಅಡಗಿದ್ದ ಬಡಿಗ ಕೇಳಿದ. ಸ್ವಲ್ಪ ಕೆಮ್ಮಿದ. "ಯಾರು" ಅಂದಳು. "ತೊಂದರೆ ಕೊಡುವುದಿಲ್ಲ ಅಂದರೆ ಹೊರಗೆ ಬರುವೆ" ಅಂದ. ಒಪ್ಪಿದಳು. ಬಡಿಗ ಸಮೇದಿಂದ ಹೊರಗೆ ಬಂದ. ಅವನನ್ನು ನೋಡಿದ ಕೂಡಲೇ ರಾಣಿಗೆ ಅವನ ಮೇಲೆ ಮೋಹವುಂಟಾಯಿತು. ರಾಜ ಬೇಟೆಯಾಡಿ ಮರಳಿ ಬರುವ ಮೂರು ದಿನಗಳವರೆಗೆ ಇಬ್ಬರೂ ಕೂಡಿ ಇದ್ದು ಸುಖ ಅನುಭವಿಸಿದರು. ರಾಜ ಬರುವ ಹೊತ್ತಾದ ಕೂಡಲೇ ಬಡಿಗ ಸಮೇ ಸೇರಿದ.

ರಾಜ ಬಂದು ಊಟೋಪಚಾರ ಮುಗಿಸಿ ಪಟ್ಟದ ಮಂಚದ ಮೇಲೆ ರಾಣಿಯೊಂದಿಗೆ ಕುಳಿತು ವೀಳ್ಯ ತಿನ್ನುತ್ತಿದ್ದ. ರಾಣಿ ಕಾಚನ್ನು ಬಾಯಲ್ಲಿ ಹಾಕಿಕೊಂಡು "ಯಾರ ಬಾಯಿ ಹೆಚ್ಚು ಕೆಂಪಗಾಗಿದೆ ನೋಡು" ಅಂದಳು. ರಾಜ ಇಬ್ಬರ ಬಾಯನ್ನು ನೋಡಿದ. ಅವಳ ಬಾಯಿ ಹೆಚ್ಚು ಕೆಂಪಗಾಗಿತ್ತು. ಅದಕ್ಕೆ ಕಾರಣ ಕೇಳಿದಾಗ ಕಾಚು ತೋರಿಸಿದಳು. ಅದನ್ನು ಬಡಿಗ ಕೊಟ್ಟಿದ್ದು. ರಾಜನಿಗೆ ಸಂಶಯ ಬಂದಿತು. ಈ ಅರಮನೆಯಲ್ಲಿ ಯಾರು ಒಳಗೆ ಬರುವಂತಿಲ್ಲ. ಈ ಕಾಚಿನ ವಿಷಯ ಇವಳಿಗೆ ಹೇಗೆ ಗೊತ್ತಾಯಿತು? ಅವನ ಮನಸ್ಸಿಗೆ ಬಹಳ ಬೇಜಾರಾಯಿತು. ಊರು ಬಿಟ್ಟು ಹೋಗಿ ಅರಣ್ಯ ಸೇರಿದ. ಆಲದ ಮರದ ಮೇಲೆ ಕೂತ. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿಗೆ ಒಬ್ಬ ಋಷಿ ಬಂದ. ಮರದ ಕೆಳಗೆ ಕುಳಿತು ತನ್ನ ಜಡೆಯೊಳಗಿದ್ದ ಹೆಂಡತಿಯನ್ನು ಹೊರಗೆ ತೆಗೆದನು. ಅವಳು ಬಹಳ ಸುಂದರಿಯಾಗಿದ್ದಳು. ತನ್ನ ಸುಂದರ ಹೆಂಡತಿಯನ್ನು ಯಾರ ಕಣ್ಣಿಗೂ ಬೀಳಬಾರದೆಂದು ಮಂತ್ರಬಲದಿಂದ ತನ್ನ ಜಡೆಯಲ್ಲಿ ಇಟ್ಟುಕೊಂಡಿದ್ದ. ಹೆಂಡತಿಗೆ ಅಡಿಗೆ ಮಾಡಲು ಹೇಳಿ ನೀರು ತರಲು ಹೋದ. ಋಷಿ ಅತ್ತ ಹೋದ ಕೂಡಲೇ ಇತ್ತ ಅವನ ಹೆಂಡತಿ ತನ್ನ ಉಡಿಗಂಟಿನೊಳಗೆ ಅಡಗಿಸಿಟ್ಟುಕೊಂಡಿದ್ದ ಒಂದು ಪೆಟ್ಟಿಗೆ ಹೊರಗೆ ತೆಗೆದಳು. ಅದರಲ್ಲಿ ಒಂದು ಹಲ್ಲಿ ಇತ್ತು. ಮಂತ್ರ ಹಾಕಿದ ಕೂಡಲೇ ಹಲ್ಲಿ ಸುಂದರ ಗಂಡಸಾಗಿ ಮುಂದೆ ನಿಂತನು. ಅವನು ಅವಳ ಮಿಂಡ. ಅವನೊಂದಿಗೆ ಬಹಳಷ್ಟು ಸರಸವಾಡಿ ಮತ್ತೆ ಅವನನ್ನು ಹಲ್ಲಿ ಮಾಡಿ ಪೆಟ್ಟಿಗೆಯೊಳಗೆ ಹಾಕಿ ಅದನ್ನು ಉಡಿಗಂಟಿನೊಳಗೆ ಕಟ್ಟಿಕೊಂಡಳು. ಅಷ್ಟರಲ್ಲಿ ಋಷಿ ನೀರು ತೆಗೆದುಕೊಂಡು ಬಂದ. ಅಡಿಗೆ ಊಟ ಆದಮೇಲೆ ಗಂಡನೊಂದಿಗೂ ಸರಸವಾಡಿದಳು. ಇದನ್ನೆಲ್ಲಾ ನೋಡಿದ ರಾಜಕುಮಾರ ಋಷಿಯನ್ನು ಅರಮನೆಗೆ ಬಂದು ಊಟ ಮಾಡಿ ಹೋಗಬೇಕೆಂದು ಕೇಳಿ ಕರೆದುಕೊಂಡು ಬಂದ.

ಹೆಂಡತಿಗೆ ಅಡಿಗೆ ಮಾಡಲು ಹೇಳಿದ. ಅವಳು ಊಟಕ್ಕೆ ಕರೆದಳು. ರಾಜ ಆರು ಎಲೆ ಹಾಕಿಸಿದ. ಆರು ಎಲೆ ಯಾಕೆ? ಎಂದು ಋಷಿ ಕೇಳಿದ. ರಾಜ ಹೇಳತೊಡಗಿದ 'ಋಷಿಗಳೇ ನಿಮ್ಮ ಹೆಂಡತಿಯನ್ನು ಹೊರಗೆ ತೆಗೆಯಿರಿ ಅಂದ. ಋಷಿ ಹಾಗೆ ಮಾಡಿದ. ಋಷಿ ಹೆಂಡತಿಗೆ "ನಿನ್ನ ಮಿಂಡನನ್ನು ಹೊರಗೆ ತೆಗೆ" ಅಂದ. ಅವಳು ತನ್ನ ಉಡಿಗಂಟಿನೊಳಗಿಂದ ಮಿಂಡನನ್ನು ಹೊರಗೆ ತೆಗೆದಳು. ಆಮೇಲೆ ರಾಣಿಯನ್ನು ಕರೆದು "ನಿನ್ನ ಮಿಂಡನನ್ನು ಹೊರಗೆ ಕರೆದುಬಿಡು" ಅಂದ. ಬಡಿಗ ಹೊರಗೆ ಬಂದ. ಒಟ್ಟು ಆರು ಜನ ಊಟ ಮಾಡಿದರು. ತಾನು ಎಷ್ಟು ಕಟ್ಟುನಿಟ್ಟಿನಿಂದ ಬೆಳೆಸಿದರೂ ಹೆಣ್ಣು ಕೆಟ್ಟುಹೋದಳಲ್ಲಾ ಎಂದು ರಾಜಕುಮಾರ ಮನಸ್ಸಿಗೆ ನೋವು ಮಾಡಿಕೊಂಡು, ಋಷಿಗೂ ಹಾಗೆ ಅನ್ನಿಸಿ, ಅವರಿಬ್ಬರೂ

ಕೂಡಿ ತಮ್ಮ ತಮ್ಮ ಹೆಂಡತಿಯರಿಗೆ ಅವರವರ ಮಿಂಡನನ್ನು ಜೋಡಿ ಮಾಡಿ ದೇಶ ತಿರುಗುತ್ತಾ ಹೋಗಿಬಿಟ್ಟರು.

**ತೋರುಮುತ್ತು:** ಒಂದೂರಲ್ಲಿ ಒಬ್ಬ ಬಡವಿ; ಅವಳಿಗೊಬ್ಬ ಮಗ. ಇವಳು ತನ್ನ ಮಗನಿಗೆ ಅಣ್ಣನ ಮಗಳನ್ನು ತಂದು ಮದುವೆ ಮಾಡಿದಳು. ಆ ಹುಡುಗಿ ಬಹಳ ಚೆಲುವೆ. ದಿನಾಲು ಗಂಡನಿಗೆ ಮಧ್ಯಾಹ್ನದ ಬುತ್ತಿ ಒಯ್ಯುತ್ತಿದ್ದಳು. ಕೆಲ ದಿನಗಳು ಕಳೆಯುವಷ್ಟರಲ್ಲಿ ಅವಳು ಒಬ್ಬ ಪಿಂಜಾರನ ಜೊತೆ ಗೂಡಿದಳು. ಪ್ರತಿ ದಿನ ಅವನ ಮನೆಗೆ ಹೋಗುತ್ತಿದ್ದಳು. ಆದ್ದರಿಂದ ಬುತ್ತಿ ಒಯ್ಯುವುದು ತಡವಾಗುತ್ತಿತ್ತು. ಗಂಡನಿಗೆ ಸಂಶಯವುಂಟಾಗಿ, ಒಂದು ದಿನ ಪರೀಕ್ಷೆ ಮಾಡಿ ನೋಡಬೇಕೆಂದು ಅವಳಿಗೆ ಗೊತ್ತಾಗದಂತೆ ಮಾಳಿಗೆ ಹತ್ತಿ ಕುಳಿತ. ಅವಳು ನೀರು ಕೊಡ ತೆಗೆದುಕೊಂಡು ಮನೆ ಬಿಟ್ಟಳು. ಗಂಡ ಅವಳನ್ನು ಹಿಂಬಾಲಿಸಿದ. ಅವಳು ನೀರಿನ ಕೊಡ ಬಾವಿಯ ದಂಡೆಯ ಮೇಲಿಟ್ಟು ಪಿಂಜಾರನ ಮನೆಗೆ ಹೋದಳು. ಬಹಳ ಹೊತ್ತಿನ ಮೇಲೆ ಹೊರಗೆ ಬಂದಳು. ಗಂಡ "ಅವಳ ನಡತೆ ಸರಿಯಿಲ್ಲ ಪಿಂಜಾರನನ್ನು ಇಟ್ಟುಕೊಂಡಿದ್ದಾಳೆ ಆದ್ದರಿಂದ ನಾನು ಅವಳೊಂದಿಗೆ ಬಾಳುವೆ ಮಾಡಲೊಲ್ಲೆ" ಎಂದು ತಾಯಿಗೆ ತಿಳಿಸಿದ. ಅವಳು "ಇದ್ದಂಗೆ ಇರಲಿ ಅಣ್ಣನ ಮಗಳೆಂದ ಮೇಲೆ ಬಿಡಲಿಕ್ಕಾಗದು. ಹೇಗಾದರೂ ಮಾಡಿ ಹೊಂದಿಕೊಂಡಿರು" ಎಂದು ಅವನಿಗೆ ಬುದ್ಧಿ ಹೇಳಿದಳು ತಾಯಿ. ಆದರೆ ಅವನಿಗೆ ಮನೆಯಲ್ಲಿರಲಾಗಲಿಲ್ಲ. ಒಂದು ದಿನ ಯಾರಿಗೂ ಹೇಳದೆ ಕೇಳದೆ ಊರು ಬಿಟ್ಟು ಹೋದ. ಈ ಕಡೆ ಇವಳು ಪಿಂಜಾರನ ಮನೆ ಸೇರಿದಳು.

**ಹನ್ನೆರಡು ಊಟದ ಎಲೆಗಳು:** ಒಂದು ಊರಲ್ಲಿ ಒಬ್ಬ ರೈತ. ಅವನು ಒಂದು ಅತಿ ಸುಂದರವಾದ ಹೆಣ್ಣನ್ನು ಲಗ್ನವಾಗಿದ್ದ. ತನ್ನೂರಲ್ಲಿದ್ದರೆ ಯಾರಾದರೂ ತನ್ನ ಹೆಂಡತಿಯ ಮೇಲೆ ಮನಸ್ಸು ಮಾಡಿಯಾರು ಅಂತ ಯೋಚಿಸಿ ಊರ ಹೊರಗೆ ದೂರದಲ್ಲಿ ಮರದ ಮೇಲೆ ಮನೆ ಕಟ್ಟಿಸಿಟ್ಟ. ರೈತ ಒಮ್ಮೆ ಹೊರಗೆ ಹೋಗಿದ್ದ. ಆ ಕಡೆಗೆ ಒಬ್ಬ ಸುಂದರ ತರುಣನು ತಿರುಗಾಡುತ್ತ ಬಂದ. ಮನೆಯಲ್ಲಿದ್ದ ರೈತನ ಹೆಂಡತಿ ಹೊರಗೆ ಹಣಿಕಿ ಹಾಕಿದಾಗ ಒಮ್ಮೆಲೇ ಅವನು ಅವಳ ಕಣ್ಣಿಗೆ ಬಿದ್ದ. ಅವರಿಬ್ಬರ ದೃಷ್ಟಿಗಳು ಕೂಡಿದವು. ಒಬ್ಬರನ್ನೊಬ್ಬರು ಮೋಹಿಸಿದರು. ಅವಳು ಸನ್ನೆ ಮಾಡಿ ಅವನನ್ನು ಒಳಗೆ ಕರೆದಳು. ಇಬ್ಬರೂ ಮಂಚದ ಮೇಲೆ ಮಲಗಿದರು. ಅಷ್ಟರಲ್ಲಿಯೇ ರೈತ ಹೊರಗಿನಿಂದ ಬಂದ. ಅವಳು ಅವನನ್ನು ಮಂಚದ ಬುಡಕ್ಕೆ ಬಚ್ಚಿಟ್ಟಳು. ಆಮೇಲೆ ಒಳಗೆ ಬಂದ ರೈತ ಇದನ್ನೆಲ್ಲ ಸೂಕ್ಷ್ಮವಾಗಿ ಗಮನಿಸಿದ. ಅಲ್ಲಿಗೆ ಮೂರು ಜನ ಸಾಧುಗಳು ಬಂದು ಹೊರಭಾಗದಲ್ಲಿ ವಿಶ್ರಮಿಸಿಕೊಂಡರು. ಅವರು ತಮ್ಮ ಹೆಂಡಂದಿರನ್ನು ತಮ್ಮ ಜಡೆಯಲ್ಲಿ ಇಟ್ಟುಕೊಂಡಿದ್ದರು. ಸಾಧುಗಳಿಗೆ ನಿದ್ರೆ ಹತ್ತಿತ್ತು. ಅವರ ಹೆಂಡಂದಿರು ಜಡೆಯಿಂದ ಹೊರಗೆ ಬಂದರು. ಆ ಮೂವರೂ ಹೆಂಡಂದಿರು ಒಬ್ಬೊಬ್ಬನನ್ನು ಇಟ್ಟುಕೊಂಡಿದ್ದರು. ತಮ್ಮ ಗೆಳೆಯರನ್ನು ತಮ್ಮ ತಮ್ಮ ತಲೆಯಿಂದ ಹೊರಗೆ ತೆಗೆದು ಅವರೊಂದಿಗೆ ಮಲಗಿಕೊಂಡರು. ಇದನ್ನೆಲ್ಲ ರೈತ ನೋಡಿದ. ಮರುದಿನ ರೈತ ಸಾಧುಗಳನ್ನು ಊಟಕ್ಕೆ ಕರೆದು ಹನ್ನೆರಡು ಎಲೆಗಳನ್ನು ಹಾಕಿದ, ಸಾಧುಗಳು ಆಶ್ಚರ್ಯದಿಂದ ಇಷ್ಟು ಎಲೆಗಳೇಕೆ? ಎಂದರು. ರೈತ ಹೇಳಿದ "ನಿಮ್ಮ ಜಡೆಯಲ್ಲಿರುವ ನಿಮ್ಮ ಹೆಂಡಂದಿರು, ಅವರ

ತಲೆಯಲ್ಲಿರುವ ಅವರ ಮಿಂಡಂದಿರು ಹೊರಗೆ ತೆಗೆಯಿರಿ ಅಂದ, ಹೆಂಡತಿಯನ್ನು ಕರೆದು "ಮಂಚದ ಬುಡದಲ್ಲಿರುವವರನ್ನು ಕರೆ" ಅಂದ. ಎಲ್ಲರೂ ಸೇರಿ ಹನ್ನೆರಡು ಜನರಾದರು. ಊಟ ಮಾಡಿ ಅವರವರ ಮಿಂಡಂದಿರ ಹತ್ತಿರ ಅವರನ್ನು ಬಿಟ್ಟು ಸಾಧುಗಳ ಜೊತೆಗೆ ಇವನು ಸಾಧುವಾಗಿ ಸಂಚಾರಕ್ಕೆ ಹೋದನು.

**ಹಾದರ ಹೇಗೆ ಮಾಡಬೇಕು?**: ಒಂದೂರಲ್ಲಿ ಒಬ್ಬ ಮುದುಕಿ ಮೊಮ್ಮಗಳಿದ್ದರು. ಅವರು ಸಂತೆಗೆ ಹೋಗಬೇಕಾದರೆ ದಾರಿಯಲ್ಲಿ ರಾಜನ ಮನೆಯ ಮುಂದೆ ಜನ ಕೂಡಿದ್ದರು. ಆ ಊರಲ್ಲಿ ಒಬ್ಬ ಹೆಣ್ಣು ಮಿಂಡನನ್ನು ಇಟ್ಟುಕೊಂಡಿದ್ದಳು. ಆ ಪಂಚಾಯಿತಿ ನಡೆದದ್ದು ನೋಡಿ ಈ ಹುಡುಗಿ ಹೀಗೇಕೆ ಮಾಡಬೇಕು? ಹಾದರ ಮಾಡಿದರೆ ಗಂಡಗೆ ಕಂಡು ಆರು ತಿಂಗಳು, ಗಂಡಗೆ ಕಾಣದಂತೆ ಆರು ತಿಂಗಳು ಮಾಡಿ, ಆ ಮೇಲೆ ಗಂಡನೊಂದಿಗೆ ಒಂದಾಗಿ ಕೂಡಿ ಬಾಳಬೇಕು ಅಂತ ಅಂದಿದ್ದು ರಾಜನ ಕಿವಿಗೆ ಬಿತ್ತು. ರಾಜ ಏನಾದರೂ ಆಗಲಿ ಅವಳನ್ನು ಮದುವೆ ಆಗಲೇಬೇಕು ಎಂದು ಅವಳ ಅಜ್ಜಿಗೆ ಹೇಳಿ, ರೊಕ್ಕ ಕೊಟ್ಟು ಹುಡುಗಿಯನ್ನು ಮನೆಯಲ್ಲಿಟ್ಟುಕೊಂಡ.

ಕೆಲವು ವರ್ಷಗಳು ಕಳೆದವು. ಹುಡುಗಿ ದೊಡ್ಡವಳಾದ ಮೇಲೆ ಹಾದಿಗೆ ಹಂದರ ಹಾಕಿ ಬೀದಿಗೆ ತಳಿಕೊಟ್ಟು ವೈಭವದಿಂದ ಅವಳನ್ನು ಲಗ್ನವಾದ. ಆದರೆ ರಾಜ ಅವಳೊಂದಿಗೆ ಮಾತಾಡುತ್ತಿರಲಿಲ್ಲ, ಸಮೀಪ ಕೂಡ ಹೋಗುತ್ತಿರಲಿಲ್ಲ. ಊರ ಹೊರಗೆ ಮೂರಂತಸ್ತಿನ ಅರಮನೆ ಕಟ್ಟಿಸಿ ಅದರಲ್ಲಿ ಅವಳನ್ನಿಟ್ಟ, ಅಲ್ಲಿ ಬೇಕಾದ್ದು ಬೇಡಾದ್ದು ಎಲ್ಲ ಸುಖ ಇತ್ತು. ರಾಜ ಮಾತ್ರ ಅಲ್ಲಿಗೆ ಹೋಗುತ್ತಿರಲಿಲ್ಲ. ರಾಣಿ ಒಂದು ದಿನ ಮೂರಂತಸ್ತಿನ ಮನೆ ಮೇಲೆ ಕುಳಿತು ಸುತ್ತಲೂ ನೋಡುತ್ತಿದ್ದಳು. ದೂರದಲ್ಲಿ ಮುತ್ತು ಮಾರುವ ಸೆಟ್ಟಿ ಹೋಗುವುದು ಕಾಣಿಸಿತು. ಅವನನ್ನು ಕರೆದಳು. ಅವಳ ಅರಮನೆಯ ಪಕ್ಕದಲ್ಲಿಯೇ ಡೇರೆ ಹೊಡೆಯುವಂತೆ ಅವನಿಗೆ ತಿಳಿಸಿದಳು. ಅವನು ಹಾಗೆ ಮಾಡಿದ. ತನ್ನ ಮಂಚದಿಂದ ಆ ಡೇರೆಯೊಳಗೆ ಹೋಗುವಂತೆ ನೆಲಬಾವರ ತೋಡಿಸಿದಳು. ಸೆಟ್ಟಿಯೊಂದಿಗೆ ಸ್ನೇಹ ಮಾಡಿಕೊಂಡು, ರಾಜನ ಗೆಳೆತನ ಮಾಡಿಕೊಳ್ಳುವಂತೆ ಸೆಟ್ಟಿಗೆ ಹೇಳಿದಳು. ಸೆಟ್ಟಿ ಅವಳ ಮಾತಿನಂತೆ ರಾಜನ ಸ್ನೇಹ ಸಂಪಾದಿಸಿ ರಾಜನನ್ನು ತನ್ನ ಡೇರೆಗೆ ಬರುವಂತೆ ಮಾಡಿದ. ಒಂದು ದಿನ ಸೆಟ್ಟಿ ರಾಜ ಪಗಡೆಯಾಟ ಆಡಬೇಕಾದರೆ ಇವಳು ಹಣ್ಣುಹಂಪಲು ಕೊಡುವಂತೆ ನಟನೆ ಮಾಡುತ್ತಿದ್ದಳು. ರಾಜನಿಗೆ ಆಶ್ಚರ್ಯ ತನ್ನ ರಾಣಿಯಂತೆ ಇವಳು ಇರುವಳೆಂದು ತಟ್ಟನೆ ಎದ್ದು ರಾಣಿ ಅರಮನೆಯ ಕಡೆಗೆ ಹೊರಟ. ರಾಣಿ ನೆಲಬಾರದೊಳಗಿಂದ ದಾಟಿ ಬಂದು ಬೇರೆ ಸೀರೆ ಉಟ್ಟುಕೊಂಡು ಮಂಚದ ಮೇಲೆ ಮಲಗಿದಳು. ರಾಜ ಬಂದ ನೋಡಿದ. ತನ್ನ ರಾಣಿ ಇಲ್ಲಿ ನಿದ್ರಿಸುತ್ತಿದ್ದಾಳೆಂದು ಸಮಾಧಾನ ಮಾಡಿಕೊಂಡು ಹೋದ. ರಾಣಿ ಇದೇ ರೀತಿ ಮಾಡುತ್ತ ಸೆಟ್ಟಿಯೊಂದಿಗೆ ಆರು ತಿಂಗಳ ಕಾಲ ಹಾದರ ಮಾಡಿದಳು. "ಗಂಡನಿಗೆ ಕಂಡು ಆರು ತಿಂಗಳು ಹಾದರ ಮಾಡಬೇಕು" ಎಂಬ ಮಾತು ಗೆದ್ದಂತಾಯಿತು. ರಾಣಿ ಆ ಮುತ್ತಿನ ಸೆಟ್ಟಿಯೊಂದಿಗೆ ಆರು ತಿಂಗಳ ಅವನ ಊರಿಗೆ ಹೋದಳು. ರಾಜ ಎಷ್ಟು ಹುಡುಕಿದರೂ ಕಾಣಲೇ ಇಲ್ಲ. ಅಲ್ಲಿಗೆ "ಗಂಡನಿಗೆ ಕಾಣದಂತೆ ಆರು ತಿಂಗಳು ಹಾದರ ಮಾಡಬೇಕು" ಎನ್ನುವ ಮಾತನ್ನು ಗೆದ್ದಂತಾಯಿತು. ಸೆಟ್ಟಿಗೆ ಮತ್ತೊಂದು ಲಗ್ನ ಮಾಡಿಸಿ ತಾನು ತನ್ನೂರ ಕಡೆಗೆ ಹೊರಟಳು. ಸೆಟ್ಟಿ ಸಂಗಡ ಒಬ್ಬ ಆಳನ್ನು ಕಳಿಸಿದ.

ರಾಣಿ ಬೇರೆ ವೇಷ ಹಾಕಿದ್ದಳು. ಆಳಿಗೆ ಎಲ್ಲ ಕಲಿಸಿಕೊಂಡು ಬಂದಳು. ಅವನು ಅವಳ ಅಣ್ಣನೆಂದು ಹೇಳಿಕೊಳ್ಳುತ್ತಿದ್ದ. ರಾಜನ ಊರಿಗೆ ಬಂದು ಅವನ ಮನೆಯ ಮುಂದೆಯೇ ಒಂದು ಮನೆ ಬಾಡಿಗೆ ತೆಗೆದುಕೊಂಡು ಇರತೊಡಗಿದರು. ರಾಣಿ ಆಗಾಗ ಸ್ವಲ್ಪ ಸ್ವಲ್ಪ ಕಾಣಿಸಿಕೊಳ್ಳುತ್ತಿದ್ದಳು. ರಾಜನ ಕಣ್ಣು ಅವಳ ಮೇಲೆ ಬಿತ್ತು.

ಈ ಕಡೆ ಒಂದು ದಿನ ರಾಣಿಯ ಅಣ್ಣ ಊರಿಗೆ ಹೋಗುವುದಾಗಿ ರಾಜನ ಹತ್ತಿರ ಹೇಳಿದ. ರಾಜ ಇಂಥ ಸಂದರ್ಭವನ್ನೇ ಎದುರು ನೋಡುತ್ತಿದ್ದ. "ಇಂದಿನ ರಾತ್ರಿ ಅರಮನೆಗೆ ಬರಬೇಕೆಂದು ಹೇಳಿ ಕಳುಹಿಸಿದ. ಇವಳು ಒಪ್ಪಿದಳು. ರಾತ್ರಿ ಮುಸುಕು ಹಾಕಿಕೊಂಡು ಅರಮನೆಗೆ ಬಂದಳು. ಮಲಗುವ ಕೋಣೆಯಲ್ಲಿದ್ದ ದೀಪವನ್ನು ರಾಣಿ ಆರಿಸಿ ಆ ಮೇಲೆ ಮಂಚ ಏರಿದಳು. ಆ ರಾತ್ರಿ ಅವರಿಬ್ಬರೂ ಸುಖವಾಗಿ ಕಳೆದರು. ಇದರಿಂದಾಗಿ "ಆಮೇಲೆ ಗಂಡನನ್ನು ಕೂಡಿ ಸುಖವಾಗಿರಬೇಕು" ಎನ್ನುವ ಮೂರನೇ ಮಾತು ಗೆದ್ದಂತಾಯಿತು. ಬೆಳಗಾಯಿತು, ರಾಜ ಎದ್ದು ನೋಡುತ್ತಾನೆ ತನ್ನ ಪಕ್ಕದಲ್ಲಿ ಮಲಗಿರುವವಳು ಬೇರೆ ಯಾರು ಅಲ್ಲ, ತನ್ನ ರಾಣಿಯೇ. ಅವಳನ್ನು ಎಬ್ಬಿಸಿದ. ಅವಳು ತನ್ನ ಮಾತುಗಳನ್ನು ಗೆದ್ದ ರೀತಿಯನ್ನೆಲ್ಲ ರಾಜನಿಗೆ ವಿವರಿಸಿದಳು.

ಹೀಗೆ ವಿವಾಹಬಾಹಿರ ಸಂಬಂಧಗಳು ಜನಪದ ಕಥಾ ಸಾಹಿತ್ಯದಲ್ಲಿ ಅಪಾರವಾಗಿ ಕಂಡುಬರುತ್ತವೆ. ಸಮಾಜದ ನೀತಿ ನಿಯಮಗಳನ್ನು ಮೀರಿ ಕುಟುಂಬದ ಚೌಕಟ್ಟನ್ನು ದಾಟಿ ಇಂತಹ ಸಂಬಂಧದಲ್ಲಿ ಭಾಗಿಯಾದವರಿಗೆ ಸಮಾಜ ಯಾವುದೇ ರೀತಿಯ ಪ್ರೀತಿ ವಿಶ್ವಾಸಗಳನ್ನು ತೋರಿಸುವುದಿಲ್ಲ. ಏಕೆಂದರೆ ಇಡೀ ಸಮಾಜವನ್ನೇ ಧಿಕ್ಕರಿಸುವ ಮಟ್ಟಕ್ಕೆ ಅವರು ನಿಂತಿರುತ್ತಾರೆ. ಆ ಕಾರಣದಿಂದ ದಾಂಪತ್ಯದ ಹೊಸ್ತಿಲನ್ನು ದಾಟಿದವರಿಗೆ ಯಾವ ಕಾಲಕ್ಕೂ ಸಮಾಜದಲ್ಲಿ ಮಾನ್ಯತೆ ಇರುವುದಿಲ್ಲ ಎಂಬುದು ಜನಪದ ಕಥೆಗಳಲ್ಲಿ ತಿಳಿಯುತ್ತದೆ. ಇಲ್ಲಿ ಏನನ್ನು ಕೊಡಲು ಹಲವಾರು ಸಂಕಷ್ಟಗಳು ಬಂದರೆ ತಾವೇ ಅದನ್ನು ಹಂತಹಂತವಾಗಿ ಬಗೆಹರಿಸಿಕೊಂಡು ಹೋಗುವಂತಹದನ್ನು ಮಾಡಬೇಕಾಗುತ್ತದೆ. ಸಮುದಾಯದಲ್ಲಿ ಇವರನ್ನು ಕೀಳಾಗಿ ಕಂಡು ಯಾವುದೇ ಸಭೆ ಸಮಾರಂಭಗಳಿಗೆ ಕರೆಯುವಂತಿಲ್ಲ. ಹೀಗೆ ನಾನಾ ರೀತಿಯ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಪ್ರೀತಿ, ಪ್ರೇಮ ಎನ್ನುವುದು ಕುರುಡು ಎಂಬ ಮಾತಿನಂತೆ ಒಲವಿನ ಆತುರದಲ್ಲಿ ಹರೆಯದ ಮನಸ್ಸುಗಳು ಚಡಪಡಿಸುವ ಸಂದರ್ಭಗಳನ್ನು ಕಾಣಬಹುದು. ಜನಪದ ಕಥೆಗಳಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗಿ ಕಂಡುಬರುವುದರಿಂದ ಅಂತಹ ಕುಟುಂಬಗಳಲ್ಲಿ ವಿವಾಹ ನಂತರದ ಸಂಬಂಧಗಳಿಗೆ ಯಾವುದೇ ರೀತಿಯ ಪ್ರೋತ್ಸಾಹ ಸಿಗದಿರುವುದು ಈಗಲೂ ಕಂಡುಬಂದಿದೆ. ಆದ್ದರಿಂದ ಬೇರೆ ದಾರಿ ಕಾಣದೆ ನದಿಗೋ ಅಥವಾ ಇನ್ಯಾವುದಕ್ಕೋ ಸಿಕ್ಕಿ ಸತ್ತು ಒಂದಾಗುವುದನ್ನು ಸಾಮಾನ್ಯವಾಗಿ ಎಲ್ಲಾ ಕಥೆಗಳಲ್ಲಿ ನೋಡಬಹುದಾಗಿದೆ. ಕೆಲವು ಸಮಯದಲ್ಲಿ ಹೆತ್ತ ಕರುಳನ್ನು ದೂರ ಮಾಡಿದಂತಹ ಹಲವಾರು ಕಥೆಗಳಲ್ಲಿ ದೊರೆಯುತ್ತವೆ. ಹೀಗೆ ವಿವಾಹೋತ್ತರ ಸಂಬಂಧಕ್ಕೆ ತಮ್ಮದೇ ಆದ ಕೊಡುಗೆಗಳನ್ನು ಪ್ರಣಯಿಗಳು ನೀಡುತ್ತಾ ಬಂದಿರುವುದನ್ನು ಗಮನಿಸಬಹುದು.[೨]

ಒಟ್ಟಾರೆಯಾಗಿ ಜನಪದ ಕಥೆಗಳಲ್ಲಿ ಎಲ್ಲಾ ರೀತಿಯ ಅನುಭವಗಳು ಕಂಡುಬಂದರೂ ಎಲ್ಲೋ ಒಂದು ಕಡೆ ಮೆಚ್ಚಿದವನನ್ನು ಮನಸ್ಸಿನಲ್ಲಿ ಆರಾಧಿಸುವುದು ಮತ್ತೊಂದು ಸಾಮಾಜಿಕ ಕಟ್ಟಳೆಗಳಿಗೆ ಹೆದರುವುದು ಇವೆಲ್ಲದರ ನಡುನಡುವೆ ಸಂಬಂಧಗಳನ್ನು ಉಳಿಸುವ ದಾರಿಯಲ್ಲಿ ಹೋರಾಡುವುದು ಜನಪದದಲ್ಲಿ ಮಾತ್ರ ಸಾಧ್ಯ. ಕೆಲವು ಸಂದರ್ಭದಲ್ಲಿ ದುರಂತದಲ್ಲಿ ಅಂತ್ಯವಾಗುತ್ತದೆ. ಹಲವು ಸುಖಾಂತದಲ್ಲಿ ಕೊನೆಗೊಳ್ಳುತ್ತದೆ.

**ಅಡಿಟಿಪ್ಪಣಿಗಳು**

೧. ಪರಮಶಿವಯ್ಯ ಜಿ.ಶಂ., ಜನಪದ ಜೀವನದಲ್ಲಿ ಮದುವೆ ಸಂಪ್ರದಾಯ, ಜಾನಪದ ಸಂಪುಟ–೪, ಸಂಚಿಕೆ–೭, ಪು. ೧೭

೨. ರಾಜಶೇಖರಯ್ಯ ಎಲ್., 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿವಾಹ ಪದ್ಧತಿ' ಅಬಿರುಚಿ ಪ್ರಕಾಶನ, ಕೆ.ಆರ್. ವೃತ್ತ, ಮೈಸೂರು, ೨೦೦೨, ಪು. ೪೭

೩. ಅದೇ ಪು. ೪೭

೪. ಅದೇ ಪು. ೪೮

೫. ಅದೇ ಪು. ೪೮

೬. ಅದೇ ಪು. ೪೭

೭. ಅನಂತರಾಮಯ್ಯ ಆರ್.ಎಲ್. 'ಪಂಪಭಾರತ ಕಥಾಲೋಕ' ಸಮಾಜ ಪುಸ್ತಕಾಲಯ, ಧಾರವಾಡ, ೧೯೯೫, ಪು. ೭೬

೮. ಅದೇ ಪು. ೭೭

೯. ಅದೇ ಪು. ೭೭

೧೦. ಅನಂತರಂಗಾಚಾರ್ ಎನ್., 'ಪಂಪಭಾರತ' ಪ್ರಥಮಾಶ್ವಾಸ ಪದ್ಯ–೬೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭, ಪು. ೮೭

೧೧. ಲಕ್ಕಪ್ಪಗೌಡ ಎಚ್.ಜೆ., 'ಕರ್ನಾಟಕ ಬುಡಕಟ್ಟುಗಳು', ಸಂ–೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮, ಪು. ೯೦

೧೨. ಅದೇ ಪು. ೧೦೫

೧೩. ಅದೇ ಪು. ೩೯೫

೧೪. ಅದೇ ಪು. ೭೯೫

೧೫. ಅದೇ ಪು. ೮೨೫

೧೬. ಶ್ರೀಮತಿ ಎಚ್.ಎಸ್., 'ಹೆಣ್ಣು ಹೆಂಗಸು' ಬ್ಯಾಲದಕೆರೆ ಪ್ರಕಾಶನ, ಮಂಡ್ಯ, ೨೦೦೪, ಪು. ೭೭

೧೭. ಅದೇ ಪು. ೨೫

೧೮. ಅದೇ ಪು. ೨೫

೧೯. ಚಂದ್ರಶೇಖರ ಕಂಬಾರ 'ಕನ್ನಡ ಜಾನಪದ ವಿಶ್ವಕೋಶ' ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫, ಪು. ೬೪

೨೦. ವರದರಾಜನ್ ಕೆ.ಎಂ., ಕನ್ನಡ ಜಾನಪದ ಕಥನ ಕಾವ್ಯಗಳಲ್ಲಿ ಹೆಣ್ಣು-ಗಂಡಿನ ಸಂಬಂಧ, ರಾಜೇಂದ್ರ ಪ್ರಿಂಟರ್ ಅಂಡ್ ಪಬ್ಲಿಕೇಷನ್ಸ್, ಮೈಸೂರು, ೨೦೧೨, ಪು. ೧೦೦

೨೧. ಅದೇ ಪು. ೧೦೨

೨೨. ರಾಜೇಗೌಡ ಹ.ಕ. 'ಮುತ್ತು ತುಂಬೇವು ಕಣಜಕೆ', ಪು ೧೪

೨೩. ಸುನಂದಮ್ಮ ಆರ್., 'ಜನಪದ ಸಾಹಿತ್ಯದ ಮಹಿಳಾ ಜಗತ್ತು', ಪು. ೨೬

೨೪. ಡಾ. ಯಶೋಧಶಾಸ್ತ್ರಿ, ಗುಲ್ಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು, ಜ್ಯೋತಿರ್ಮಯಿ ಪ್ರಕಾಶನ, ಗುಲ್ಬರ್ಗಾ ೧೯೯೯, ಪು. ೩೫

೨೫. ಅದೇ, ಪು. ೩೯

೨೬. ಅದೇ, ಪು. ೪೭

೨೭. ಅದೇ, ಪು. ೬೫

೨೮. ಅದೇ, ಪು. ೭೭

೨೯. ಕನ್ನಡ ಜನಪದ ಕಥನ ಕಾವ್ಯಗಳು ಹೆಣ್ಣು-ಗಂಡಿನ ಸಂಬಂಧ, ಸಂ. ಡಾ.ಕೆ.ಎಂ. ವರದರಾಜನ್, ಸಂವಹನ ಪ್ರಕಾಶನ, ಮೈಸೂರು ೨೦೧೨ ಪು. ೪೮

೩೦. ಅದೇ, ಪು. ೫೭

೩೧. ಡಾ. ದೇವೇಂದ್ರ ಕುಮಾರ ಹಕಾರಿ, ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ, ಪು. ೩೪೬

೩೨. ಕನ್ನಡ ಜನಪದ ಕಥನ ಕಾವ್ಯಗಳು ಹೆಣ್ಣು-ಗಂಡಿನ ಸಂಬಂಧ, ಸಂ. ಡಾ.ಕೆ.ಎಂ. ವರದರಾಜನ್, ಸಂವಹನ ಪ್ರಕಾಶನ, ಮೈಸೂರು ೨೦೧೨ ಪು. ೬೨

* * *

ಅಧ್ಯಾಯ ಆರು

# ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿ ವಿಘಟನೆ ಸ್ವರೂಪ

ಆದಿಕಾಲದಿಂದಲೂ ಸ್ತ್ರೀ-ಪುರುಷ ಜೊತೆಜೊತೆಗೆ ಜೀವನ ನಡೆಸಿರುವುದನ್ನು ಕಾಣುತ್ತೇವೆ. ಮನುಷ್ಯರಲ್ಲಿ ಜೊತೆಗೂಡುವಿಕೆಯೆಂಬ ಮನೋದ್ರೇಕವಾದ ಗುಣವೊಂದಿರುತ್ತದೆ. ಪ್ರಕೃತಿಯಲ್ಲಿ ಇರುವ ಪ್ರಾಣಿಗಳು, ಪಕ್ಷಿಗಳು ಹುಳುಗಳಾದಿಯಾಗಿ ಮನುಷ್ಯರೂ ಸಹ ಆ ಕೆಲಸವನ್ನೇ ಮಾಡುತ್ತಾರೆ. ಮಾಡದೆ ವಿಧಿಯಿಲ್ಲ. ಅದು ಒಬ್ಬರ ಇಷ್ಟದ ಮೇಲ್ಪಟ್ಟಿರುವ ವಿಷಯವಲ್ಲ. ಪ್ರಕೃತಿ ಸೂತ್ರ. ಜಾತಿಯನ್ನುಳಿಸಿಕೊಳ್ಳುವ ಮಾರ್ಗ, ಅದಕ್ಕೆ ಅಡೆತಡೆಯೆಂಬುದಿಲ್ಲವೆಂದು ಈಗಾಗಲೇ ತಿಳಿದುಬಂದಿದೆ. ಈ ಜೊತೆಗೂಡುವಿಕೆಯಲ್ಲಿ ಈಗ ಬಹಳ ನಿಯಮಗಳು ಉಂಟಾಗಿವೆ. ಇಷ್ಟ-ಅನಿಷ್ಟ, ಅಂದ-ಚೆಂದ, ಆಚಾರ-ಗೌರವ ಇಂತಹವುಗಳ ಬಗ್ಗೆ ಈಗ ಅನೇಕ ರೀತಿಗಳಲ್ಲಿ ಯೋಚಿಸುತ್ತಾರೆ. ಆದರೆ, ಆರಂಭದ ಕಾಲದಲ್ಲಿ ಮನುಷ್ಯರ ವರ್ತನೆ, ಯೋಚನೆ, ಬದುಕು ಪ್ರಾಣಿಗಳಂತೆಯೇ ಇರುತ್ತಿತ್ತು. ಪ್ರಾಣಿಗಳಲ್ಲಿ ಆರಿಸಿಕೊಳ್ಳುವುದರಂತೆ, ಮನುಷ್ಯರಲ್ಲೂ ಜೊತೆಗೂಡುವುದರಲ್ಲಿ ಆರಿಸಿಕೊಳ್ಳುವಿಕೆಯೆಂಬುದು ಬಹುಶಃ ಇಲ್ಲದಿದ್ದಿರಬೇಕು. ಸ್ವೇಚ್ಛೆಯಾಗಿ, ಅಂದರೆ ಉದ್ರೇಕಗೊಂಡಾಗ ವಿಹರಿಸಿ ಜೊತೆಗೂಡುವುದೇ ನಡೆಯುತ್ತಿತ್ತು. ಲಾವೆ-ವರಸೆ, ನಿಷೇಧ, ಆಕಾಂಕ್ಷೆ ಇಂತಹ ಯಾವುವು ಇರಲು ಸಾಧ್ಯವಿಲ್ಲ. ಅವು ಇರುತ್ತಿರಲು ಇಲ್ಲ. ಕಾಮವಾಂಛೆಯುಂಟಾದಾಗ ಜೊತೆಗೂಡುವುದೇ ಸಹಜ ಕಾರ್ಯ.[೧]

ಭೂಮಿಯ ಮೇಲೆ ಹುಟ್ಟಿದ ಜೀವಂತವಿರುವ ಸಸ್ಯಗಳಾಗಲಿ, ಪ್ರಾಣಿಗಳಾಗಲಿ, ತಮ್ಮ ವಂಶೋತ್ಪತ್ತಿ ಕ್ರಿಯೆಯಲ್ಲಿ ತೊಡಗಲೇಬೇಕು. ಇಲ್ಲವಾದರೆ ಸೃಷ್ಟಿಕ್ರಿಯೆ ಮುಂದುವರಿಯಲು ಸಾಧ್ಯವೇ ಇಲ್ಲ. ಸಸ್ಯ, ಪ್ರಾಣಿ ವರ್ಗಗಳೆರಡರಲ್ಲೂ ಈ ರೀತಿಯ ಸೃಷ್ಟಿ ಕ್ರಿಯೆ ಮುಂದುವರಿಯಬೇಕಾದರೆ, ಅವುಗಳಲ್ಲಿ ಹೆಣ್ಣು

ಗಂಡುಗಳು ಇರಲೇಬೇಕು. ಈ ಭಿನ್ನ ಲಿಂಗಗಳಲ್ಲಿ ಒಂದು ನಿರ್ದಿಷ್ಟ ವಯಸ್ಸಿಗೆ ಸೃಷ್ಟಿ ಪ್ರಕ್ರಿಯಾಶಕ್ತಿ ಜಾಗೃತಗೊಳ್ಳುತ್ತದೆ. ಆ ಸಮಯದಲ್ಲಿ ಸಸ್ಯಗಳಲ್ಲಾದರೆ ಹೂಗಳು ಅರಳುತ್ತವೆ. ಆ ಹೂವಿನಲ್ಲಿ ಹುದುಗಿರುವ ಮಕರಂದದ ಆಹಾರ ಪಡೆಯಲು ದುಂಬಿಗಳು, ಕೀಟಗಳೂ ಹೂಗಳಿಂದ ಆಕರ್ಷಿತಗೊಂಡು ಆಹಾರ ಪಡೆಯುವುದರ ಜೊತೆಗೆ ತಮಗೆ ಗೊತ್ತಿಲ್ಲದೆಯೇ ಸಸ್ಯಗಳ ನಡುವೆ ಪರಾಗ ಸ್ಪರ್ಶಕ್ರಿಯೆ ನಡೆಯಲು ಸಹಕರಿಸುತ್ತವೆ. ಆ ಮೂಲಕ ಅವುಗಳಲ್ಲಿ ಸೃಷ್ಟಿಕ್ರಿಯೆ ನಡೆಯುತ್ತದೆ. ಪ್ರಾಣಿಗಳಲ್ಲಿಯೂ ನಿರ್ದಿಷ್ಟ ವಯಸ್ಸಿಗೆ, ನಿಯಮಿತ ಕಾಲಕ್ಕೆ ವಂಶೋತ್ಪತ್ತಿ ಕ್ರಿಯೆ ಆರಂಭಗೊಳ್ಳುತ್ತದೆ. ಎಲ್ಲಾ ಪ್ರಾಣಿ-ಪಕ್ಷಿಗಳು, ಕೀಟಾದಿಗಳು ತಮ್ಮದೇ ಆದ ವಿವಿಧ ರೀತಿಯ ಆಕರ್ಷಣೆಗಳಿಂದ ಹೆಣ್ಣುಗಂಡುಗಳು ಅನಿರ್ಬಂಧವಾಗಿ ಸೇರಿ ಆ ಕ್ರಿಯೆ ಮುಗಿದ ಮೇಲೆ ಪರಸ್ಪರರು ಗುಂಪಿನಲ್ಲಿಯೇ ವಾಸಿಸುತ್ತವೆ. ವಯಸ್ಸಿಗೆ ಬಂದಿದ್ದರೂ ಇವುಗಳು ನಿರ್ದಿಷ್ಟ ಹದಗಾಲದಲ್ಲಿ ಮಾತ್ರವೇ ವಂಶೋತ್ಪತ್ತಿ ಕ್ರಿಯೆಯಲ್ಲಿ ತೊಡಗುತ್ತವೆ. ಆ ಕ್ರಿಯೆಯ ಮಹತ್ವ ತಿಳಿಯದಿದ್ದರೂ ಆರೋಗ್ಯವಂತವುಗಳೆಲ್ಲವೂ ಆ ಸಮಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತವೆ.

ಮಾನವ ಪ್ರಾಣಿ ಉಳಿದೆಲ್ಲಾ ಜೀವಿಗಳಂತೆಯೇ ಕಾಲ ಕಳೆದು ಹಲವು ಹಂತಗಳನ್ನು ದಾಟಿ ಅವೆಲ್ಲವುಗಳಿಗಿಂತ ಅದೆಷ್ಟೋ ಎತ್ತರದಲ್ಲಿದೆ. ಈ ಮಾನವ ಪ್ರಾಣಿಗೆ ವಂಶೋತ್ಪತ್ತಿ ಕ್ರಿಯೆಯಲ್ಲಿ ತೊಡಗಲು ನಿರ್ದಿಷ್ಟ ಸಂಯೋಗ ಕಾಲವೆಂಬುದಿಲ್ಲ. ಸರ್ವಋತುಗಳು ಮಾನವನಿಗೆ ಸಹಕಾರಿ, ಇತಿಹಾಸ ಪೂರ್ವದ ಆದಿಮಾನವನಿಗೆ ಪ್ರಾಣಿಗಳಲ್ಲಿರುವಂತೆ ಕೇವಲ ಲೈಂಗಿಕ ಪ್ರವೃತ್ತಿಯಷ್ಟೇ ಜೀವನದ ನಿರಂತರತೆಗೆ, ಸಂತಾನಾಭಿವೃದ್ಧಿಗೆ ಕಾರಣವಾಗಿತ್ತು. ಆದಿಮಾನವ ಒಂದೆಡೆ ನೆಲೆನಿಂತು ಪ್ರಕೃತಿಯತ್ತ ಕಣ್ಣು ತೆರೆದು ಅದರ ರಹಸ್ಯವನ್ನು ಭೇದಿಸಲು ಅರಿತಾಗ ನಾಗರಿಕ ಸಂಸ್ಕೃತಿ ಪ್ರಾರಂಭವಾಯಿತು. ಅದು ಸ್ತ್ರೀ-ಪುರುಷ ಜೊತೆಜೊತೆಯಾಗಿ ಬಾಳ್ವೆ ನಡೆಸಲು ನಾಂದಿಯಾಯಿತು. ಮುಂದೆ ಅವರ ಸಂತಾನ ಸಂಬಂಧವಾಗಿ ಅವರಿಬ್ಬರನ್ನೂ ಒಂದೆಡೆ ಸ್ಥಿರವಾಗಿ ನೆಲೆಗೊಳಿಸಲು ವಿವಾಹ ಅನಿವಾರ್ಯವಾಯಿತು. ಇದರಿಂದ ತಂದೆ-ತಾಯಿ, ಮಕ್ಕಳೆಂಬ ಒಕ್ಕೂಟ ಸ್ಥಾಪನೆಯಾಗಿ ವಿವಾಹ ಒಂದು ಸಾಮಾಜಿಕ ಸಂಸ್ಥೆಯಾಗಿ ಬೆಳೆದುಬಂದಿತು. ಆಹಾರ ನಿದ್ರೆಗಳಷ್ಟೇ ಮೂಲಭೂತ ಪ್ರವೃತ್ತಿಯಾದ ಕಾಮ ಕೂಡ ಮನುಷ್ಯನಿಗೆ ಸಹಜವಾದುದಾಗಿದೆ. ಇದು ಒಂದು ಕಾಲದಲ್ಲಿ ಸ್ವಚ್ಛಂದತೆಗೆ ಕಾರಣವಾಗಿದ್ದು, ವಿವಾಹ ಸಂಸ್ಥೆ ರೂಪುಗೊಂಡ ಮೇಲೆ ಸ್ವಚ್ಛಂದತೆಗೆ ಕಡಿವಾಣ ಬಿದ್ದಿತ್ತು. ತದನಂತರ ಸ್ತ್ರೀ-ಪುರುಷರು ತಮ್ಮ ದಾಂಪತ್ಯ ಬದುಕಿಗಾಗಿ ಸಮಾಜದ ಸಮ್ಮತಿ ಅಥವಾ ಅಂಗೀಕಾರವನ್ನು ಧರ್ಮಸಮ್ಮತವಾದ ವಿವಾಹ ಸಂಸ್ಕಾರದ ಮೂಲಕ ಪಡೆಯತೊಡಗಿದಾಗ ವಿವಾಹವೆಂಬುದು ಧಾರ್ಮಿಕ ಪರವಾನಗಿಯ ಮುದ್ರೆಯನ್ನು ಪಡೆದುಕೊಂಡಿತು. ತಿನ್ನುವ ಆಹಾರ, ಧರಿಸುವ ಉಡುಪು ಅಥವಾ ಈಗಿರುವ ನಿಯಮ ನಿರ್ಬಂಧಗಳು ಕಾರಣವಾಗಿ ವಯಸ್ಸಿಗೆ ಬಂದ ಗಂಡು-ಹೆಣ್ಣು ಸಂಗಾತಿಗಳಾಗಿ ಸದಾ ಜೊತೆಯಾಗಿರಲು ಬಯಸುವುದು ಸಹಜ. ಸಂಘಜೀವಿಯಾದ, ಸಮಾಜಜೀವಿಯಾದ ಮಾನವ ವಿವಾಹದ ಮೂಲಕ ಕುಟುಂಬವೆಂಬ ಘಟಕದ ಮೂಲಕ ಚೌಕಟ್ಟನ್ನು ಹಾಕಿಕೊಂಡು ಜೀವಿಸುತ್ತಿದ್ದಾನೆ. ಈ ಕುಟುಂಬ ವ್ಯವಸ್ಥೆ ರೂಪುಗೊಳ್ಳುವ ಮೊದಲು ಗಂಡು-ಹೆಣ್ಣು ಕೂಡುವಿಕೆಯಲ್ಲಿ ಯಾವುದೇ ನಿರ್ಬಂಧಗಳಿಲ್ಲದೆ, ವಂಶಾಭಿವೃದ್ಧಿ ಪಡೆಯುವ ಅವಕಾಶಗಳಿದ್ದವು. ತಂದೆ,

ಮಕ್ಕಳು, ಅಣ್ಣ ತಂಗಿಯರು ಎಂಬ ಭೇದವಿಲ್ಲದೆ ಕೇವಲ ಗಂಡು-ಹೆಣ್ಣು ಎಂಬ ವ್ಯತ್ಯಾಸವಿದ್ದು, ಪಶು ಪ್ರವೃತ್ತಿ ಮಾನವರಲ್ಲಿಯೂ ಸಾಮಾನ್ಯವಾಗಿತ್ತು. ಕಾಲಾನಂತರ ಕುಟುಂಬ ವ್ಯವಸ್ಥೆ ಸುಧಾರಣೆಗೊಂಡು ಬಹುಪತಿತ್ವ, ಬಹುಪತ್ನಿತ್ವ ಹಾಗೂ ಏಕಪತಿತ್ವ ನಿಯಮಗಳು ರೂಪುಗೊಂಡವು. ಪುರಾಣ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ ರಚನೆಯಾದ ಕಾಲದಲ್ಲಿ ಈ ಎಲ್ಲಾ ನಿಯಮಗಳು ಅಸ್ತಿತ್ವದಲ್ಲಿದ್ದ ಕಾರಣದಿಂದಲೇ ಅವೆಲ್ಲಾ ಆ ಕಾವ್ಯಗಳಲ್ಲಿ ದಾಖಲಾಗಿವೆ. ಅಂದಿನಿಂದಲೂ ಸುಧಾರಣಾಮುಖಿಯಾಗುತ್ತಾ ಸಾಗಿದ ಈ ಕುಟುಂಬ ಪದ್ಧತಿಯೂ ನೀತಿ, ಅನೀತಿ, ಧರ್ಮ, ಅಧರ್ಮ ಎಂಬ ತನ್ನದೇ ಆದಂತಹ ನಿರ್ಬಂಧಗಳನ್ನು ಹಾಕಿಕೊಂಡು ಬಂದಿದೆ. ಈ ರೀತಿಯ ಮಾನವ ಸಂಬಂಧಗಳಲ್ಲಿ ಸ್ವಲ್ಪ ಏರುಪೇರಾದರೂ ಕುಟುಂಬಗಳು ವಿಘಟನೆಗೊಳ್ಳುವ ಸಾಧ್ಯತೆಯಿರುತ್ತದೆ.

'ವಿಘಟನೆ' ಎಂಬ ಪದಕ್ಕೆ ಶಬ್ದಾರ್ಥಕೋಶದಲ್ಲಿ 'ಪ್ರತ್ಯೇಕವಾದ' 'ಬೇರೆಯಾದ' 'ಅಗಲಿದ' ಎಂಬ ಅರ್ಥಗಳಿವೆ. 'ವಿಘಟನೆ', 'ವಿಘಟನಾ' ಎಂಬ ಪದಗಳಿಗೆ 'ದೂರಮಾಡುವಿಕೆ', ಬೇರೆಯಾಗುವಿಕೆ', 'ಪ್ರತ್ಯೇಕಿಸುವಿಕೆ', 'ಒಡೆಯುವಿಕೆ', ನಾಶವಾಗುವಿಕೆ(ಮಾಡುವಿಕೆ)' ಎಂಬ ಅರ್ಥಗಳಿವೆ. 'ವಿಘಟನೆ' ಆಗುತ್ತದೆ ಎನ್ನಬೇಕಾದರೆ ಅದಕ್ಕೂ ಮೊದಲು ಸೇರುವಿಕೆ, ಕೂಡುವಿಕೆ ಪ್ರಕ್ರಿಯೆ ನಡೆದಿರಬೇಕು. ಈ ಸೇರುವಿಕೆ ಎಂಬುದು ಮುಖ್ಯವಾಗಿ ವಿವಾಹದ ಮೂಲಕ ಕೌಟುಂಬಿಕ ಚೌಕಟ್ಟಿಗೆ ಒಳಪಟ್ಟಿರಬಹುದು. ಅಥವಾ ಪರಸ್ಪರ ದೈಹಿಕ ಅಥವಾ ಮಾನಸಿಕ ಆಕರ್ಷಣೆಯಿಂದ ಕೂಡುವಿಕೆಯಾಗಿರಬಹುದು. ಮೊದಲನೆಯದಾಗಿ ವಿವಾಹದ ಮೂಲಕ ಕೂಡುವುದರಲ್ಲಿ ಗಂಡು-ಹೆಣ್ಣು ಪರಸ್ಪರ ಒಪ್ಪಿರಬಹುದು ಅಥವಾ ಹಿರಿಯರೆಲ್ಲಾ ಸೇರಿ ಒಪ್ಪಿಸಿ ಮದುವೆ ಮಾಡಿಸಿರಬಹುದು. ಈ ಎರಡು ರೀತಿಯ ವಿವಾಹದ ಉದ್ದೇಶ ಮೂಲಭೂತ ಅವಶ್ಯಕತೆಯಾದ ಲೈಂಗಿಕ ಬಯಕೆಯನ್ನು ವ್ಯವಸ್ಥಿತವಾಗಿ ಈಡೇರಿಸಿಕೊಳ್ಳುವುದು ಹಾಗೂ ಸಂತಾನೋತ್ಪತ್ತಿಯನ್ನು ಮುಂದುವರೆಸುವುದೇ ಆಗಿರುತ್ತದೆ. ಇದು ಸಾಮಾಜದ ಸ್ವೀಕೃತ ಕ್ರಮವಾಗಿದ್ದು, ನೈತಿಕ ಹಾಗೂ ಧಾರ್ಮಿಕ ಒಪ್ಪಿಗೆಯನ್ನು ಪಡೆದಿರುತ್ತದೆ. ಇನ್ನು ಎರಡನೆಯದು ಪರಸ್ಪರ ದೈಹಿಕ ಹಾಗೂ ಮಾನಸಿಕ ಆಕರ್ಷಣೆಗೆ ಸಂಬಂಧಿಸಿದ್ದು. ವಿವಾಹಪೂರ್ವ ಅಥವಾ ವಿವಾಹೇತರ ಗಂಡು-ಹೆಣ್ಣುಗಳ ಕೂಡಿರುವಿಕೆಯಾಗಿರುತ್ತದೆ. ಇಲ್ಲಿ ಲೈಂಗಿಕ ಬಯಕೆಯನ್ನು ಪೂರೈಸಿಕೊಳ್ಳುವ ಏಕಮಾತ್ರ ಉದ್ದೇಶವಿರುತ್ತದೆ. ಇದಕ್ಕೆ ಸುಧಾರಿತ ಸಮಾಜದ ಒಪ್ಪಿಗೆಯಾಗಲಿ, ನೈತಿಕ, ಧಾರ್ಮಿಕ ಬೆಂಬಲವಾಗಲಿ ಇರುವುದಿಲ್ಲ. ಆದರೂ ಒಂದು ಕಾಲದಲ್ಲಿ ವಿವಾಹ ಪೂರ್ವದಲ್ಲಾಗಲಿ, ವಿವಾಹ ನಂತರದಲ್ಲಾಗಲಿ ಗಂಡು-ಹೆಣ್ಣು ಪರಸ್ಪರ ಸೇರುವುದು ಅಧಾರ್ಮಿಕ, ಅನೈತಿಕವೆಂದಾಗಲಿ, ಸಮಾಜಬಾಹಿರ ಚಟುವಟಿಕೆಯೆಂದಾಗಲಿ ಭಾವಿಸಿದಂತೆ ಕಾಣುವುದಿಲ್ಲ. ಉದಾ. ಬ್ರಾಹ್ಮಣ ಮತ್ತು ಉಪನಿಷತ್ತುಗಳ ಕಾಲದಲ್ಲಿ ಮದುವೆಗೆ ಮೊದಲು ಹೆಣ್ಣು ಹಲವು ಸಂಬಂಧಗಳನ್ನು ಇಟ್ಟುಕೊಂಡಿದ್ದರೂ ಅದು ಆಕ್ಷೇಪಾರ್ಹವೇನೂ ಆಗಿರಲಿಲ್ಲವೆಂಬುದಕ್ಕೆ ಆಧಾರಗಳು ದೊರೆಯುತ್ತವೆ. 'ವರುಣ'ವೆಂಬ ಧಾರ್ಮಿಕ ವಿಧಿಯನ್ನು ಗಂಡ-ಹೆಂಡಿರಿಬ್ಬರೂ ಮಾಡಬೇಕಾಗಿತ್ತು. ಮತ್ತು ಅವರ ಹೆಸರು ಹೇಳಿ ದರ್ಬೆಯನ್ನು ಬೆಂಕಿಗೆ ಹಾಕಬೇಕಾಗಿತ್ತು. ಹೀಗೆ ಮಾಡಿದರೆ ಅವಳು ಪವಿತ್ರಳಾಗುತ್ತಿದ್ದಳು. ಮತ್ತು ಧಾರ್ಮಿಕ ವಿಧಿಯಲ್ಲಿ ಪಾಲ್ಗೊಳ್ಳಲು ಹಕ್ಕುಳ್ಳವಳಾಗುತ್ತಿದ್ದಳು. ಅಂದರೆ ಹುಲ್ಲಿನ ಎಸಳನ್ನು ಮಣ್ಣಿನ ಪಾತ್ರೆಯಲ್ಲಿ

ಹಾಕಿ ಅದರ ಮೇಲೆ ತುಪ್ಪ ಸುರಿದು ಆ ಪ್ರಿಯಕರನನ್ನು ಹುಲ್ಲಿನ ಎಸಳುಗಳ ಮೂಲಕ ಅಗ್ನಿಗೆ ಅರ್ಪಿಸಿ ಪವಿತ್ರಳಾಗುತ್ತಿದ್ದಳು.[೨]

ಛಾಂದೋಗ್ಯ ಉಪನಿಷತ್ತಿನಲ್ಲಿ ಇಂತಹುದೇ ಇನ್ನೊಂದು ಪ್ರಸಂಗ ಬರುತ್ತದೆ. 'ಸತ್ಯ ಕಾಮನು ವಿದ್ಯೆ ಕಲಿಯಲು ಬ್ರಾಹ್ಮಣ ಗುರುವಿನ ಬಳಿ ಹೋದಾಗ ಆ ಗುರು ತಂದೆ-ತಾಯಿ, ಗೋತ್ರದ ಬಗ್ಗೆ ಕೇಳುತ್ತಾನೆ. ಸತ್ಯಕಾಮ ತನ್ನ ತಾಯಿ ಜಬಲಾ ಬಳಿ ವಿಚಾರಿಸಿದಾಗ ಬೆರೆಯಬೇಕಿತ್ತು. ಆ ಕಾರಣದಿಂದ ನಿನ್ನ ನಿಜವಾದ ತಂದೆ ಯಾರೆಂದು ಹೇಳಲು ಸಾಧ್ಯವಿಲ್ಲ, ಗೋತ್ರ ಯಾವುದೆಂಬುದು ನನಗೆ ತಿಳಿಯದು, ನಾನು ಜಬಲಾ, ನೀನು ನನ್ನ ಮಗ ಸತ್ಯಕಾಮ ಅಷ್ಟೇ. ಆದ್ದರಿಂದ ಜಬಲಾಳ ಮಗ ಸತ್ಯಕಾಮ[೩]ನೆಂದು ಹೇಳು ಎನ್ನುತ್ತಾಳೆ. ಈ ಎರಡು ಪ್ರಸಂಗಗಳಲ್ಲಿ ವಿವಾಹಪೂರ್ವ ಗಂಡು-ಹೆಣ್ಣು ಕೂಡುವಿಕೆಯನ್ನು ಆಗಿನ ಸಮಾಜ ಅನೈತಿಕವೆಂದು ಭಾವಿಸದಿದ್ದರೂ ದರ್ಭೆಯನ್ನು ಅಗ್ನಿಗೆ ಅರ್ಪಿಸಿ ಪ್ರಾಯಶ್ಚಿತ್ತ ಪಡೆಯಬಹುದೆಂಬ ಸೂಚನೆಯಿರುವಂತಿದೆ.

ಹೀಗೆ ಯಾವುದೇ ರೀತಿಯಿಂದಾಗಲಿ, ಸೇರಿದ ಗಂಡು-ಹೆಣ್ಣುಗಳ ಸಂಬಂಧವು ಯಾವುದೋ ಕಾರಣಕ್ಕೆ ಮುರಿದು ಬೀಳುತ್ತಿತ್ತು. ವೇದಕಾಲೀನ ಸಮಾಜವು ವಿವಾಹ ಬಂಧನಕ್ಕೊಳಗಾದ ಗಂಡು-ಹೆಣ್ಣು ಬೇರೆ ಬೇರೆಯಾಗುವುದನ್ನು ಒಪ್ಪುತ್ತಿರಲಿಲ್ಲವೆಂಬುದಕ್ಕೆ ಹಲವು ಆಧಾರಗಳು ನಮಗೆ ದೊರೆಯುತ್ತವೆ. "ಓ ಪತಿ ಪತ್ನಿಯರೇ ನೀವು ಬೇರೆಯಾಗಬೇಡಿ ಪುತ್ರ ಪೌತ್ರರನ್ನು ಪಡೆದು ಬದುಕಿನ ಪೂರ್ಣ ಕಾಲವನ್ನು ಸಂತೋಷ ತುಂಬಿದ ಮನೆಯಲ್ಲಿ ಕಳೆಯಿರಿ"[೪] ಎನ್ನುವ ಮಾತು ಋಗ್ವೇದದಲ್ಲಿ ದಾಖಲಾಗಿದೆ. ಮತ್ತು ವಿವಾಹದ ಗಂಡು-ಹೆಣ್ಣನ್ನು ಕುರಿತು 'ನೀನು ನನ್ನೊಂದಿಗೆ ವೃದ್ಧಾಪ್ಯವನ್ನು ಪಡೆಯುವ ಸೌಭಾಗ್ಯಕ್ಕಾಗಿ ನಿನ್ನನ್ನು ಕೈಹಿಡಿಯುತ್ತಿದ್ದೇನೆ. ನನ್ನ ಪತ್ನಿಯಾದ ನಿನ್ನನ್ನು ಅಗ್ನಿದೇವನು ವೃದ್ಧಾಪ್ಯದವರೆಗೂ ಸುಖವಾಗಿಡಲಿ' ಎಂದು ಹೇಳಲಾಗಿದೆ. ಅಥರ್ವಣ ವೇದದಲ್ಲಿ 'ನಾನು ಈ ಹೆಣ್ಣನ್ನು ತಂದೆಯ ಮನೆಯಿಂದ ಕಳುಹಿಸುತ್ತಿದ್ದೇನೆ. ಆದರೆ ಮುಂದೆ ಗಂಡನ ಮನೆಯಿಂದಲ್ಲ ಅಲ್ಲಿ ಅವಳನ್ನು ಮೃದುವಾದ ಸಂಕೋಲೆಯಲ್ಲಿ ಬಂಧಿಸುತ್ತೇನೆ. ಅವಳು ಗಂಡನ ಜೊತೆ ಬದುಕಿ ಸೌಭಾಗ್ಯ ಸಂತಾನವನ್ನು ಪಡೆಯಲಿ[೫] ಎಂಬ ಮಾತಿದೆ.

ಈ ಮೇಲಿನ ಮೂರು ಹೇಳಿಕೆಗಳನ್ನು ಗಮನಿಸಿದರೆ ಸಾವಿಗೆ ಮುಂಚೆ ಗಂಡ-ಹೆಂಡತಿ ಬೇರೆ ಬೇರೆಯಾಗುವುದನ್ನು ಆಗಿನ ಸಮಾಜ ಇಷ್ಟಪಡುತ್ತಿರಲಿಲ್ಲವೆಂಬುದು ಅರಿವಾಗುತ್ತದೆ. ಗಂಡು-ಹೆಣ್ಣು ಮದುವೆಯಾದ ಮೇಲೆ ವಿಘಟನೆಗೆ ಒಳಗಾದರೆ ಕುಟುಂಬವು ನಿಯಂತ್ರಣ ತಪ್ಪುತ್ತದೆ. ಸಂತಾನೋತ್ಪತ್ತಿ ಕುಂಠಿತವಾಗುತ್ತದೆ. ಇಳಿ ವಯಸ್ಸಿನ ಪರಸ್ಪರರಿಗೆ ಭದ್ರತೆಯಿಲ್ಲದೆ ಸಂಕಷ್ಟಗಳಿಗೆ ಗುರಿಯಾಗುತ್ತಾರೆ ಎನ್ನುವಂತಹ ಹಲವಾರು ಕಾರಣಗಳು ಈ ಹೇಳಿಕೆಗಳ ಹಿಂದೆ ಕೆಲಸ ಮಾಡಿರಬೇಕೆನಿಸುತ್ತದೆ. ನಮ್ಮ ಪ್ರಾಚೀನ ಸಾಹಿತ್ಯ ಸಂಸ್ಕೃತಿಯು ಹಿಂದಿನಿಂದಲೂ ಹೆಣ್ಣು-ಗಂಡಿನ ಸಂಬಂಧಗಳ ಮೂಲಕ ಆಕಾಶ, ಭೂಮಿ, ಪಾತಾಳಗಳನ್ನು ಬೆಸೆಯುವ ಕಾರ್ಯವನ್ನು ಮಾಡುತ್ತಲೇ ಬಂದಿದೆ. ಸ್ವರ್ಗದ ಸ್ತ್ರೀಯರು, ಪುರುಷರು, ಭೂಲೋಕದ ಸ್ತ್ರೀ ಪುರುಷರೊಡನೆ ಸಂಬಂಧವನ್ನು ಬೆಳೆಸಿರುವುದೂ ಉಂಟು. ಹಾಗೆಯೇ ವಿಘಟಿತರಾಗಿರುವುದುಂಟು. ಬಹುಮಟ್ಟಿಗೆ ಭೂಮಿಯ ಮೇಲೆ ಹೆಣ್ಣು-ಗಂಡು ಸಂಬಂಧಗಳು ಬೆಸೆದು ಬದುಕುಗೊಂಡಿರುವುದು ಇಲ್ಲವೆ ಇಲ್ಲಿ ಸಾಧು, ಸನ್ಯಾಸಿ, ಋಷಿಮುನಿಗಳು, ಇವರ ಸ್ತ್ರೀಯರು, ರಾಜ ರಾಣಿಯರ ಹಾಗೂ

ಸಾಮಾನ್ಯ ಸ್ತ್ರೀ ಪುರುಷರ ಜೊತೆ ಜಾತಿ, ಧರ್ಮ, ವಯೋಭೇದವಿಲ್ಲದೆ ಜೊತೆಯಾಗಿ ಸೇರಿ ನಂತರ ವಿಘಟಿತವಾಗಿರುವ ಉದಾಹರಣೆಗಳು ಸಾಕಷ್ಟು ಇವೆ. ಇಂತಹ ವಿಘಟಿತ ಗಂಡು–ಹೆಣ್ಣಿನ ಸಂಬಂಧದ ಕಥೆಗಳ ಸ್ವರೂಪವನ್ನು ಈ ಮುಂದೆ ಸಮೀಕ್ಷಿಸಲಾಗುವುದು.

ಕೌಟುಂಬಿಕ ಚೌಕಟ್ಟಿನಲ್ಲಿ ಗಂಡ–ಹೆಂಡತಿಯ ಮಧ್ಯ ಮೂರನೆಯವರು ಪ್ರವೇಶವಾಗುವುದರಿಂದ ಕುಟುಂಬಗಳು ವಿಘಟನೆ ಹೊಂದುತ್ತವೆ ಎನ್ನುವುದಕ್ಕೆ ಈ ಕೆಳಗಿನ ಕಥೆಗಳಲ್ಲಿ ಉದಾಹರಣೆಗಳು ದೊರೆಯುತ್ತವೆ. ಗಂಡ ಹೆಂಡತಿಗೆ, ಹೆಂಡತಿ ಗಂಡನಿಗೆ ನಿಷ್ಠರಾಗಿರಬೇಕು, ಒಬ್ಬರು ಇನ್ನೊಬ್ಬರಿಗಷ್ಟೇ ಮೀಸಲಾಗಿರಬೇಕು ಎಂಬುವುದು ಕುಟುಂಬದ ನಿಯಮವಾದಾಗ ಈ ನಿಯಮವನ್ನು ಮೀರಿದಾಗ ಸಹಜವಾಗಿಯೇ ಕುಟುಂಬದ ಗಂಡು–ಹೆಣ್ಣು ಸಂಬಂಧಗಳು ವಿಘಟನೆಗಳೊಳಗಾಗುತ್ತವೆ.

ಆದರೆ ಪ್ರಾಚೀನ ಕಾಲದಲ್ಲಿ ಕುಟುಂಬ ನಿಯಮಗಳು ತುಂಬಾ ಸಡಿಲವಾಗಿದ್ದು, ಗಂಡನೇ ತನ್ನ ಹೆಂಡತಿಯನ್ನು ಹಾಗೂ ತನಗೆ ಸಂಬಂಧಿಸಿದ ದಾಸಿಯರನ್ನು ಸ್ನೇಹಿತರಿಗೆ ಅಥವಾ ಅತಿಥಿಗಳಿಗೆ ಅರ್ಪಿಸಿ ಸಾರ್ಥಕ ಭಾವನೆ ಹೊಂದುತ್ತಿದ್ದುದನ್ನು ಗಮನಿಸಬಹುದು. ಇದರಲ್ಲಿ ಯಾವುದೇ ಅಪರಾಧವನ್ನು ಆಗಿನವರು ಕಾಣುತ್ತಿರಲಿಲ್ಲ. ಹಂತ ಹಂತವಾಗಿ ಈ ಕೌಟುಂಬಿಕ ಸಡಿಲತೆಯ ಬಿಗುವಾಗಿ, ನಿಯಮಗಳು ಕಟ್ಟುನಿಟ್ಟಾಗಿ ರೂಪುಗೊಂಡು ಸ್ವಲ್ಪ ಏರುಪೇರಾದರೂ ಗಂಡು–ಹೆಣ್ಣು ಸಂಬಂಧಗಳಲ್ಲಿ ವಿಘಟನೆಗಳು ಕಾಣಿಸಲಾರಂಭಿಸಿತು. ಕೌಟುಂಬಿಕ ನಿಯಮಗಳು ಪ್ರಾಚೀನ ಕಾಲದಲ್ಲಿ ಅಂದರೆ 'ಮಹಾಭಾರತ' ರಚನೆಯ ಕಾಲದಲ್ಲಿ ಹಾಗೂ ಪಾಣಿನಿಯ ಕಾಲದಲ್ಲಿ ಇಷ್ಟು ಕಠಿಣವಾಗಿರಲಿಲ್ಲವೆಂಬುದಕ್ಕೆ ಕೆಲವು ಆಧಾರಗಳು ದೊರೆಯುತ್ತವೆ.

ಸ್ತ್ರೀಶಾಸ್ತ್ರ ರೀತಿಯಲ್ಲಿ ಒಬ್ಬನ ಪತ್ನಿಯಾಗಿದ್ದು, ಇನ್ನೊಬ್ಬ ಮಿತ್ರನ ಸಂಗದಿಂದ ಆಕೆಗೆ ಮಗುವಾದಾಗ ಸಾಮಾನ್ಯ ಪ್ರಸಾದದಂತೆ ಪಿತೃತ್ವ ಇಬ್ಬರಿಗೂ ಲಭಿಸುತ್ತದೆ. ಶಾಸ್ತ್ರಾನುಸಾರ ಪತಿಗೆ ಸಂಗದಿಂದ ಇನ್ನೊಬ್ಬ ಮಿತ್ರನಿಗೆ ಪಿತೃತ್ವ ಆದ್ದರಿಂದ ಮಗುವಿಗೆ 'ದ್ವಮಿತ್ರಿ'[೬] ಎನ್ನುತ್ತಾರೆ. ಇದರಿಂದ ಪಾಣಿನಿಯ ಕಾಲದಲ್ಲಿ ಗ್ರಾಮ್ಯ ಧರ್ಮಾನುಸಾರಿಯಾಗಿ ತನ್ನ ಹೆಂಡತಿಯನ್ನು ಮಿತ್ರನಿಗೆ ಕೊಡುವ ಪದ್ಧತಿ ಇತ್ತು ಎಂದಾಗುತ್ತದೆ.

ಸ್ನೇಹಿತ ಸ್ನೇಹಿತರಲ್ಲಿ ಹೆಣ್ಣು ಬದಲಾವಣೆಯಾಗುವುದು ಹೇಗೆ ನೀತಿಬಾಹಿರ ವೆನಿಸುತ್ತಿರಲಿಲ್ಲವೋ ಹಾಗೆಯೇ ಅಪರಿಚಿತ ಅತಿಥಿಗೆ ತನ್ನ ಹೆಂಡತಿಯನ್ನೋ ಅಥವಾ ದಾಸಿಯನ್ನೋ ಕೊಡುವುದು ಒಂದು ಕಾಲದಲ್ಲಿ ಧರ್ಮವೆಂದೇ ತಿಳಿಯಲಾಗಿತ್ತು. ಶಾಂತಿ ಪರ್ವದ ೧೬೮ನೆಯ ಅಧ್ಯಾಯದಲ್ಲಿ ಗೌತಮ ಎಂಬ ಬ್ರಾಹ್ಮಣನಿಗೆ ಅತಿಥಿ ಸತ್ಕಾರಕ್ಕಾಗಿ ಇತರೆ ವಸ್ತುಗಳೊಂದಿಗೆ ಶಬರನೊಬ್ಬನು ವಿಧವೆ ದಾಸಿಯನ್ನು ಕೊಟ್ಟ ಪ್ರಸಂಗವಿದೆ. ಕೃಷ್ಣ ಅರ್ಜುನ ಮೊದಲಾದ ಅತಿಥಿಗಳಿಗೆ ದಾಸಿಯನ್ನು ಕೊಟ್ಟಿರುವ ಉಲ್ಲೇಖಗಳಿವೆ.[೭] ಮಹಾಭಾರತದ ಅನುಶಾಸನ ಪರ್ವದ ಎರಡನೆಯ ಅಧ್ಯಾಯದಲ್ಲಿ ಸುದರ್ಶನ ಎನ್ನುವವನು ತನ್ನ ಪತ್ನಿ ಓಘವತಿಗೆ ಹೇಳುತ್ತಾನೆ. 'ಗೃಹಸ್ಥಾಶ್ರಮ ಧರ್ಮಕ್ಕನುಸಾರವಾಗಿ ನಡೆಯಬೇಕೆಂಬ ನನ್ನ ಪ್ರತಿಜ್ಞೆಯಿದೆ. ಆದ್ದರಿಂದ ಅತಿಥಿಗೆ ವಿರುದ್ಧವಾಗಿ ನೀನು ನಡೆಯಬೇಡ, ಪ್ರಸಂಗ ಬಂದರೆ ನಿನ್ನ ಶರೀರವನ್ನು ಅತಿಥಿಗೆ ಕೊಡಲು ಹಿಂದೆ ಮುಂದೆ ನೋಡಬೇಡ ಎಂದು ಹೇಳುತ್ತಾನೆ. ಸುದರ್ಶನ ಮನೆಯಲ್ಲಿ ಇಲ್ಲದೆ

ಇರುವಾಗ ಒಬ್ಬ ಬ್ರಾಹ್ಮಣ ಅತಿಥಿಯಾಗಿ ಬರುತ್ತಾನೆ. ಅರ್ಘ್ಯಪಾದ್ಯಾದಿ ಪೂಜೆಯನ್ನು ಯಥಾವಿಧಿ ಸ್ವೀಕರಿಸಿದ ನಂತರ ಅತಿಥಿಯು ಸುದರ್ಶನನ ಸ್ತ್ರೀಯೊಂದಿಗೆ ಸಂಭೋಗಿಸುವ ಇಚ್ಛೆಯನ್ನು ವ್ಯಕ್ತಪಡಿಸುತ್ತಾನೆ. ಓಘವತಿಯು ಬ್ರಾಹ್ಮಣನ ಇಚ್ಛೆಯನ್ನು ಪೂರೈಸುತ್ತಾಳೆ. ಮನೆಗೆ ಹಿಂದುರಿಗಿದ ಸುದರ್ಶನ ಋಷಿಯು ಈ ಆತಿಥ್ಯದ ವಿಷಯ ತಿಳಿದು 'ಇಂದು ನಾನು ಧನ್ಯನಾದೆನು' ಎಂದು ಪಾತಿವ್ರತ್ಯ ಧರ್ಮಕ್ಕಾಗಿ ತನ್ನ ಪತ್ನಿಯ ಬೆನ್ನು ತಟ್ಟುತ್ತಾನೆ. ಭೀಷ್ಮ ಪಿತಾಮಹನು ಧರ್ಮರಾಯನಿಗೆ ಈ ವಿಷಯ ತಿಳಿಸುತ್ತಾ ಈ ಸತ್ಕರ್ಮದಿಂದ ಸುದರ್ಶನನ ಕೀರ್ತಿ ಮೂರು ಲೋಕಗಳಲ್ಲಿ ಹರಡಿತು ಮತ್ತು ಅವನಿಗೆ ಇಂದ್ರಲೋಕವು ಪ್ರಾಪ್ತವಾಯಿತು[೮] ಎಂದು ಹೇಳುತ್ತಾನೆ. ಈ ಪದ್ಧತಿ ಕ್ರಮೇಣ ನಿಯಂತ್ರಣಕ್ಕೊಳಗಾದ ವಿವರ ಶಾಂತಿಪರ್ವದ ೨೬೬ನೆಯ ಅಧ್ಯಾಯದಲ್ಲಿ ದೊರೆಯುತ್ತದೆ. ಭೀಷ್ಮರು ಯುಧಿಷ್ಠರನಿಗೆ ಹೇಳುತ್ತಾರೆ.

ಚಿರಕಾರಿಯ ತಂದೆ ಮೇಧಾತಿಥಿ ಹೊರಗೆ ಕಾರ್ಯಮಗ್ನವಾಗಿದ್ದಾಗ ಇಂದ್ರನು ಮೇಧಾತಿಥಿ ಆಶ್ರಮಕ್ಕೆ ಅತಿಥಿಯಾಗಿ ಬಂದು ಚಿರಕಾರಿಯ ತಾಯಿಯೊಂದಿಗೆ ಸಂಭೋಗಿಸಿ ಹೊರಟು ಹೋಗುತ್ತಾನೆ. ಮೇಧಾತಿಥಿಗೆ ಈ ಸುದ್ದಿ ತಿಳಿದಾಗ ಅವನು ಕೂಡಲೇ ಚಿರಕಾರಿಗೆ ತನ್ನ ತಾಯಿಯ ವಧೆ ಮಾಡಲು ಹೇಳುತ್ತಾನೆ. ತಾನು ಅರಣ್ಯದ ದಾರಿ ಹಿಡಿದು ಹೋಗುತ್ತಾನೆ. ಇತ್ತ ಚಿರಕಾರಿ ತಾಯಿಯ ವಧೆ ಮಾಡಿರುವುದಿಲ್ಲ. ಅರಣ್ಯದಲ್ಲಿ ಮೇಧಾತಿಥಿ ಕೋಪವು ಶಾಂತಗೊಂಡಾಗ, ಮಗ ಚಿರಕಾರಿ ತನ್ನ ತಾಯಿಯ ವಧೆ ಮಾಡಿಯೇ ಇದ್ದಾನೆ ಎಂದು ಬೇಸರ ಪಟ್ಟುಕೊಂಡು ತನ್ನಲ್ಲೇ ಹೇಳಿಕೊಳ್ಳುತ್ತಾನೆ. 'ಅತಿಥಿ ಸಮಾಗಮದ ಇಂತಹ ಸಣ್ಣ ಅಪರಾಧಕ್ಕಾಗಿ ಸ್ತ್ರೀವಧೆ ಅಧರ್ಮವಾಗುವುದು'. ನಂತರ ಮನೆಗೆ ಬಂದಾಗ ಚಿರಕಾರಿ ತಾಯಿಯ ವಧೆ ಮಾಡದಿರುವುದನ್ನು ಕಂಡು ಅವನನ್ನು ಪ್ರಶಂಸಿಸುತ್ತಾನೆ. ಅತಿಥಿ ಪೂಜೆಯು ಈ ಪದ್ಧತಿಯನ್ನು ಆ ಸಮಾಜದಲ್ಲಿ ಕಿಂಚಿತ್ ನಿಂದನೀಯವೆಂದು[೯] ತಿಳಿಯತೊಡಗಿದ್ದರು.

ನಂತರದ ಕಾಲಘಟ್ಟದಲ್ಲಿ ಅತಿಥಿಗೆ ಹೆಣ್ಣು ಅರ್ಪಿತವಾಗುವುದರಲಿ ಅತಿಥಿಯನ್ನು ಆಸೆಗಣ್ಣಿನಿಂದ ನೋಡುವುದು ಅಪರಾಧವಾಗಿ ವಿಘಟನೆಗೆ ಕಾರಣವಾಗಿರುವುದನ್ನು ಕಾಣಬಹುದಾಗಿದೆ. 'ಜಮದಗ್ನಿಯ ಸತಿ ರೇಣುಕಾದೇವಿ ಚಿತ್ರರಥನೆಂಬ ಗಂಧರ್ವನ ಕಡೆಗೆ ಕೇವಲ ಕಾಮದೃಷ್ಟಿಯಿಂದ ನೋಡಿದ ಕಾರಣಕ್ಕೆ ಕೋಪಿಷ್ಟನಾದ ಜಮದಗ್ನಿ ತನ್ನ ಮಗ ಪರಶುರಾಮನಿಂದ ಅವಳ ವಧೆ ಮಾಡಿಸುತ್ತಾನೆ.[೧೦] ಜಮದಗ್ನಿಗೆ ತನ್ನ ಹೆಂಡತಿಯ ಮಾನಸಿಕ ವ್ಯಭಿಚಾರವನ್ನು ಸಹಿಸಲು ಸಾಧ್ಯವಾಗಲಿಲ್ಲ.

ಸುದರ್ಶನನ ಕಥೆಯಲ್ಲಿ ಅತಿಥಿಯೊಂದಿಗೆ ಸೇರುವಿಕೆ ಗಂಡ-ಹಂಡತಿ ಇಬ್ಬರಿಗೂ ಸಮ್ಮತವಾಗಿತ್ತು. ಮೇದಾತಿಥಿ ಕಥೆಯಲ್ಲಿ ಅತಿಥಿಗೆ ಹೆಣ್ಣು ಸೇರುವುದು ಮೇಧಾತಿಥಿಗೆ ಇಷ್ಟವಿರುವುದಿಲ್ಲ. ಆದರೆ ಚಿರಕಾರಿಗೆ ಮತ್ತು ಅವನ ತಾಯಿಗೆ ಸಮ್ಮತವಾಗಿಯೇ ಕಾಣುತ್ತದೆ. ಜಮದಗ್ನಿಯ ಸಂದರ್ಭದಲ್ಲಿ ತಂದೆ ಮತ್ತು ಮಗ ಪರಶುರಾಮ ಇಬ್ಬರಿಗೂ ಅತಿಥಿ ಜೊತೆ ಸ್ವಸ್ತ್ರೀ ಮಿಲನ ಸಮ್ಮತವೆನಿಸುವುದಿಲ್ಲ. ಕಾಲಕಾಲಕ್ಕೆ ಕೌಟುಂಬಿಕ ನಿಯಮಗಳು ಬಿಗಿಯಾದುದನ್ನು ಈ ಪ್ರಸಂಗಗಳು ತಿಳಿಯಪಡಿಸುತ್ತವೆ.

ರಾಮಾಯಣದಲ್ಲಿ ರಾವಣ ಅತಿಥಿ ವೇಷವನ್ನು ಧರಿಸಿ ಸೀತೆಯ ಬಳಿ ಬಂದು ಅವಳನ್ನು ಅವಳ ಇಚ್ಛೆಗೆ ವಿರುದ್ಧವಾಗಿ ಬಲ ಪ್ರಯೋಗ ಮಾಡಿ ಬಲವಂತದಿಂದ ಅಪಹರಿಸಿಕೊಂಡು ಹೋಗುತ್ತಾನೆ. ಇದು

ರಾಮನಿಗೆ, ಲಕ್ಷ್ಮಣನಿಗೆ ಅಷ್ಟೇ ಅಲ್ಲದೆ ಆ ಕಾಲದ ಸಮಸ್ತ ಭಾರತೀಯ ಸಮಾಜಕ್ಕೆ ಸ್ತ್ರೀ ಸಮರ್ಪಣೆಯ ಪದ್ಧತಿ ತುಂಬಾ ನಿಂದನೀಯವಾಗಿತ್ತು. ಹಳೆಯ ಪದ್ಧತಿಗಳು ಒಮ್ಮೆಲೇ ನಶಿಸುವುದಿಲ್ಲ; ಕ್ರಮೇಣ ಮೆಲ್ಲ ಮೆಲ್ಲನೆ ಕೊನೆಗೊಳ್ಳುತ್ತದೆ. ಬಹುಕಾಲದವರೆಗೆ ಒಮ್ಮೊಮ್ಮೆ ವರ್ತಮಾನ ಕಾಲದವರೆಗೂ ಅವುಗಳ ಅವಶೇಷಗಳು ಇದ್ದು, ನಂತರ ಸ್ವಲ್ಪ ಸ್ವಲ್ಪವಾಗಿ ಬಿಟ್ಟು ಹೋಗುತ್ತವೆ. ಹೀಗೆ ಅಂಶ ರೂಪವಾಗಿ ಉಳಿದಿರುವ ಪದ್ಧತಿಗಳು ಇತರ ಪದ್ಧತಿಗಳ ಒತ್ತಡದಲ್ಲಿ ಸಿಕ್ಕಿ ಅದುಮಿ ಹೋಗುತ್ತವೆ.

ಹರಿಹರ ಕವಿಯ 'ಇಹಃಪಗೆಯಾಂಡರ ರಗಳೆ' ಮತ್ತು 'ಬಸವರಾಜದೇವರ ರಗಳೆ'ಯಲ್ಲಿ ಅತಿಥಿಗೆ ತನ್ನ ಹೆಂಡತಿಯನ್ನು ಸಮರ್ಪಿಸುವ ಪ್ರಸಂಗ ಬರುತ್ತದೆ. ಇಹಃಪಗೆಯಾಂಡರು ಕಾವೇರಿ ಕರೆ ಪಟ್ಟಣದ ಅಧಿಪತಿ. ಅವನಿಗೆ ಅಂಗಭೋಗದ ಸತಿಯರು ಇನ್ನೂರು ಜನ; ಶೃಂಗಾರಗೊಳಿಸುವವರು ನೂರು ಜನ. ಆತನಿಗೆ ಅರಸಿಯರಲ್ಲಿ ತಿಲಕಪ್ರಾಯವಾಗಿ ಕಾಮನ ಹೂ ಬಾಣದಂತಿದ್ದವಳು ಪತಿಹಿತವೆಯೆಂಬುವವಳು. ಮಿಕ್ಕ ಸತಿಯರು ತಾರೆಗಳಂತೆ ಇದ್ದರೆ, ಇವಳು ಇವರ ನಡುವೆ ಚಂದ್ರನಂತಿದ್ದಳು. ಇಹಃಪಗೆಯಾಂಡರಿಗೆ ಪತಿಹಿತವೆ ಪ್ರಾಣದಂತಿದ್ದಳು. ಶಿವಭಕ್ತರು ಮನೆಗೆ ಬಂದರೆ ಎದುರುಗೊಂಡು ಪಾದ ತೊಳೆದು ನಿರ್ಮಲ ಚಿತ್ತದಿಂದ ಉನ್ನತನಾನದಲ್ಲಿ ಕುಳ್ಳಿರಿಸಿ, ಶೃಂಗರಿಸಿ, ಆರತಿ ಎತ್ತಿ, ರಸಭರಿತ ಹಣ್ಣು, ಹಾಲು, ತುಪ್ಪ ಪಕ್ವಾನ್ನಗಳನ್ನು ನೈವೇದ್ಯಕ್ಕಿಡುತ್ತಿದ್ದರು. ಭಕ್ತರ ಪಂಚೇಂದ್ರಿಯಗಳನ್ನು ತೃಪ್ತಿಯಿಂದ ತಣಿಸಿ ಅವರ ಜೊತೆ ಸಂತೋಷದಿಂದ ಇವರು ಓಲಾಡುತ್ತಿದ್ದರು. ಇದೇ ರೀತಿ ಇನ್ನು ಹೆಚ್ಚು ಹೆಚ್ಚಾಗಿ ಶಿವಭಕ್ತರನ್ನು ತಣಿಸುವ ತಣಿಯುವ ಆಸೆ ಹೊಂದಿದ್ದರು ಇಹಃಪಗೆಯಾಂಡ ದಂಪತಿಗಳು. ಈ ರೀತಿ ಅರವತ್ತು ವರ್ಷಗಳು ಕಳೆಯುತ್ತಿದ್ದವು. ಇಹಃಪಗೆಯಾಂಡರ ಭಕ್ತಿ ಪರಿಮಳ ಭೂಲೋಕದೊಳಗೆಲ್ಲಾ ಹರಡುತ್ತಿರುತ್ತದೆ. ಶಿವ ಪರೀಕ್ಷಿಸುವ ಹಂಬಲದಿಂದ ವಿಟವೇಷಧಾರಿಯಾಗಿ ಬರುತ್ತಾನೆ. ಆತನ ಯೌವ್ವನ, ನೋಟ, ರೂಪ, ವೇಷವನ್ನು ಪುರದ ಜನ ಬಿಟ್ಟ ಕಣ್ಣಳಿಂದ ನೋಡಿ ಆಶ್ಚರ್ಯಪಡುತ್ತಾರೆ. ಅವನನ್ನು ಚಂದ್ರನ ಜೊತೆ ಬರುವ ತಾರೆಗಳಂತೆ ಹಿಂಬಾಲಿಸುತ್ತಾರೆ. ಈ ಮೆರವಣಿಗೆ ಇಹಂಪಗೆಯಾಂಡ ಮನೆಯ ಸಮೀಪಕ್ಕೆ ಬರುತ್ತದೆ. ಮೊದಲು ಸಂದೇಹಗೊಂಡರೂ ನಂತರ ನೊಸಲ ಭಸಿತ ವೇಷಧಾರಿ ಯಾವನಾದರೂ ಅವನು ಶಶಿಧರನೆನುತ ಶರಣಾರ್ಥಿ ದೇವ ಶರಣೆಂದು ಕಾಲ ಮೇಲೆ ಬಿದ್ದು ಮನೆಗೆ ಕರೆತಂದು ಉನ್ನತಾಸನವನಿತ್ತು ಕಾಲ್ತೊಳೆದು ಎಡೆಗೆ ಆಹ್ವಾನಿಸಲು, ವಿಟವೇಷಧಾರಿ ನಮಗೆ ಯಾವುದು ಕೊರತೆಯಿಲ್ಲ, ಕೇಳಿದ್ದನ್ನು ಇಲ್ಲವೆನ್ನದೆ ಶಿವಭಕ್ತರಿಗೆ ನೀಡುವ ನಿನ್ನ ಬಗೆಗೆ ಕೇಳಿ ಇಲ್ಲಿಗೆ ಬಂದೆವು. ನಿಮ್ಮಲ್ಲಿ ಒಂದು ಬೇಡಿಕೆಯಿಡುತ್ತೇವೆ. ಸಾಧ್ಯವಾದರೆ ಕೊಡು, ಇಲ್ಲವಾದರೆ ಇಲ್ಲವೆನ್ನು ಎಂದು ಪೀಠಿಕೆ ಹಾಕುತ್ತಾನೆ. ಅದಕ್ಕೆ ಇಹಃಪಗೆಯಾಂಡರು 'ಪೇಳಿರೆ ದೇವ ಏತೆರನದಂ ಬೆಸಸವಾನಿತ್ತಪೆಂ ಎನ್ನುತ್ತಾರೆ.

ಅದಕ್ಕೆ ಭಕ್ತನು ನಮ್ಮ ದೇವಾರ್ಚನೆಗೆ ವನಿತೆಯೋರ್ವಳನೀವುದು ಎನ್ನುತ್ತಾನೆ. ಎರಡು ನೂರು ಜನ ಸತಿಯರನ್ನು ಕರೆದು ತೋರಿಸಿದಾಗ ತೊತ್ತಿರ ನಾನೊಲ್ಲೆಯೆನ್ನುತ್ತಾನೆ. ರಾಣಿವಾಸದವರನ್ನು ಒಲ್ಲೆಯೆನ್ನುತ್ತಾನೆ. ಪತಿಹಿತವೆಯನಲ್ಲದೆ ಬೇರೆಯವರನ್ನು ಒಪ್ಪುವುದಿಲ್ಲ. ಇಹಃಪಗೆಯಾಂಡರು ಪತಿಹಿತವನ್ನು ವಿಟವೇಷಧಾರಿ ಭಕ್ತನಿಗೆ ಅರ್ಪಿಸುತ್ತಾರೆ. ಅವಳನ್ನು ತನ್ನ ಹಿಂದೆ ಕರೆದುಕೊಂಡು ಭಕ್ತ ವಿಟನು ಹೊರಡುತ್ತಾನೆ.

ಪುರ ಜನರಿಗೆ ಆಶ್ಚರ್ಯವಾಗುತ್ತದೆ. ಹಾಸಿಗೆಯಿಳಿಯದವಳನ್ನು ಬೀದಿಗೆ ಬರುವಂತೆ ಮಾಡಿದನು. ಸೂರ್ಯನನ್ನು ಕಾಣದವಳನ್ನು ಬಿರುಬಿಸಿಲಿನಲ್ಲಿರಿಸಿದ್ದಾನೆ ಎಂದು ಘಾಸಿಗೊಳ್ಳುತ್ತಾರೆ. ಪತಿಹಿತವೆಯ ಬಂಧುಗಳಿಗೆ ವಿಷಯ ತಿಳಿದು 'ಜೋಳನಾಗಲಿ, ಬಾಳಲೋಚನನಾಗಲಿ' ಪತಿಹಿತವೆಯನ್ನು ಅವನು ಕರೆದುಕೊಂಡು ಹೋಗಲು ಬಿಡುವುದಿಲ್ಲವೆಂದು, ಸೈನ್ಯಸಮೇತರಾಗಿ ಅಡ್ಡಗಟ್ಟಿ ಯುದ್ಧಕ್ಕೆ ನಿಲ್ಲುತ್ತಾರೆ. ಭಕ್ತನ ನೆರವಿಗೆ ಬಂದ ಇಹಃಪಗೆಯಾಂಡ ಸೈನ್ಯವನ್ನೆಲ್ಲಾ ಹಿಮ್ಮೆಟ್ಟಿಸುತ್ತಾನೆ. ಕೊನೆಗೆ ಭಕ್ತನು ನಿಜರೂಪವನ್ನು ತೋರಿಸಿ, ಶಿವನು 'ಧರೆಗೆ ಪೊಸಲೇ ಭಕ್ತ ನಿಂತು ಮಾಡಿಯು ಕರಂ, ತನ್ನ ಮನದನ್ನಾಳಂ ಬೇಡಲಿತ್ತವರುಂಟೆ' ಎಂದು ನಂದೀಶನಿಗೆ ತಿಳಿಸಿ ಹೇಳುತ್ತಾನೆ. ಈ ರಗಳೆಯಲ್ಲಿ ಇಹಂಃಪಗೆಯಾಂಡರ ಭಕ್ತಿಯನ್ನು ಪರೀಕ್ಷಿಸಲು ವಿಟವೇಷಧಾರಿಯಾದ ಶಿವನು ಪತಿಹಿತವೆಯನ್ನು ಬೇಡುತ್ತಾನೆ. ಇಹಃಪಗೆಯಾಂಡರು ಮೊದಲು ಕೊಟ್ಟ ೨೦೦ ಸತಿಯರನ್ನು ಒಪ್ಪದಿದ್ದಾಗ, ರಾಣಿವಾಸದವರನ್ನು ಕೊಡಲಿಚ್ಚಿಸುತ್ತಾನೆ. ಅನಿವಾರ್ಯವಾದಾಗ ತನ್ನ ಸತಿ ಪತಿಹಿತವೆಯನ್ನು, ತಮ್ಮ ಸತಿಯನ್ನು ಸಮರ್ಪಣೆ ಮಾಡುವುದು ದೋಷವಾಗಿ ಕಾಣದಿದ್ದರೂ ಆ ಕಾಲದ ಸಮಾಜ ಅದನ್ನು ನೀತಿಬಾಹಿರವೆಂದು ಪರಿಗಣಿಸಿದಂತೆ ಕಾಣುತ್ತದೆ. ವಿಟವೇಷಧೀಶ್ವರನ ಜೊತೆ ಪತಿಹಿತವೆ ನಡೆದು ಬರುತ್ತಿರುವುದನ್ನೇ ಪುರಜನರು ಸಹಿಸಲಾರರು. ಏನಿದೇನಿದು, 'ಇಂತು ಕೊಟ್ಟವರುಂಟೆ ಈ ಸೌಕುಮಾರಿಯಂ' ಎನ್ನುತ್ತಾರೆ. ಆಕೆಯ ಬಂಧುಗಳಂತು ಕೊಂಡೊಯ್ಯುವನಾತಂಗ ಮೆಂಟೆರ್ದಯುಂಟೆ'[೧೧] ಎಂದು ಸಿಡಿದಬ್ಬರಿಸುತ್ತಾರೆ. ಅತಿಥಿಗಳ ಬಗೆಗಿನ ವಿಶೇಷ ಭಕ್ತಿಯಿಂದ ಇಹಃಪಗೆಯಾಂಡರು ತಮ್ಮ ಸತಿಪತಿಹಿತವೆಯನ್ನು ಬಿಟ್ಟುಕೊಟ್ಟರೂ, ಅಂದಿನ ಸಮಾಜ ಇದನ್ನು ಮಾನ್ಯ ಮಾಡುತ್ತಿರಲಿಲ್ಲವೆಂಬುದಕ್ಕೆ ಪತಿಹಿತವೆ ಸಂಬಂಧಿಕರು ಮತ್ತು ಪುರಜನರು ನಡೆಸುವ ಉಗ್ರ ಪ್ರತಿಭಟನೆಯೇ ಸಾಕ್ಷಿಯಾಗಿದೆ.

ಇದೇ ತರಹದ ಪ್ರಸಂಗ 'ಬಸವರಾಜದೇವರ ರಗಳೆ'ಯಲ್ಲಿಯೂ ಬರುತ್ತದೆ. ವಿಟವೇಷಧಾರಿಯಾದ ಶಿವನು ಹದಿನಾರರ ಹರೆಯದವನಾಗಿ ಶಿವರಾತ್ರಿಯ ದಿನದಂದು ಬಸವರಾಜನ ಮಹಾಮನೆಯ ಹತ್ತಿರ ಬರುತ್ತಾನೆ. ಅತಿಥಿ ಬರುವುದನ್ನು ಕಂಡ ತಕ್ಷಣ ಬಸವನು ಪುಳಕದೊಡನೆ ಬೋಂಕನೆದ್ದು ಯುಕ್ತ ರೀತಿಯಲ್ಲಿ ಆಹ್ವಾನಿಸಿ, ವಿನ್ನತಾಸನದಲ್ಲಿ ಕುಳ್ಳಿರಿಸಿ ಪಾದಸೇವೆ ಮಾಡುತ್ತಾನೆ. ವಿಟವೇಷಧಾರಿ ಶಿವನು ಹೆಂಗೂಸಿಲ್ಲದೆ ಎಂದುಂ ಇದ್ದುದಿಲ್ಲವೆನ್ನುತ್ತಾನೆ. ಪುರದ ಪುಣ್ಯಾಂಗನೆಯರೆಲ್ಲಾ ಶಿವಮಾಯೆಯಿಂದ ದಂಪತಿಗಳಾಗಿರುತ್ತಾರೆ. ವಿಧಿಯಿಲ್ಲದೆ ಅನಿವಾರ್ಯವಾಗಿ ಸಿರಿ, ಸರಸ್ವತಿ, ಶುಚಿಯನ್ನು ಮೀರಿಸುವಂತಹ ತನ್ನರಸಿ ಮಾಯಿದೇವಿಯರನ್ನೇ ಕೊಡಲು ತೀರ್ಮಾನಿಸುತ್ತಾನೆ. ಇದನ್ನು ಮೊದಲೇ ಅರಿತುಕೊಂಡಿದ್ದ ಮಾಯಿದೇವಿ ಊರೊಳಗೆ ಹೆಣ್ಣಿಲ್ಲದಿದ್ದರೆ ಜಂಗಮಕ್ಕೆ ತನ್ನನ್ನೇ ಕೊಡುವನೆಂದು ನಿಶ್ಚಯವಾಗಿ ತಿಳಿದಿದ್ದ ಮಾಯಿದೇವಿ ಸಿಂಗರಿಸಿಕೊಂಡು ಬಸವನ ಬರವನ್ನೇ ನೋಡುತ್ತಿರುತ್ತಾಳೆ. ಬಂದ ಮೇಲೆ ನಡೆ ಬಸವ ನಿನ್ನ ಮನೋರಥಮಂ ಮಾಡಿದನೆಂಬ ಸತಿಯನ್ನು ನೋಡಿ ಸಂತೋಷದಿಂದ ವಿಟವೇಷಧಾರಿ ಮಲಗುವ ಕೊಠಡಿಯೊಳಗೆ ಬಿಟ್ಟು ಬಾಗಿಲು ಮುಚ್ಚಿಕೊಂಡು ಬರುತ್ತಾನೆ. ಮಾಯಿದೇವಿ ವಿಟವೇಷಧಾರಿಯನ್ನು ಎಚ್ಚರಿಸುವ ಸಲುವಾಗಿ ಮುಟ್ಟಿದಾಗ ಕಪಟವೇಷಧಾರಿ ಶಿವನಾಗಿ ತನ್ನ ನಿಜರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಈ ಪ್ರಸಂಗದಲ್ಲಿ ಅನಿವಾರ್ಯ ಸಂದರ್ಭದಲ್ಲಿ ಶಿವ ಭಕ್ತರಿಗೆ ಸ್ವ-ಸ್ತ್ರೀ ಸಮರ್ಪಣೆಗೆ ಬಸವಣ್ಣ ಮತ್ತು ಮಾಯಿದೇವಿ ಇಬ್ಬರೂ ಸಿದ್ಧರಿರುತ್ತಾರೆ. ತಮ್ಮ ಭಕ್ತರನ್ನು

ಪರೀಕ್ಷಿಸಲು ಬೇಡುವುದು ಆಗಿನ ಸಮಾಜದಲ್ಲಿ ಅಳಿದುಳಿದು ಬಂದ ವಿಧಾನವಾಗಿತ್ತೆಂದು ಊಹಿಸಲು ಅವಕಾಶವಿದೆ. ಅಲ್ಲದೆ ಹರಿಹರ ಬಸವಣ್ಣನನ್ನು ಕಾವ್ಯನಾಯಕನನ್ನಾಗಿ ಮಾಡಿಕೊಳ್ಳಲು ಪ್ರೇರಣೆ ನೀಡಿರುವುದು ೬೩ ಜನ ಪುರಾತನರ ಭಕ್ತಿ ಸಿದ್ಧಾಂತದ ತಾತ್ವಿಕ ಹಿನ್ನೆಲೆಯೆನ್ನಬಹುದು. ಹರಿಹರನ ಕಾಲಘಟ್ಟದಲ್ಲಿ ಬಸವಣ್ಣನ ಬಗೆಗಿದ್ದ ವರ್ಣರಂಜಿತ ಬದುಕು ಜಾನಪದದಲ್ಲಿ ಒಂದು ರೂಪ ಪಡೆದುಕೊಂಡಿತ್ತು. ಹರಿಹರ ಬಸವಣ್ಣನವರ ವಚನಗಳಿಗಿಂತ ಜನಪದ ಕಥನಗಳು ೬೩ ಜನ ಪುರಾತನರ ಕಥೆಗಳಿಂದ ಪ್ರೇರಣೆ ಪಡೆದು ಬಸವರಾಜದೇವರ ರಗಳೆ ಬರೆದಿದ್ದಾನೆ. ಶ್ಲೀಲ ಅಶ್ಲೀಲದ ಬಗೆಗೆ ಜನಪದರ ನಿಲುವು ಬೇರೆ ರೀತಿಯಿದೆ. ಇವರಿಗೆ ಇದು ದೊಡ್ಡ ಸಂಗತಿಯಲ್ಲ. ಅದೇ ರೀತಿ ೬೩ ಜನ ಪುರಾತನದ ಭಕ್ತಿ ಪ್ರಕರತೆಗೆ ಕೌಟುಂಬಿಕ ಸಂಬಂಧಗಳಾಗಲಿ, ಗಂಡು-ಹೆಣ್ಣಿನ ಸಂಬಂಧಗಳಾಗಲಿ ಅಡ್ಡ ಬರುವುದಿಲ್ಲ. ಭಕ್ತಿಯೇ ಪರಮವಾದುದು. ಈ ಹಿನ್ನೆಲೆಯಲ್ಲಿ ಬಸವರಾಜದೇವರ ರಗಳೆಯಲ್ಲಿ ಬರುವ ಮಾಯಿದೇವಿಯನ್ನು ವಿಟವೇಷಧಾರಿ ಶಿವನಿಗೆ ಸಮರ್ಪಿಸುವ ಪ್ರಸಂಗವನ್ನು ಹಾಗೂ ಇಹಃಪಗೆಯಾಂಡರು ವಿಟವೇಷಾಧೀಶ್ವರನಿಗೆ ಪತಿಹಿತವೆಯನ್ನು ಅರ್ಪಿಸುವುದನ್ನು ಪರಿಭಾವಿಸಬಹುದಾಗಿದೆ.

ಒಂದು ಜನಪದ ಕಥೆಯಲ್ಲಿ ನಿರೂಪಿತವಾಗಿರುವಂತೆ ಮಗ ರಾಜನಿಗೆ ಹೆಣ್ಣು ನೋಡಲು ಹೋದ ಕಂಪಿಲರಾಯ, ರತ್ನಾಜಿಯನ್ನು ನೋಡಿ ಅವಳ ರೂಪಕ್ಕೆ ಮನಸೋತು ತಾನೇ ಮದುವೆಯಾದನೆಂಬ ವಿಷಯ ಬರುತ್ತದೆ. ಇನ್ನೊಂದು ಕಥೆಯಲ್ಲಿ ಮಗ ಕುಮಾರರಾಮನಿಗೆ ಹೆಣ್ಣು ಹುಡುಕಲು ಹೋದ ಕಂಪಿಲರಾಯ ಸವಾಬನ ಮಗಳು ರತ್ನಾಜಿಯನ್ನು ನೋಡಿ ರಾಮನ ಚಿತ್ರವನ್ನು ತೋರಿಸಿ 'ಕತ್ತಿಗೆ ಧಾರೆ ಎರೆಸಿಕೊಂಡು ಬಂದು ಈ ಸುದ್ದಿಯನ್ನು ಯಾರಿಗೂ ತಿಳಿಸದೆ ತಾನೇ ಗಂಡನಾಗಿ ರತ್ನಾಜಿ ಜೊತೆ ಸುಖ ಅನುಭವಿಸುತ್ತಾನೆ. ವಿಷಯ ತಿಳಿದ ರತ್ನಾಜಿ ನಿರಾಶಳಾಗಿ ಕುಮಾರರಾಮನ ಹಂಬಲದಲ್ಲಿ ಕಾಲ ಕಳೆಯುತ್ತಾಳೆ ಎಂಬ ವಿಷಯ ಬರುತ್ತದೆ. ಹೀಗೆ ಒಂದೊಂದು ಕಥೆಯಲ್ಲಿ ಒಂದೊಂದು ಅಂಶಕ್ಕೇ ಹೆಚ್ಚಿನ ಗಮನ ನೀಡಲಾಗಿದ್ದರೂ, ಕೆಲವು ಅಂಶಗಳಲ್ಲಿ ಸಾಮ್ಯತೆಯಿದೆ. ಕಂಪಿಲರಾಯ ಮುದುಕನಾಗಿದ್ದರೂ ಸಣ್ಣ ವಯಸ್ಸಿನ ರತ್ನಾಜಿಯನ್ನು ಮದುವೆಯಾಗುವುದು, ಕುಮಾರರಾಮ ಚೆಂಡಿನಾಟ, ಅವನ ಮೇಲೆ ರತ್ನಾಜಿ ಮೋಹಗೊಳ್ಳುವುದು, ಕುಮಾರರಾಮ ಇದಕ್ಕೊಪ್ಪದೆ ರತ್ನಾಜಿಯನ್ನು 'ತಾಯಿ' ಎಂದು ಸಂಬೋಧಿಸುವುದು, ತನ್ನ ಬಯಕೆ ಈಡೇರದಿದ್ದರಿಂದ ರತ್ನಾಜಿ ರಾಮನ ಮೇಲೆ ಹರಲಿ ಹೋರಿಸುವುದು, ತಲೆ ತೆಗೆಸುವುದು. ಇಲ್ಲೂ ಕೂಡ ಕಥೆಗಳಲ್ಲಿ ಸಾಮ್ಯತೆ ಕಂಡುಬರುತ್ತದೆ. ರತ್ನಾಜಿ ಕ್ಷತ್ರಿಯ ಕುಲದವಳೆಂದು ಒಂದು ಕಥೆ ಹೇಳಿದರೆ, 'ಡೊಂಬರ'ವಳೆಂದು ಮತ್ತೊಂದು ಕಥೆ ಹೇಳುತ್ತದೆ.[೨]

ಜನಪದ ಸಮುದಾಯದಲ್ಲಿ ಒಳ್ಳೆಯವರ ಬದುಕು ಕ್ಷುಲ್ಲಕ ಕಾರಣಗಳಿಂದ ದುರಂತಕ್ಕೆ ಒಳಗಾಗುವ ಸನ್ನಿವೇಶಗಳನ್ನು ಕಾಣಬಹುದು. ಒಂದೇ ಕುಟುಂಬದಲ್ಲಿ 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬಂತೆ ಬಿಂಬಿತವಾಗಿದೆ. ಜನಪದ ಸಂಸ್ಕೃತಿ ಯಾವಾಗಲೂ ಪುರುಷ ಕೇಂದ್ರಿತವೆಂದು ನಂಬಿದರೂ ಕೆಲವು ಸಮಯದಲ್ಲಿ ಮಾತೃ ವರ್ಗಕ್ಕೆ ಸೀಮಿತವಾಗಿ ಪರಿವರ್ತಿಸುತ್ತದೆ. ಆದ್ದರಿಂದ ಮೊದಲು ಜನಪದ ಸಮಾಜದಲ್ಲಿ ಅನಕ್ಷರತೆ ಇವೆಲ್ಲಕ್ಕೂ ಮೂಲ ಕಾರಣ ಎಂಬುದನ್ನು ಸಾರಸಗಟಾಗಿ ಒತ್ತಿ ಹೇಳಬಹುದು. ಅನಾಗರಿಕತೆಯಿಂದ

ನಾಗರಿಕತೆ ಕಡೆಗೆ ಜನಪದರು ಹೆಚ್ಚಾಗಿ ವಾಲುವುದಿಲ್ಲ. ಆ ಕಾರಣದಿಂದಲೇ ಇಂತಹ ಅಮಾಯಕ ಘಟನೆಗಳು ನಡೆಯಲು ಸಾಧ್ಯ. ಇಲ್ಲಿ ಕೌಟುಂಬಿಕ ಜೀವನದ ಸರಸ ವಿರಸಗಳನ್ನು ಅತ್ಯಂತ ಸಮರ್ಥವಾಗಿ ಚಿತ್ರಿಸಬಹುದು. ಹಾಗೆಯೇ ಕರುಳನ್ನು ಹಿಂಡುವ ಸನ್ನಿವೇಶಗಳು ಸಹ ವ್ಯಕ್ತವಾಗುತ್ತವೆ. ನಮ್ಮ ಜನಪದರು ಹೊರಗಿನಿಂದ ಬಂದ ಹೆಣ್ಣು ಮಗಳನ್ನು ಯಾವ ರೀತಿ ನೋಡಿಕೊಳ್ಳುತ್ತಾರೆ ಎಂಬುದು ಜನರ ಕಣ್ಣಿಗೆ ಗೋಚರವಾಗುತ್ತದೆ. ಜನಪದ ಸಂಸ್ಕೃತಿಯಲ್ಲಿ 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂಬ ಭಾವನೆ ಇರುತ್ತದೆ. ಆದರೂ ಎಲ್ಲೋ ಒಂದು ಕಡೆ ಸಂಬಂಧಗಳು ಇರಲೇಬೇಕು ಎಂಬುದನ್ನು ಸಹ ಸಾರುತ್ತಲೇ ಜನಪದ ಸಮುದಾಯ ಬಂದಿದೆ.

ಜನಪದ ಸಾಹಿತ್ಯದಲ್ಲಿ ಯಾವಾಗಲೂ ಆಶಯಗಳಿಗೆ ಮೊದಲ ಸ್ಥಾನವನ್ನು ಜನಪದ ಕವಿಗಳು ನೀಡಿದ್ದಾರೆ. ಆ ಕಾರಣದಿಂದ ಕಥೆಗಳನ್ನು ಬೇಕಾದಾಗೆ ಸನ್ನಿವೇಶಕ್ಕೆ ತಕ್ಕಂತೆ ಬದಲಿಸುವ ಕೌಶಲ್ಯ ಹೊಂದಿದ್ದಾರೆ. ಜನಪದ ಸಾಹಿತ್ಯದಲ್ಲಿ ಕಥನ ಕಾವ್ಯಗಳನ್ನು ತೆಗೆದುಕೊಂಡರು ಸಹ ದುರಂತದಲ್ಲಿ ಅಂತ್ಯ ವಾಗುವುದನ್ನು ಗಮನಿಸಬಹುದಾಗಿದೆ. ಪುರುಷ ಪ್ರಧಾನ ಸಂಸ್ಕೃತಿ ಇರುವಂತಹ ಸಮುದಾಯಗಳಲ್ಲಿನ ಸ್ತ್ರೀಯರಿಗೆ ಬೇರೆ ಪ್ರಪಂಚವನ್ನು ನೋಡಲು ಅವಕಾಶವೇ ದೊರೆಯುವುದಿಲ್ಲ. ಆ ಕಾರಣದಿಂದಲೇ ಗಂಡ ಹೆಂಡತಿಯರು ಸಂಬಂಧಗಳಿಗೆ ಇಲ್ಲಿ ಹೆಚ್ಚಿನ ಮಹತ್ವ ದೊರಕಿದೆ. ಉಳಿದ ಸಂಬಂಧಗಳಿಗೆ ಯಾವುದೇ ಪ್ರಾಮುಖ್ಯತೆ ನೀಡದಿರುವುದನ್ನು ಗಮನಿಸಬೇಕು.

ಚಿಕ್ಕೋಳು ಹಿರಿದಿಮ್ಮವ್ವ ಕಥೆ ಮಂಡ್ಯ, ತುಮಕೂರು ಜಿಲ್ಲೆಗಳಲ್ಲಿ ಹೆಚ್ಚು ಪ್ರಸಿದ್ಧವಾಗಿದೆ. ತನ್ನ ವಿವಾಹ ಚೌಕಟ್ಟನ್ನು ಬೊಮ್ಮಲಿಂಗ ಮುರಿದನೆಂಬ ಕಾರಣಕ್ಕೆ ವ್ಯಗ್ರಳಾದ ಹಿರಿದಮ್ಮವ್ವ ಬೊಮ್ಮಲಿಂಗನನ್ನು ಕೊಂದು ತಾನು ಕೆಂಡಕೊಂಡವನ್ನೇರುತ್ತಾಳೆ. ಬೊಮ್ಮಲಿಂಗನದು ನಿಜವಾದ ಪ್ರೀತಿಯೆಂಬುದು ಹಿರಿದಿಮ್ಮವ್ವನಿಗೂ ಗೊತ್ತಿರಬಹುದಾದರೂ ಅವಳಿಗೆ ಜಾತಿಯ ಅಡ್ಡಗೋಡೆಯನ್ನು ಮೀರುವ ಸಂಪ್ರದಾಯ, ಕುಟುಂಬ, ಸಮಾಜವನ್ನು ಎದುರಿಸುವ ಸಾಮರ್ಥ್ಯವಿಲ್ಲದಿರುವುದು ಇಲ್ಲಿ ಎದ್ದು ಕಾಣುತ್ತದೆ.

ಉತ್ತರದೇವಿ ಕಥೆ ಕರ್ನಾಟಕದ ಸುಪ್ರಸಿದ್ಧ ಜನಪದ ಕಥನಗೀತೆ. ಈ ಕಥೆಯ ಆರಂಭದಲ್ಲಿ ಅತ್ತೆಗೂ, ಸೊಸೆಗೂ ಮನೆಯ ಹಿತ್ತಲಿನಲ್ಲಿ ಜಗಳ ಪ್ರಾರಂಭವಾಗುತ್ತದೆ. ಇದಕ್ಕೆ ಕಾರಣ ಉತ್ತರೆಯ ಶೀಲದ ಬಗೆಗಿನ ಶಂಕೆ. ನೀರಿಗೆ ಹೋದ ಉತ್ತರ ದೇವಿ ತಡವಾಗಿ ಮನೆಗೆ ಬರುತ್ತಾಳೆ. ಕಾರಣ ಕೇಳಿದ ಅತ್ತೆಗೆ ಇವಳು ಸಮರ್ಪಕ ಉತ್ತರ ನೀಡಿರುವುದಿಲ್ಲ. ಇದು ಅವರಿಬ್ಬರ ಮಧ್ಯೆ ಕಲಹಕ್ಕೆ ನಾಂದಿಯಾಗುತ್ತದೆ. ಇದು ಅಂತ್ಯಪೂರ್ಣವಾದ ಶ್ರೇಷ್ಠತಮ ದುರಂತ ಕಥಾನಕವಾಗಿದೆ. ಅತ್ಯುತ್ತಮವಾದ ಕಥೆಯ ಕಲೆಗಾರಿಕೆಯನ್ನಿಲ್ಲಿ ಕಾಣಬಹುದು. ಮೊದಲು ಕೊನೆಗಳೆರಡರ ಪರಿಣಾಮ ರಮಣೀಯವಾಗಿವೆ. ಸತಿಪತಿ ಪ್ರೇಮ ಹಿನ್ನೆಲೆಗೆ ಸರಿದು, ಉದ್ದಕ್ಕೂ ದುರಂತ ಛಾಯೆ ಆವರಿಸುತ್ತದೆ. ಸೊಸೆ ತನ್ನ ಪ್ರೀತಿಯ ಗಿಡ, ಮರ ಪ್ರಾಣಿಗಳಿಂದ ನೆರೆಹೊರೆಯ ಜನರಿಂದ ಬೀಳ್ಕೊಡುವ ಸನ್ನಿವೇಶ ಕನಿಕರವನ್ನು ತರಿಸುತ್ತದೆ. ಅಗಲಿಕೆಯ ಕಾಲದಲ್ಲಿ ಗಂಡನ ಸುದ್ದಿ ಇಲ್ಲದ್ದೇ ಸನ್ನಿವೇಶದ ರೌದ್ರತೆಯನ್ನು ಅಪಾರಗೊಳಿಸುತ್ತದೆ. ಇಲ್ಲಿ ಮೌನವೇ ಧ್ವನಿ. ಚಿನ್ನಯ್ಯನ ದೌರ್ಬಲ್ಯದ ಜೊತೆಗೆ ವಿಧಿಯ ಕ್ರೌರ್ಯವೂ ದುರಂತಕ್ಕೆ ಕಾರಣವಾಗುತ್ತದೆ. ಆ ಕ್ರೌರ್ಯಕ್ಕೆ ದನಗಾಹಿಗಳು

ನಿಮಿತ್ತರಾಗುತ್ತಾರೆ. ಉತ್ತರದೇವಿಯ ಕಣ್ಣೀರ ಕಾಲುವೆ ಕಾಲಾನಂತರದಲ್ಲಿ ಮಹಾಪೂರವಾಗಿ ಪ್ರವಹಿಸುತ್ತದೆ. ಸಂಕಟ ನಿರೂಪಣೆಯ ಮೂಲಕವಾಗಿಯೇ ಪೂರ್ವ ಜೀವನದ ಕಲ್ಪನೆ ಮನಮುಟ್ಟುವಂತೆ ಹೇಳಿರುವುದರಲ್ಲಿ ಕಥನ ಕೌಶಲ ಎದ್ದು ಕಾಣುತ್ತದೆ.[೨೩]

ಜನಪದರಲ್ಲಿ ಗಂಡು ಹೆಣ್ಣುಗಳ ಸಂಬಂಧದಲ್ಲಿ ಬಹಳಷ್ಟು ಸಂದರ್ಭಗಳಲ್ಲಿ ವಿಘಟನೆಯಾಗುವುದಕ್ಕೆ ಅವಕಾಶಗಳಿರುತ್ತಿರಲಿಲ್ಲ. ಹೊಂದಾಣಿಕೆಯಿಂದ ಜೀವನ ನಡೆಸುತ್ತಿದ್ದುದನ್ನು ಹಲವು ತ್ರಿಪದಿಗಳಲ್ಲಿ ಕಾಣಬಹುದಾಗಿದೆ. ಮದುವೆಯಾದ ಮೇಲೆ ಸಣ್ಣಪುಟ್ಟ ಮನಸ್ತಾಪಗಳು ಬಂದಾಗ ಗಂಡನನ್ನು ಬಿಟ್ಟು ಹೆಣ್ಣು ತವರು ಸೇರುತ್ತಿದ್ದಳು. ಹಾಗೆಯೇ ಗಂಡನಾದವನು ಕೆಲವೊಮ್ಮೆ ಕುಟುಂಬದಲ್ಲಿ ಉಂಟಾದ ಮನಸ್ತಾಪಗಳಿಗಾಗಿ ಮನೆ ಬಿಟ್ಟು ಊರೂರು ಅಲೆಯುತ್ತಿದ್ದುದು ಉಂಟು. ಹಾಗೆಯೇ ಗಡ್ಡ ಮೀಸೆ ಬೆಳೆಸಿಕೊಂಡು ದೇವದಾಸನಂತೆ ಅಡವಿ ಸೇರುತ್ತಿದ್ದ ಸಂದರ್ಭಗಳೂ ಹೆಚ್ಚಾಗಿರುತ್ತಿದ್ದವು. ಅಂತಹ ಸಂದರ್ಭಗಳಲ್ಲಿ ಗಂಡ ಹೆಂಡತಿಯ ಜೊತೆ ಒಂದಾಗಿ ನೈತಿಕತೆಯಿಂದ ಬದುಕುವ ಹಾಗೂ ಜೀವನ್ಮುಖಿಯಾಗುವ ಸ್ಥೈರ್ಯವನ್ನು ಜನಪದರು ತುಂಬುತ್ತಿದ್ದರೆಂಬುದಕ್ಕೆ ಅನೇಕ ಉದಾಹರಣೆಗಳು ಸಿಗುತ್ತವೆ.

ಕೆಲವೊಮ್ಮೆ ಮೈ ಬಣ್ಣವೂ ಗಂಡು-ಹೆಣ್ಣು ಸಂಬಂಧದ ಮಧ್ಯೆ ವಿರಸಕ್ಕೆ, ವಿಘಟನೆಗೆ ಕಾರಣವಾಗುವುದುಂಟು. ಬಿಳಿಯ ಮೈಬಣ್ಣ ಶ್ರೇಷ್ಠ, ಕಪ್ಪು ಮೈಬಣ್ಣ ಕನಿಷ್ಠ ಎಂಬ ಮನೋಭಾವ ಜನಮನದಲ್ಲಿ ಮನೆ ಮಾಡಿದೆ. ಬಿಳಿ ಬಣ್ಣದವರು ತಮ್ಮ ಬಣ್ಣವನ್ನು ಸಮರ್ಥಿಸಿಕೊಂಡರೆ, ಕಪ್ಪು ವರ್ಣದವರು ತಮ್ಮ ಬಣ್ಣವನ್ನು ಸಮರ್ಥಿಸಿಕೊಳ್ಳುವುದನ್ನು ಕಾಣುತ್ತೇವೆ. ಕಪ್ಪು ವರ್ಣದವರನ್ನು ಕೃಷ್ಣವರ್ಣವೆಂದೂ ಕರೆಯುತ್ತಾರೆ. ಕಪ್ಪು ಕಸ್ತೂರಿಯೆಂದು ಕರೆಯುವುದನ್ನು ಕೇಳಿದ್ದೇವೆ. ರಾಮ ಕೃಷ್ಣರ ಮೈ ಬಣ್ಣವು ಕಪ್ಪೆಂದು ಚಿತ್ರಿಸುವುದರ ಮೂಲಕ ಕಪ್ಪು ಬಣ್ಣಕ್ಕೆ ದೈವತ್ವದ ನೆಲೆಯನ್ನು ಒದಗಿಸಲಾಗಿದೆ. ಕಪ್ಪು ಬಣ್ಣ ನಿಸರ್ಗ ಸಹಜವೆಂದುರಾಗಿಯು ಕಪ್ಪಾಗಿದ್ದರೂ ರಾಮಮಾನ್ಯ ದೈವಮಾನ್ಯವೆಂದೂ ಬಿಂಬಿಸಲಾಗಿದೆ. ಆದರೂ ಕಪ್ಪು ಮೈ ಬಣ್ಣದ ಕಾರಣ ಬಿಳಿಯರಿಂದ ಕರಿಯರು ಅನುಭವಿಸಿದ ಕಷ್ಟ ನಷ್ಟ ಈಗ ಇತಿಹಾಸ ಸತ್ಯವಾಗಿದೆ. ಈ ಹಿನ್ನೆಲೆಯಲ್ಲಿ ಬಣ್ಣದ ಕಾರಣ ಹೆಂಡತಿಯನ್ನು ಹಿಂಸಿಸುವ ಸಂಸಾರದಲ್ಲಿ ಕಿರಿಕಿರಿಯುಂಟುಮಾಡುವ ಗಂಡಿಗೆ ಜನಪದರು ಬುದ್ಧಿವಾದ ಹೇಳಿದ್ದಾರೆ. ಬಣ್ಣ ಮುಖ್ಯವಲ್ಲ ಗುಣ ಮುಖ್ಯ ಬಹಿರಂಗ ಸೌಂದರ್ಯಕ್ಕಿಂತ ಅಂತರಂಗ ಸೌಂದರ್ಯ ಮುಖ್ಯ ಎನ್ನುವವರು ಬಹುಜನ ಮೆಚ್ಚುವ ಬಿಳಿಯ ಹಾಗೂ ಕೆಂಪು ಬಣ್ಣವನ್ನು ಇಷ್ಟಪಡದೆ, ಅದರ ಹುಳುಕಿನತ್ತ ಗಮನ ಸೆಳೆಯುತ್ತಾರೆ. 'ಮೇಲೆಲ್ಲ ತಳುಕು ಒಳಗೆಲ್ಲಾ ಹುಳುಕು' ಎಂಬ ಗಾದೆ ಮಾತು ಇದೆ.

ಕೆಲವೊಮ್ಮೆ ರಾಜರು ರಾಜಪರಿವಾರದವರು ಹಾಗೂ ಗೌಡ, ಶ್ರೀಮಂತರು ಪರಸ್ತ್ರೀಗೆ ಆಸೆಪಟ್ಟು ಜೆನ್ನತ್ತಿ ಹೋಗುವ ಸಂದರ್ಭಗಳು ಇದ್ದಿರುವ ಸಾಧ್ಯತೆಯಿದೆ. ಇಂತಹ ಸಂದರ್ಭಗಳಲ್ಲಿ ಹೆಣ್ಣು ಅವಸರ ಪಡದೇ ಸಹನೆಯಿಂದಲೇ ಇರಬೇಕು. ಮನೆ ಸಂಸಾರವನ್ನು ಬಿಟ್ಟು ಬೇರೆ ಹೆಣ್ಣಿನ ಹಿಂದೆ ಅಲೆದಾಡಿದವರು ಜೀಸತ್ತಾಗ ಸಾಕಾದಾಗ ತಮ್ಮ ಮನೆಗೆ ಬರಲೇಬೇಕು. ಬಂದೇ ಬರುತ್ತಾನೆಂಬ ನಂಬಿಕೆ ಜನಪದರಲ್ಲಿತ್ತು.

ಹೆಣ್ಣು ಮನೆಬಿಟ್ಟು ಆಚೆ ಹೋಗಬಾರದೆಂಬ ನಿಯಮವು ಹಿಂದಿನಿಂದಲೂ ಪುರುಷ ಪ್ರಧಾನ ಸಮಾಜದಲ್ಲಿ ಇರುವಂತಹುದೇ ಆಗಿದೆ. ಮದುವೆಯಾಗದಿರುವ ಅಥವಾ ಮದುವೆಯಾಗಿ ಗಂಡನ ಮನೆಗೆ ಹೋಗಲಿರುವ ಅಥವಾ ಗಂಡನ ಮನೆಯಲ್ಲಿರುವ ಮಗಳಿಗೆ ತಂದೆ ತಂಗಿಗೆ ಅಣ್ಣ ಉಪದೇಶ ನೀಡಿರುವುದು ಪ್ರಾಚೀನ ಕಾವ್ಯಗಳಲ್ಲಿರುವಂತೆ ಜನಪದರಲ್ಲಿಯೂ ಇರುವುದನ್ನು ಕಾಣಬಹುದು.

ತೀರಾ ಪ್ರಾಚೀನ ಕಾಲದಲ್ಲಿ ವಿವಾಹಪೂರ್ವವಾಗಲಿ ವಿವಾಹನಂತರವಾಗಲಿ ಗಂಡ ಹೆಂಡತಿಯರು ಮಾತ್ರವಲ್ಲದೆ ಯಾವುದೇ ಗಂಡು-ಹೆಣ್ಣು ಪರಸ್ಪರ ಸೇರುವುದನ್ನು ಅನೈತಿಕವೆಂದಾಗಲಿ, ಸಮಾಜ ಬಾಹಿರ ಚಟುವಟಿಕೆಯೆಂದಾಗಲಿ ಯಾರೂ ಭಾವಿಸುತ್ತಿರಲಿಲ್ಲ. ಬ್ರಾಹ್ಮಣ ಮತ್ತು ಉಪನಿಷತ್ತುಗಳ ಕಾಲದಲ್ಲಿ ವಿವಾಹ ಪೂರ್ವದಲ್ಲಿ ಗಂಡು ಹೆಣ್ಣುಗಳ ಮಧ್ಯೆ ಸಂಬಂಧವಿದ್ದರೂ ಅದು ಆಕ್ಷೇಪಾರ್ಹವಾಗಿರಲಿಲ್ಲ. 'ವರುಣ' ಎಂಬ ಧಾರ್ಮಿಕ ವಿಧಿಯ ಮೂಲಕ ಪಾವಿತ್ರ್ಯ ಹೊಂದಲು ಆ ಕಾಲದಲ್ಲಿ ಅವಕಾಶವಿರುತ್ತಿತ್ತು.

ಷರತ್ತುಬದ್ಧ ವಿವಾಹಗಳು ನಡೆದು ಷರತ್ತು ಭಂಗವಾದೊಡನೆ ಗಂಡು ಹೆಣ್ಣು ಸಂಬಂಧದಲ್ಲಿ ವಿಘಟನೆ ತಲೆದೋರುವುದಕ್ಕೆ ಉದಾಹರಣೆಯಾಗಿ ಒಂಭತ್ತು ಊಟ ಎಲೆಗಳು ಕಥೆಯನ್ನು ನೋಡಬಹುದು.

ವಿವಾಹಪೂರ್ವ ಸಂಬಂಧಗಳು ವಿಶೇಷ ಸಂದರ್ಭದಲ್ಲಿ ಉಂಟಾಗಿ ನಂತರ ವಿಘಟನೆಗೊಳ್ಳುತ್ತಿದ್ದ ಪ್ರಸಂಗಗಳು ಪ್ರಾಚೀನ ಸಾಹಿತ್ಯದಲ್ಲಿವೆ. ಋಷಿಮುನಿಗಳು ಏನು ಮಾಡಿದರೂ ತಪ್ಪಿಲ್ಲವೆಂಬಂತೆ ಯಾರ ಆಕ್ಷೇಪಣೆಯೂ ಇಲ್ಲದಂತೆ ಅವರು ಸಂಬಂಧ ಹೊಂದಬಹುದಾಗಿತ್ತು. ಆದರೆ ವಿವಾಹ ಬಂಧನಕ್ಕಾಗಲಿ, ಕೌಟುಂಬಿಕ ಚೌಕಟ್ಟಿನ ನಿಯಮಕ್ಕೆ ಇವರು ಬದ್ಧರಾಗುತ್ತಿರಲಿಲ್ಲ. ಜಾತಿ, ಧರ್ಮ, ವರ್ಣ, ಭೇದಗಳು ಇಂತಹ ಸಂಬಂಧಗಳಿಂದ ವಿನಾಯಿತಿ ಪಡೆದಿರುತ್ತಿದ್ದವು.

'ರಾಜಾಪ್ರತ್ಯಕ್ಷ ದೇವತಾ' ಎಂದು ಪ್ರಜೆಗಳು ಪೂಜ್ಯ ಭಾವನೆಯಿಂದ ಕಾಣುತ್ತಿದ್ದ ಪ್ರಭುಗಳು ಕಾಲಕ್ರಮೇಣ ತಮ್ಮ ಪ್ರಭುತ್ವದ ದರ್ಪ, ಬಹುಪತ್ನಿತ್ವ ಹೆಣ್ಣು ಬಾಕತನಗಳಿಂದ ಆಗಿನ ಸಮಾಜದಲ್ಲಿ ಅಸಹ್ಯ ಹುಟ್ಟಿಸಿರಬೇಕು. ಇದರಿಂದ ರೋಸಿ ಹೋಗಿದ್ದ ಪ್ರಜೆಗಳು ಎದುರಿಗೆ, ಕೆಲವೊಮ್ಮೆ ತೆರೆಮರೆಯಲ್ಲಿ ಪ್ರತಿಭಟನೆ ತೋರಿಸುತ್ತಿದ್ದರು. ಕುಟುಂಬದ ಗಂಡು-ಹೆಣ್ಣುಗಳ ಸಂಬಂಧಗಳ ಮಧ್ಯೆ ಮೂರನೇ ವ್ಯಕ್ತಿಯ ಪ್ರವೇಶವಾದರೆ ಅಂದರೆ ಕುಟುಂಬ ಚೌಕಟ್ಟನ್ನು ಮೀರಿ ಗಂಡಾಗಲಿ, ಹೆಣ್ಣಾಗಲಿ ಬಾಹ್ಯ ಸಂಬಂಧ ಬೆಳೆಸಿದರೆ, ಅಂತಹ ಕುಟುಂಬಗಳು ಬಹಳ ದಿನವಿರದೆ ವಿಘಟನೆಗೊಳಗಾಗುತ್ತವೆ. ಇದಕ್ಕೆ ಅನೇಕ ಉದಾಹರಣೆಗಳು ಕಥನ, ಕಾವ್ಯಗಳಲ್ಲಿ, ಕಥೆಗಳಲ್ಲಿ ದೊರೆಯುತ್ತವೆ.

ಸಮಾಜವು ಕೆಲವು ರೀತಿಯ ಸಂಬಂಧಗಳನ್ನು ನೀತಿಬಾಹಿರವೆಂದು ಪರಿಗಣಿಸಿದೆ. ತಂದೆ ಮಗಳ ಜೊತೆ, ತಾಯಿ ಮಗನ ಜೊತೆ, ಅಣ್ಣ ತಂಗಿಯ ಜೊತೆ ಬೆಳೆಸುವ ಸಂಬಂಧಗಳಿಗೆ ಸಮಾಜದ ನೈತಿಕ ಬೆಂಬಲವಿರುವುದಿಲ್ಲ. ಆದರೂ ಕೆಲವೊಮ್ಮೆ ಇಂತಹ ಘಟನೆಗಳು ಘಟಿಸಿ ಅಂತಹ ಸಂಬಂಧಗಳು ವಿಘಟನೆಗೆ ಒಳಗಾಗಿರುವ ಸಂದರ್ಭಗಳನ್ನು ನಾವು ಕಾಣುತ್ತೇವೆ. ವರಸೆಯಲ್ಲಿ ಮಗನಾಗಬೇಕಾದ ಕುಮಾರರಾಮನ ಜೊತೆ ರತ್ನಾಜಿ ಪ್ರೇಮದ ಸಂಬಂಧ ಬೆಳೆಸುವ ಪ್ರಯತ್ನ ಅವರ ಸಂಬಂಧದ ವಿಘಟನೆಗೆ ಕಾರಣವಾಗುತ್ತದೆ.

ಪ್ರೀತಿ–ಪ್ರೇಮವು ಜಾತಿ ಬೇಧವಿಲ್ಲದೆ ಮೊಳೆಯುವಂತಹುದು. ಗಂಡು ಇದನ್ನು ವ್ಯಕ್ತಪಡಿಸಲು ನೇರವಾಗಿ ಪ್ರಯತ್ನಿಸುತ್ತಾನೆ. ಆದರೆ ಹೆಣ್ಣು ಅದನ್ನು ನೇರವಾಗಿ ಧೈರ್ಯವಾಗಿ ವ್ಯಕ್ತಪಡಿಸಲು ಸಾಧ್ಯವಾಗುವುದಿಲ್ಲ. ಇದಕ್ಕೆ ಸಮಾಜದ ಹಾಗೂ ಕುಟುಂಬದ ತಂದೆ–ತಾಯಿಯರ ಮತ್ತು ಹಿರಿಯರು ನಿಶ್ಚಯಿಸಿದ ಗಂಡಿನ ಕೈಗೆ ಕೊರಳೊಡ್ಡುವ ಹೆಣ್ಣು ಎಲ್ಲವನ್ನು ಮೌನವಾಗಿಯೇ ಸಹಿಸಿಕೊಳ್ಳುತ್ತಾಳೆ. ಆದರೆ ನಾನು ಬಯಸಿದ್ದನ್ನು ಪಡೆಯಲು ತನಗೆ ದೊರೆಯಬೇಕಾದುದನ್ನು ಕಸಿದುಕೊಂಡು ವ್ಯವಸ್ಥೆಯ ಜೊತೆ ಸಂಘರ್ಷಕ್ಕಿಳಿಯುತ್ತಾನೆ. ಕೆಲವೊಮ್ಮೆ ಹತ್ಯೆಯೂ ನಡೆದುಹೋಗುತ್ತದೆ. ಆದರೆ ಕೌಟುಂಬಿಕ ಚೌಕಟ್ಟನ್ನು ಒಪ್ಪಿಕೊಂಡು ಅದಕ್ಕೆ ವಿಧೇಯಳಾಗಿರುವ ಹೆಣ್ಣು ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ವಿವಾಹವಾದವನ ಪರವಾಗಿಯೇ ನಿಂತು ಹೋರಾಡಿ ಪ್ರತಿಕಾರ ತೀರಿಸಿಕೊಂಡು ಹತ್ಯೆಯಾದ ಗಂಡನ ಜೊತೆ ಕೆಂಡಕೊಂಡ ಹಾಯುವುದನ್ನು ಜನಪದ ಖಂಡಕಾವ್ಯದಲ್ಲಿ ಕಾಣಬಹುದು. ಈ ರೀತಿಯ ಕೆಲವು ಗಂಡು–ಹೆಣ್ಣು ಸಂಬಂಧಗಳು ವಿಘಟಿತಗೊಳ್ಳುವುದನ್ನು ಕಾಣಬಹುದಾಗಿದೆ.

'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎನ್ನುವ ಮಾತನ್ನು ಜನಪದರು ಚಾಚೂ ತಪ್ಪದೆ ಪಾಲಿಸುತ್ತಾರೆ. ಅತ್ತೆ ಸೊಸೆಯರ ಜಗಳದಲ್ಲಿ ಗಂಡಾದವನು ಯಾರ ಪರ ವಹಿಸಿದರೂ ಕಷ್ಟವೇ. ಹೆಂಡತಿ ಪರ ಹೋದರೆ ತಾಯಿ ಕಡೆಯಿಂದ ನಿಷ್ಠುರದ ಮಾತುಗಳು, ತಾಯಿ ಪರ ವಹಿಸಿದರೆ ಹೆಂಡತಿ ಒಂಟಿಯಾಗುತ್ತಾಳೆ. ಹೀಗೆ ಬಿಸಿ ತುಪ್ಪವನ್ನು ಬಾಯಲ್ಲಿಟ್ಟುಕೊಂಡಂತಹ ಪರಿಸ್ಥಿತಿಯನ್ನು ಗಂಡು ನಿಭಾಯಿಸಬೇಕಾಗುತ್ತದೆ. ಕೊನೆಗೆ ಮನೆಯವರ ಪರಿಸ್ಥಿತಿಯ ಕೈಗೊಂಬೆಯಾಗುವ ಗಂಡು ಹೆಂಡತಿಯನ್ನು ಹೊರದೂಡುವುದಕ್ಕೆ ಸಮ್ಮತಿಸುತ್ತಾನೆ. ಹೀಗೆ ಸಣ್ಣ ಸಣ್ಣ ಕಾರಣಗಳಿಂದಾಗಿ ಮದುವೆಯಾದ ಹೆಂಡತಿಯರನ್ನು ಅಡವಿಗಟ್ಟುವುದು ಮತ್ತು ಪ್ರಾಣ ತೆಗೆಯಲು ಬಂಟರನ್ನು ಕಳುಹಿಸುವ ಕ್ರಿಯೆ ನಡೆಯುತ್ತದೆ. ಇಂತಹ ಸಂದರ್ಭದಲ್ಲಿ ಸಾಯಲು ಆಗದೆ ಬದುಕಲು ಆಗದೆ ನರಳಾಡುವ ಪರಿಸ್ಥಿತಿಯಲ್ಲಿ ದೇವರ ಕೃಪೆಯಿಂದ ಗಂಡುಮಗುವನ್ನು ಹಡೆದು ದೊಡ್ಡವನ್ನನಾಗಿ ಬೆಳೆಸಿ ಅವನ ಮೂಲಕವೇ ಮತ್ತೆ ರಾಜನನ್ನು ಸೇರುವ/ಕೊಡುವ ಘಟನೆಗಳು ಹಲವಾರು ಜನಪದ ಕಥೆಗಳಲ್ಲಿ ದೊರೆಯುತ್ತವೆ.

ಹೀಗೆ ವಿಘಟಿತಗೊಳ್ಳುವ ಭಯದಲ್ಲಿ ಹೆಣ್ಣು ಗಂಡನಾಗಲಿ, ಗಂಡನ ಮನೆಯವರಾಗಲಿ ಏನೇ ಮಾಡಿದರೂ ಉಸಿರೆತ್ತದೆ, ಮೌನವಾಗಿಯೇ ಎಲ್ಲವನ್ನು ಸಹಿಸಿಕೊಂಡು ಸಹನೆಯಿಂದ ಬಾಳುತ್ತಿದ್ದುದನ್ನು ಹಲವು ಕಥೆಗಳಲ್ಲಿ ಕಾಣಬಹುದಾಗಿದೆ.

ಮೂಲತಃ ಜನಪದರ ಕೌಟುಂಬಿಕ ವ್ಯವಸ್ಥೆಯಲ್ಲಿ ವಿಘಟನೆ ಎಂಬುದು ಇರಲಿಲ್ಲ. ಗಂಡು–ಹೆಣ್ಣುಗಳ ನಡುವೆ ವಿರಸ ಉಂಟಾದಾಗ ಆ ಕುಟುಂಬದ ಹಿರಿಯರು ಅದನ್ನು ಪರಿಹರಿಸುವ ಪ್ರಯತ್ನ ಮಾಡುತ್ತಿದ್ದರು. ಪರಿಹಾರ ನಿಷ್ಪ್ರಯೋಜಕವಾದಾಗ ಆ ಗಂಡು–ಹೆಣ್ಣುಗಳ ಸಮಸ್ಯೆ ಕೌಟುಂಬಿಕ ವ್ಯವಸ್ಥೆಯನ್ನು ದಾಟಿ ಆಯಾ ಸಮುದಾಯಗಳ ಜವಾಬ್ದಾರಿಯನ್ನು ಹಿರಿಯರು ಪೂರ್ವಪರಗಳನ್ನು ಅರಿತು ಈ ದಾಂಪತ್ಯ ಊರ್ಜಿತವಾಗುವುದು ಸಾಧ್ಯವಿಲ್ಲವೆಂದು ಅರಿತಾಗ ಆ ಎರಡು ಮನೆತನದವರನ್ನು ಸೇರಿಸಿ ಆ ಗಂಡು–ಹೆಣ್ಣುಗಳಿಗೆ ಬಿಡುಗಡೆಯ ದಾರಿಗಳನ್ನು ತೋರಿಸುತ್ತಿದ್ದರು. ಆದ್ದರಿಂದ ಇಲ್ಲಿ ಆಧುನಿಕ ಸಮಾಜ ಹಾಗೂ

ನಾಗರಿಕ ಸಮಾಜ ಹೇಳುವ ವಿಘಟನೆಯ ಸ್ವರೂಪಕ್ಕೂ ಜನಪದರು ಹೇಳುವ ವಿಘಟನೆಯ ಸ್ವರೂಪಕ್ಕೂ ವ್ಯತ್ಯಾಸವಿದೆ. ಜನಪದರ ಕೌಟುಂಬಿಕ ವ್ಯವಸ್ಥೆಯಲ್ಲಿ ಗಂಡು-ಹೆಣ್ಣುಗಳ ಸಂಬಂಧ ಊರ್ಜಿತವಾಗದೇ ಹೋದಾಗ ಅವರಲ್ಲಿ ಬಂಧಮುಕ್ತಗೊಳಿಸಿ ಜೀವಿಸುವ ಹಕ್ಕಿನ ಹಲವು ದಾರಿಯನ್ನು ಸೂಚಿಸುತ್ತಿದ್ದರು. ಹೀಗೆ ಪೂರ್ವದಲ್ಲಿ ಉಂಟಾದ ಈ ಗಂಡು-ಹೆಣ್ಣುಗಳ ಸಂಬಂಧ ಒಡೆದು ಹೋದದ್ದಕ್ಕೆ ಗಂಡಿನ ಕಡೆ ತಪ್ಪಿದ್ದರೆ ಹೆಣ್ಣಿಗೆ ತೆರ ಕಟ್ಟುವುದು, ಹೆಣ್ಣಿನ ಕಡೆ ತಪ್ಪಿದ್ದರೆ ಗಂಡಿಗೆ ಕಾಣಿಕೆ ಕೊಡಿಸುವುದು ಸಹಜ ಪ್ರಕ್ರಿಯೆಯಾಗಿತ್ತು. ನಂತರದಲ್ಲಿ ಅವರು ಮತ್ತೊಂದು ಜೀವನವನ್ನು ಸ್ವಚ್ಛಂಧವಾಗಿ ರೂಪಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆ ಜನಪದರ ಧರ್ಮವಾಗಿತ್ತು. ಈ ಹಿನ್ನೆಲೆಯಲ್ಲಿ ಜನಪದ ಸಮಾಜದಲ್ಲಿ ಗಂಡು-ಹೆಣ್ಣಿನ ವಿಘಟನೆ ಬದುಕಿನ ಹಲವು ಘಟನೆಗಳಲ್ಲಿ ಒಂದಾಗಿ ಇರುತ್ತಿತ್ತು. ಅದೇ ಘಟನೆ ಅವರ ಜೀವನ ಪೂರ ಹಿಂಸೆಯಾಗಿ, ಖಿನ್ನತೆಯಾಗಿ, ಚಿಂತೆಯಾಗಿ ಕಾಡುವ ವಿಘಟನೆಯಾಗುತ್ತಿರಲಿಲ್ಲ. ಈ ಅರ್ಥದಲ್ಲಿ ಜನಪದ ಸಮುದಾಯಗಳಲ್ಲಿ ವಿಘಟನೆ ಎಂದರೆ ಅದು ಒಂದು ತರದ ಸ್ತ್ರೀಪುರುಷರ ಸಂಬಂಧಗಳ ವಿಮುಕ್ತಿಯೂ ಆಗಿತ್ತು.

ಈ ಥರದ ಜನಪದ ಸಮುದಾಯಗಳಲ್ಲಿ ವಿಘಟಿತವಾದ ಹೆಣ್ಣಾಗಲಿ ಗಂಡಾಗಲಿ ತನ್ನ ಪೂರ್ವದ ಸಂಬಂಧಗಳನ್ನು ಚಿಂತಾಕ್ರಾಂತವಾಗಿ ನೋಡುವ ಪ್ರವೃತ್ತಿ ಇರಲಿಲ್ಲ. ಮತ್ತೆ ಗಂಡು-ಹೆಣ್ಣುಗಳು ಒಂದು ಸಹಜ ಪ್ರವೃತ್ತಿಗೆ ಬಂದು ಮತ್ತೊಮ್ಮೆ ಜೀವನವನ್ನು ಮತ್ತೊಂದು ಗಂಡು-ಹೆಣ್ಣುಗಳ ನಡುವೆ ಕಟ್ಟಿಕೊಳ್ಳುವುದು ಸಹಜವಾಗಿತ್ತು.

ಜನಪದ ಸಮಾಜದಲ್ಲಿ ಗಂಡು-ಹೆಣ್ಣುಗಳ ವಿಘಟನೆಯ ಮೂಲಧಾತುಗಳು ನಾಗರಿಕಕ ಸಮಾಜಕ್ಕಿಂತ ಭಿನ್ನವಾಗಿರುತ್ತಿದ್ದವು. ಪುರುಷ ನಿರ್ವಿರ್ಯನಾದಾಗ ಜನಪದ ಹೆಣ್ಣುಮಕ್ಕಳು ಅದನ್ನು ಸಹಜವಾಗಿ ಕುಟುಂಬದ ವ್ಯವಸ್ಥೆಗೆ ತಿಳಿಸುವ ಧೈರ್ಯ ಮಾಡುತ್ತಿದ್ದರು. ಅದನ್ನು ಮುಚ್ಚುಮರೆ ಮಾಡುವುದು ಕುಟುಂಬ ವ್ಯವಸ್ಥೆಯಲ್ಲಿ ಇರಲಿಲ್ಲ. ನಿರ್ವಿರ್ಯ ಗಂಡು-ಹೆಣ್ಣುಗಳ ಸಂಬಂಧದಲ್ಲಿ ವಿಘಟನೆಗೆ ಮುಖ್ಯ ಕಾರಣವಾಗುತ್ತಿತ್ತು.

ಗಂಡಿನ ನಿರ್ವಿರ್ಯತೆ, ಹೆಣ್ಣಿನ ಫಲಹೀನತೆಯಿಂದ ಕುಟುಂಬಗಳು ವಿಘಟಿಸುವುದು. ಆದ್ದರಿಂದ ಬುಡಕಟ್ಟು ಸಮುದಾಯಗಳಲ್ಲಿ ವಿವಾಹವೆಂಬ ವ್ಯವಸ್ಥೆಗೆ ಒಳಗಾಗುವುದಕ್ಕೆ ಮೊದಲೇ ಪರಸ್ಪರ ಗಂಡು-ಹೆಣ್ಣುಗಳು ಕೂಡಿ ನಿರ್ವಿರ್ಯತೆ ಮತ್ತು ಫಲವಂತಿಕೆಗಳನ್ನು(ಪರೀಕ್ಷಿಸಿ) ಪರಿಚಯಿಸಿಕೊಳ್ಳುತ್ತಿದ್ದರು. ಸೋಲಿಗ, ಬಡಗ ಅಥವಾ ಇತರ ಬುಡಕಟ್ಟು ಸಮುದಾಯಗಳಲ್ಲಿ ವಿವಾಹಪೂರ್ವದಲ್ಲೇ ಗಂಡು-ಹೆಣ್ಣುಗಳು ಲೈಂಗಿಕ ಕ್ರಿಯೆಗಳಲ್ಲಿ ತೊಡಗಿಕೊಂಡು ತಮ್ಮ ಜೈವಿಕ ಸಾಮರ್ಥ್ಯವನ್ನು ಅಧಿಕೃತಗೊಳಿಸಿಕೊಂಡು ನಂತರ ವಿವಾಹ ಎಂಬ ವ್ಯವಸ್ಥೆಗೆ ಬರುತ್ತಿದ್ದರು. ವಿವಾಹ ಎಂಬುದು ಎಷ್ಟು ಸಹಜವೋ ಹಾಗೇ ವಿವಾಹಪೂರ್ವ ಲೈಂಗಿಕ ಸಂಬಂಧ ಅಷ್ಟೇ ಸಹಜವಾಗಿರುತ್ತಿತ್ತು. ಅದಕ್ಕೆ ಆಯಾಯ ಬುಡಕಟ್ಟು ಸಮಾಜಗಳ ಸಾಮಾಜಿಕ ಒಪ್ಪಿಗೆಯೂ ಇತ್ತು.

ಜನಪದರಿಗೆ ಸಂತಾನೋತ್ಪತ್ತಿ ಬಹುಮುಖ್ಯವಾದ ಶಕ್ತಿಯಾಗಿದ್ದರಿಂದ ಅದರಲ್ಲಿ ಲೈಂಗಿಕ ಸಾಮರ್ಥ್ಯದ ಅನಿವಾರ್ಯತೆ ಎದ್ದು ಕಾಣುತ್ತಿತ್ತು. ಈ ಅರ್ಥದಲ್ಲಿ ಹೈದರಾಬಾದ್ ಕರ್ನಾಟಕದ ಒಟ್ಟು ಕಥೆಗಳಲ್ಲಿ ಗಂಡು-ಹೆಣ್ಣಿನ ವಿಘಟನೆಗೆ ಈ ಅಂಶವೇ ಪ್ರಧಾನವಾಗಿದೆ.

ಜನಪದ ಸಮುದಾಯಗಳು ಅಲೆಮಾರಿ ಪ್ರವೃತ್ತಿಯಿಂದ ನೆಲೆಗೊಳ್ಳುವ ಪ್ರವೃತ್ತಿ, ಆಸ್ತಿ, ಆಹಾರ ಶೇಖರಣೆ, ಹಣ ಇತ್ಯಾದಿಗಳು ಉಂಟಾದಾಗ ಜನಪದ ಗಂಡು-ಹೆಣ್ಣುಗಳ ವಿಘಟನೆಗೆ ಮೂಲಭೂತ ಸಂತಾನೋತ್ಪತ್ತಿ, ಲೈಂಗಿಕತೆಗಳೇ ಮುಖ್ಯ ಕಾರಣವಾಗದೇ ಭೋಗಪ್ರವೃತ್ತಿ, ಆಸ್ತಿ, ಅಧಿಕಾರ, ಅಂತಸ್ತುಗಳು ಸೇರಿಕೊಂಡು ಅವು ಗಂಡು-ಹೆಣ್ಣಿನ ವಿಘಟನೆಯ ಹಿಂದಿನ ಶಕ್ತಿಗಳಾಗಿ ಕೆಲಸ ಮಾಡಿವೆ. ಅಲ್ಲಿ ಲೈಂಗಿಕತೆ, ಫಲವಂತಿಕೆ ಎನ್ನುವುದು ಎರಡನೇ ಹಂತಕ್ಕೆ ಸರಿದು ಅಧಿಕಾರವಿದ್ದಲ್ಲಿ, ಆಸ್ತಿ ಇದ್ದರೂ ಅದನ್ನು ಗುಟ್ಟಾಗಿ ಸಾಮರ್ಥ್ಯವಿದ್ದವರೊಡನೆ ಪಡೆದುಕೊಂಡು ಗಂಡು-ಹೆಣ್ಣುಗಳು ಗಂಡ ಹೆಂಡತಿಯರಾಗಿ ಕೌಟುಂಬಿಕ ಆಸ್ತಿ ಅಂತಸ್ತನ್ನು ಕಾಪಾಡಿಕೊಂಡು ಹೋದದ್ದು ಇದೆ.

ಆಸ್ತಿ, ಅಂತಸ್ತು, ಅಧಿಕಾರ ಇದ್ದವರು ಮೂಲತಃ ಅದರಲ್ಲೂ ಪುರುಷರು ನಿರ್ವೀರ್ಯರಾದಾಗಲೂ ಹೆಣ್ಣನ್ನು ಆಳುವ ಅವಳನ್ನು ದಾಸಿಯಾಗಿ ಬಳಸಿಕೊಳ್ಳುವ, ಅವಳ ಸಂಪೂರ್ಣ ಸಹಜ ಕ್ರಿಯೆಗಳನ್ನು ದಮನಗೊಳಿಸುವ ಕ್ರಿಯೆಗಳು ಪ್ರಾರಂಭವಾಗಿ ಆ ಹಂತದಲ್ಲಿ ಅನೇಕ ಹೆಣ್ಣುಮಕ್ಕಳು ಗಂಡಿನ ನಿರ್ವೀರ್ಯತೆಯ ವಿರುದ್ಧ ಸಿಡಿದು ಹೊರಹೋಗುವ ಅನೇಕ ಕಥನಗಳು ಸಿಗುತ್ತವೆ. ಮತ್ತೆ ಈ ನಿರ್ವೀರ್ಯತೆಯನ್ನು ಸಹಿಸಿಕೊಂಡು ಅಸಹಾಯಕರಾಗಿ ಬದುಕಿದ ಹೆಣ್ಣು ಮಕ್ಕಳ ಕಥೆಗಳು ಇವೆ. ಇವೆರಡರಲ್ಲದೇ ನಿರ್ವೀರ್ಯ ಗಂಡಿನ ಜೊತೆ ಬದುಕಲಾಗದೇ ತನ್ನ ಸಹಜ ಲೈಂಗಿಕ ಕ್ರಿಯೆಗಾಗಿ ಮತ್ತೊಬ್ಬ ಗಂಡಿನೊಡನೆ ಸಂಬಂಧವಿಟ್ಟುಕೊಂಡ ಹೆಣ್ಣು ಮಕ್ಕಳ ಕಥೆಗಳು ಇವೆ. ಹಾಗೆ ಈ ತರಹ ಸಂಬಂಧವಿದ್ದ ಗಂಡು-ಹೆಣ್ಣುಗಳನ್ನು ಕೊಲೆ, ಹಿಂಸೆ ಇತ್ಯಾದಿಗಳ ಮೂಲಕ ಅವರನ್ನು ಸಾಯಿಸಿರುವ, ಮತ್ತೆ ಅಧಿಕಾರದ ಅಂತಸ್ತನ್ನೇ ಮೆರೆದಿರುವ ಕಥೆಗಳು ಇವೆ.

ಜನಪದ ಕಥೆಗಳಲ್ಲಿ ನೂರಾರು ಜನರ ಆಶಯಗಳು ಸೇರಿಕೊಂಡಿರುತ್ತವೆ. ಇದುವೇ ಜನಪದ ಕಥೆಗಳ ಮುಖ್ಯ ಲಕ್ಷಣ ಎಂದು ಹೇಳಬಹುದು. ನೂರಾರು, ಸಾವಿರಾರು ಜನರಿಂದ ಪೋಣಿಸಲ್ಪಟ್ಟ, ಸಂಗ್ರಹಿಸಲ್ಪಟ್ಟ ತುಣುಕುಗಳು ಸೇರಿಕೊಂಡು ಕಥೆಗಳಾಗುತ್ತವೆ. ಆಶಯಗಳು ಒಂದೇ ಇದ್ದರೂ ಕಥೆಗಳಲ್ಲಿನ ನಿರೂಪಣೆ, ಪಾತ್ರವರ್ಗಗಳಲ್ಲಿ ಭಿನ್ನತೆ ಕಂಡುಬರುತ್ತವೆ. ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳು ಕೂಡ ಇದಕ್ಕೆ ಹೊರತಾಗಿಲ್ಲ. ಅಂದರೆ ಉದ್ದೇಶ, ಫಲಿತಗಳೆಲ್ಲ ಏಕರೀತಿಯಲ್ಲಿದ್ದರೂ ನಿರೂಪಣೆ ಭಿನ್ನ ಭಿನ್ನವಾಗಿ ಕಂಡುಬರುತ್ತಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಜನಪದ ಕಥೆಗಳಲ್ಲಿ ಕಂಡುಬರುವ ವಿಘಟನೆ ಸ್ವರೂಪವನ್ನು ಗಮನಿಸಿದಾಗ ಕೆಲವೊಂದು ಕಥೆಗಳು ಅತಿಮಾನುಷ ರೀತಿಯಲ್ಲಿ ಅಂತ್ಯ ಕಾಣುತ್ತವೆ. ಹಾಗೆಯೇ ಇನ್ನಿತರ ಕಥೆಗಳು ತೀರಾ ವಾಸ್ತವತೆಯನ್ನು ಮೈವೆತ್ತಂತೆ ಕಂಡುಬರುತ್ತವೆ. 'ಇದು ಇತ್ತೀಚೆಗೆ ಘಟಿಸಿವೆಯೇನೋ?' ಎಂಬಂತೆ ಭಾಸವಾಗುತ್ತದೆ. ಈ ರೀತಿಯ ಲಕ್ಷಣಗಳಿಂದಲೇ ಜನಪದ ಕಥೆಗಳು ಇಂದಿಗೂ ಜನಮಾನಸದಲ್ಲಿ ಉಳಿದಿರುವುದು.

'ನಾಲ್ಕು ಕುತ್ತುಗಳು' ಜನಪದ ಕಥೆಯಲ್ಲಿ ರಾಜನಿಗೆ ಅನೇಕ ಮಾರಣಾಂತಿಕ ಆಪತ್ತುಗಳು ತಲೆದೋರುತ್ತವೆ. ಆದರೆ ಮಂತ್ರಿಯ ಜಾಣತನ, ಸಮಯಪ್ರಜ್ಞೆಯಿಂದ ಎಲ್ಲವೂ ಸುಸೂತ್ರವಾಗಿ ಪರಿಹಾರವಾಗುತ್ತವೆ. ರಾಜನಿಗೆ ತನ್ನ ರಾಣಿಯಿಂದಲೇ ಮರಣ ಸಂಭವಿಸುವ ಪರಿಸ್ಥಿತಿ ಉಂಟಾಗುತ್ತದೆ. ಸಣ್ಣ ವಿಷಯಕ್ಕೆ ಜಗಳವಾಡಿದ ಮಾತ್ರಕ್ಕೆ ರಾಣಿ ರಾಜನನ್ನೇ ಕೊಲ್ಲಲು ನಿರ್ಧರಿಸುತ್ತಾಳೆ. ಒಂದು ರೀತಿಯ ವಿಘಟನೆಯ ಸ್ವರೂಪವನ್ನು ಈ ಕಥೆ ಹೊಂದಿದೆ. ಎಲ್ಲ ಕಷ್ಟಗಳು ಪರಿಹಾರವಾದ ನಂತರ ಕಾರಣಳಾದ ರಾಣಿಯನ್ನು ಶಿಕ್ಷಿಸುವ ವಿಚಾರ ಕಥೆಯಲ್ಲಿಲ್ಲ. ಸಮಯಪ್ರಜ್ಞೆಯಿಂದ, ಜಾಣತನದಿಂದ ಕಷ್ಟ ಪರಿಹರಿಸಿದ ಮಂತ್ರಿಯನ್ನು ರಾಜ್ಯ ಕೊಟ್ಟು ಗೌರವಿಸುವ ರಾಜ ಎಲ್ಲವನ್ನು ಆತುರಾತುರವಾಗಿ ನಿರ್ಧರಿಸುವುದಿಲ್ಲ. ಪ್ರಸ್ತುತ ಕಥೆಯಲ್ಲಿನ ವಿಘಟನೆ ಅಲ್ಪಕಾಲದ್ದು. ಜನಪದ ಕಥೆಗಳನ್ನು ಗಮನಿಸಿದಾಗ ಪರಿಹಾರವಿಲ್ಲದ ಘಟನೆಗಳು ಜರುಗುವುದಿಲ್ಲವೇನೋ ಎಂಬಂತೆ ಭಾಸವಾಗುತ್ತದೆ. ಕಥೆಯಲ್ಲಿನ ರಾಜನ ತಾಳ್ಮೆಯನ್ನು ಪರಿಶೀಲಿಸಬಹುದು. "ಮಂತ್ರಿ ನನ್ನ ಮೊಲೆ ಹಿಡಿಯಲು ಬಂದಿದ್ದ" ಎಂದು ರಾಣಿ ದೂರು ಕೊಟ್ಟರೂ ರಾಜ ಸಾವಧಾನದಿಂದ ಪರಾಮರ್ಶಿಸುತ್ತಾನೆ. ಸಮಯ-ಸಂದರ್ಭ ಮತ್ತು ಮಂತ್ರಿಯ ಉದ್ದೇಶಗಳನ್ನೆಲ್ಲ ಗಮನಿಸಿ ರಾಜ ತನ್ನ ಜೀವವನ್ನುಳಿಸಿಕೊಳ್ಳುತ್ತಾನೆ. ಬಂದೊದಗಿದ ಕುತ್ತುಗಳಿಂದ ಪಾರಾಗುತ್ತಾನೆ.

'ಸಮೇದೊಳಗಿನ ಮಿಂಡ' ಜನಪದ ಕಥೆಯು ವಿಘಟನೆಯ ಸ್ವರೂಪವನ್ನು ಹೊಂದಿದ್ದು, ಅತಿ ಆಶೆ ಗತಿಗೇಡು ಎಂಬ ಗಾದೆಯನ್ನು ನೆನಪಿಸುತ್ತದೆ. ರಾಜ ಅತಿ ಆಶೆಯಿಂದ ಅತ್ಯಂತ ಸುಂದರಿಯಾದ ಹೆಂಡತಿಯನ್ನು ಪಡೆಯಲು ರಾಜ್ಯದ ಗರ್ಭಿಣಿಯನ್ನು ಕರೆಸುತ್ತಾನೆ. ಸುಂದರವಾದ ಹೆಣ್ಣುಮಗುವನ್ನು ಪಡೆಯಲು ಗರ್ಭಿಣಿಯರನ್ನು ಗೃಹಬಂಧನದಲ್ಲಿಟ್ಟಿರುವುದನ್ನು ಗಮನಿಸಬಹುದು. ಆ ಕಾಲದ ನಿರಂಕುಶ ರಾಜಪ್ರಭುತ್ವವನ್ನು ಈ ಜನಪದ ಕಥೆಯ ಮೂಲಕ ತಿಳಿಯಬಹುದು. ಇಲ್ಲಿ ಗಂಡು ತನ್ನ ಸಂತೋಷಕ್ಕಾಗಿ, ಸ್ವಾರ್ಥಕ್ಕಾಗಿ ಓರ್ವ ಹೆಣ್ಣನ್ನು ಏನು ಬೇಕಾದರೂ ಮಾಡಬಹುದು ಎಂದು ಅರಿತು ಜಯ ಸಾಧಿಸಿದರೂ, ಹೆಣ್ಣಿನ ಮನಸ್ಸು ಹೇಗಿರುತ್ತದೆ ಎಂಬುದನ್ನು ತಿಳಿಯುವಲ್ಲಿ ಸೋಲುತ್ತಾನೆ. ಕಥೆಯಲ್ಲಿನ ರಾಜ, ಋಷಿ ಸೋಲೊಪ್ಪಿಕ್ಕೊಂಡು ಬಿಡುತ್ತಾರೆ. ಆ ಮೂಲಕ ಗಂಡು-ಹೆಣ್ಣಿನ ಸಂಬಂಧದಲ್ಲಿ ವಿಘಟನೆಯಾಗುತ್ತದೆ. ಇಲ್ಲಿ ಗಮನಿಸಬೇಕಾದ ಮಹತ್ವದ ಅಂಶವೆಂದರೆ ರಾಜ ಮತ್ತು ಋಷಿ ತಮ್ಮ ತಪ್ಪಿನ ಅರಿವಾಗಿ ಯಾವುದೇ ರೀತಿಯ ಉದ್ರೇಕ, ಆಕ್ರೋಶಗಳಿಗೆ ಒಳಗಾಗದೇ ವಾಸ್ತವವನ್ನರಿತು ತಮ್ಮ ತಮ್ಮ ಪತ್ನಿಯರ ಪ್ರಿಯಕರರೊಂದಿಗೆ ಜೀವನ ನಡೆಸುವಂತೆ ಹೇಳಿ ವನವಾಸಕ್ಕೆ ಹೋಗುವುದು. ಹಿಂದಿನ ಕಾಲದ ರಾಜ ಆಳ್ವಿಕೆ ಸಂದರ್ಭಗಳಲ್ಲಿ ದೇವರಿಗೆ ಸಮನಾದ ಸ್ಥಾನಮಾನವನ್ನು ಹೊಂದಿರುವ ರಾಜ, ಋಷಿ ಈ ರೀತಿಯ ತಪ್ಪು ಕೆಲಸವನ್ನು ಮಾಡುವುದು ಎಷ್ಟರಮಟ್ಟಿಗೆ ಸರಿ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಜನಪದ ಕಥೆಗಳಲ್ಲಿ ತಪ್ಪಿತಸ್ಥ ಎಷ್ಟೇ ದೊಡ್ಡ ಸ್ಥಾನದಲ್ಲಿರಲಿ ಆತನಿಗೆ ಯಾವುದೇ ರೀತಿಯ ರಿಯಾಯಿತಿ ದೊರೆಯುವುದಿಲ್ಲ.

ತನ್ನ ಹೆಂಡತಿ ಪಿಂಜಾರನೊಂದಿಗೆ ಸಂಬಂಧ ಬೆಳೆಸಿರುವುದನ್ನು ಕಂಡ ಗಂಡ ಬೇಸರಿಸಿಕೊಂಡು ದೇಶಾಂತರ ಹೋಗುವ ಕಥೆಯೇ ತೋರಮುತ್ತು. ಗಂಡ-ಹೆಂಡತಿ ಸಂಸಾರದೊಳಗೆ ಪಿಂಜಾರನ ಪ್ರವೇಶ ವಾಗಿರುವುದೇ ಇಲ್ಲಿ ಗಂಡು-ಹೆಣ್ಣಿನ ವಿಘಟನೆಗೆ ಕಾರಣ. ಬೇಸರಿಸಿಕೊಂಡು ಹೋದ ಬಡವಿಯ ಮಗ

ಹೋದಲ್ಲೆಲ್ಲ ಸಾಹಸದ ಜೀವನ ಸಾಗಿಸಿ ಕೊನೆಗೆ ರಾಜನ ಮಗಳನ್ನು ಮತ್ತು ಕಳ್ಳನ ಮಗಳನ್ನು ವಿವಾಹ ವಾಗುತ್ತಾನೆ. ಇಲ್ಲಿ ವಿವಾಹಿತೆಯೊಬ್ಬಳು ಪರಪುರುಷನ ಜೊತೆ ಸಂಬಂಧವಿರಿಸಿಕೊಂಡಿರುವುದು ದೊಡ್ಡ ಅಪರಾಧವಾಗುವುದಿಲ್ಲ. ಅನೈತಿಕ (ಅನೈತಿಕವಲ್ಲ!) ಸಂಬಂಧದಿಂದ ಪ್ರೇಮದ, ಪ್ರೀತಿಯ ವಿಘಟನೆಯಾದರೂ ಅದನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ.

ಹೈದರಾಬಾದ್ ಕರ್ನಾಟಕ ಪ್ರದೇಶದ ಜನಪದ ಕಥೆಗಳಲ್ಲಿನ ಗಂಡು-ಹೆಣ್ಣಿನ ವಿಘಟನೆಗಳನ್ನು ಗಮನಿಸಿದಾಗ, ಬಹುತೇಕ ಕಥೆಗಳು ಹೆಣ್ಣಿನ ವ್ಯಾಮೋಹದಿಂದಲ್ಲಿ ವಿಘಟನೆಯಾಗಿರುವುದನ್ನು ದೃಢಪಡಿಸುತ್ತವೆ. ರಾಜ ಮತ್ತೊಬ್ಬ ಸುಂದರ ಸ್ತ್ರೀಯನ್ನು ನೋಡಿ ತನ್ನ ರಾಣಿಯನ್ನು ಕೈಬಿಡುವುದು. ಸಾಹುಕಾರ ತನ್ನ ಸುಂದರ ಪತ್ನಿ ಮನೆಯಲ್ಲಿದ್ದರೂ ಬೇರೆ ಹೆಣ್ಣಿನ ಸಹವಾಸಕ್ಕೆ ಬಿದ್ದು ಒದ್ದಾಡುವುದು. ರಾಜಕುಮಾರ ಸುಂದರಳಾದ ಸ್ತ್ರೀಯನ್ನು ಕಂಡು ಅವಳಿಗಾಗಿಯೇ ಪರಿತಪಿಸುವುದು. ರಾಜಕುಮಾರ ಅತ್ಯಂತ ಸುಂದರಿಯಾದ ಸ್ತ್ರೀಯನ್ನು ಮದುವೆಯಾಗಲು ಬಯಸುವುದು, ಅತ್ಯಂತ ಸುಂದರಳಾದ ಸ್ತ್ರೀಯೊಬ್ಬಳನ್ನು ತನ್ನ ರಾಜಕುಮಾರ ನಿಗಾಗಿ ಹುಡುಕಿದಾಗ ತನಗಿರಲಿ ಎಂದು ಬಯಸುವುದು. ಹೀಗೆ ಎಲ್ಲಾ ಘಟನೆಗಳು, ಕಥಾಹಂದರ ಸ್ತ್ರೀಯ ಸುತ್ತವೇ ಸುತ್ತುತ್ತಿರುವುದನ್ನು ಗಮನಿಸಬಹುದಾಗಿದೆ. ಈ ಪ್ರದೇಶದ ಬಹುತೇಕ ಕಥೆಗಳು ಸ್ತ್ರೀ ವ್ಯಾಮೋಹವನ್ನು(ಅತಿಯಾದ) ಸಹಜವೆಂಬಂತೆ ಕಾಣುತ್ತವೆ. ಇದು ಕಥಾ ಕಾಲದ ಸಾಮಾಜಿಕ ಸ್ಥಿತಿಗತಿಯ ರೂಪವನ್ನು ಅನಾವರಣಗೊಳಿಸುತ್ತದೆ ಎಂದು ಹೇಳಬೇಕು. ಹೈದರಾಬಾದ್ ಕರ್ನಾಟಕ ಪ್ರದೇಶದ ಇತಿಹಾಸ ವನ್ನು, ಇಲ್ಲಿನ ಜನಪದ ಕಥೆಗಳಲ್ಲಿನ ವಸ್ತುರೂಪವನ್ನು ಗಮನಿಸಿದಾಗ ಸಾಮಾಜಿಕ ಸ್ಥಿತಿಯನ್ನು ಅರಿಯಬಹುದು.

ಪ್ರಸ್ತುತ ಅಧ್ಯಾಯದಲ್ಲಿ ಈ ಮೊದಲು ಪ್ರಸ್ತಾಪಿಸಿದಂತೆ ಜನಪದ ಕಥೆಗಳಲ್ಲಿ ಪೌರಾಣಿಕ ಹಿನ್ನೆಲೆಯ, ಅತಿಮಾನುಷ ಹಿನ್ನೆಲೆಯ ಕಥಾಹಂದರಗಳನ್ನು ಗಮನಿಸಬಹುದು. ದೇವಲೋಕದ ಕುದುರೆಗಳು, ನಾಗಕನ್ಯೆ, ಗಿಳಿಯೊಳಗಿನ ನನ್ನ ಜೀವ, ಅಡವಿ ಮನುಷ್ಯ, ಮಾಟದ ಉಂಗುರ, ಗಿಡ್ಡಿ, ಮಂಚದ ಕಾಲಿನ ಗೊಂಬೆ ಗಳು, ಹನ್ನೆರಡು ಊಟದ ಎಲೆ ಹೀಗೆ ಅನೇಕ ಜನಪದ ಕಥೆಗಳಲ್ಲಿ ಅತಿಮಾನುಷ ಶಕ್ತಿಯಿಂದ ಕಥೆ ರೋಚಕತೆಯನ್ನು ಪಡೆಯುತ್ತದೆ. ಸೋತವನಿಗೆ ದೇವಲೋಕದ ನಾಗಕನ್ಯೆಯರು, ಪಾರ್ವತಿ ಪರಮೇಶ್ವರರು ಸಹಾಯ ಮಾಡುತ್ತಾರೆ. ದುಷ್ಟನನ್ನು ಅತಿಮಾನುಷ ಶಕ್ತಿಯ ಮೂಲಕ ಸಂಹರಿಸುವ, ಸೋಲಿಸುವ, ಬೇಟೆಯಾಡುವ ಘಟನೆಗಳು ಕಥೆಗಳುದ್ದಕ್ಕೂ ಸಾಗುತ್ತವೆ. ಅವುಗಳೇ ಕಥೆಯ ಜೀವ ಎಂಬಂತೆ ಕಂಡುಬರುತ್ತವೆ. ಆದರೂ ವಾಸ್ತವತೆಯನ್ನು ಮರೆಮಾಚುವುದಿಲ್ಲ ಕಥೆಗಳು.

ಬಹುತೇಕ ಜನಪದ ಕಥೆಗಳಲ್ಲಿನ ವಿಘಟನೆಗಳು ಹೆಣ್ಣಿನ ಜೀವನಕ್ಕೆ ಪೂರಕವಾಗುವಂತಿವೆ. ಅತಿಕಾಮುಕರಿಗೆ ಶಿಕ್ಷೆಯನ್ನು, ವನವಾಸವನ್ನು ಮತ್ತು ಜೀವ ತ್ಯಜಿಸುವಷ್ಟರಮಟ್ಟಿಗೆ ಕಥೆ ಮುಂದುವರಿದು ಅಂತ್ಯ ಕಾಣುತ್ತವೆ. ಇಂಥ ಕಥಾಲಕ್ಷಣಗಳುಳ್ಳ ಜನಪದ ಕಥೆಗಳಲ್ಲಿ ಲೈಂಗಿಕ ಸಂಬಂಧಗಳು ಗಂಭೀರತೆಯನ್ನು ಪಡೆಯುವುದಿಲ್ಲ. ಶುದ್ಧ-ಅಶುದ್ಧ, ಏಕಪತ್ನಿತ್ವ, ಪರಿಶುದ್ಧ ಪರಿಕಲ್ಪನೆಗಳನ್ನು ದೂರೀಕರಿಸುವುದನ್ನು ಗಮನಿಸಬಹುದು.

ಹೈದರಾಬಾದ್ ಕರ್ನಾಟಕದ ಜನಪದ ಕಥೆಗಳಲ್ಲಿನ ಗಂಡು-ಹೆಣ್ಣಿನ ವಿಘಟನೆ ಸ್ವರೂಪವನ್ನು ಗಮನಿಸಿದಾಗ ಹೆಣ್ಣಿನ ಧ್ವನಿ ಇಲ್ಲವೆಂದೇ ಹೇಳಬೇಕು. ಪುರುಷರ ಕಾಮಲಾಲಸೆಗೆ ಬಲಿಯಾಗುವ

ವಿಘಟನೆಗೆ ಗುರಿಯಾಗುವ ಹೆಣ್ಣುಮಕ್ಕಳಲ್ಲಿ ವಿರೋಧಿಸುವ, ಪ್ರತಿರೋಧವನ್ನೊಡ್ಡುವ ಲಕ್ಷಣಗಳು ಅಲ್ಲವೆಂದು ಹೇಳಬೇಕು. ಇದು ಸಮಾಜದಲ್ಲಿನ ಪುರುಷಪ್ರಧಾನತೆಯನ್ನು ಪ್ರತಿಪಲಿಸುತ್ತದೆ. ಗಂಡು ತನಗೆ ಬೇಕಾದಲ್ಲೆಲ್ಲ ತಿರುಗಾಡಿ, ಬೇಟೆಯಾಡಿ, ಸಂಪಾದಿಸಿ ಬಂದಾಗ, ಪರಸ್ತ್ರೀಯರೊಂದಿಗೆ ಅನುಭವಿಸಿ ಬಂದಾಗ ಮನೆಯೊಡತಿ ಪ್ರಶ್ನಿಸುವ ಹಾಗಿಲ್ಲ; ಆದರೆ ಮನೆಯೊಡತಿ ಬೇರೆ ಪರಪುರುಷನನ್ನು ಪ್ರೀತಿಸುವ, ಪ್ರೇಮಿಸುವ ಅವಕಾಶ ಇರುವುದಿಲ್ಲ; ಒಂದು ವೇಳೆ ಇದ್ದರೆ, ಹೋದರೆ ಗಂಡನಾದವನು ಮನೆ ಬಿಟ್ಟು ಹೋಗುವ, ವನವಾಸ ಸೇರುವ ಅಥವಾ ಮತ್ತೊಬ್ಬ ಸ್ತ್ರೀಯನ್ನು ವರಿಸುವ ಸಂದರ್ಭಗಳನ್ನು, ಘಟನೆಗಳನ್ನು ಈ ಪ್ರದೇಶದ ಜನಪದ ಕಥೆಗಳಲ್ಲಿ ಕಾಣಬಹುದು. ಆ ಮೂಲಕ ವಿಘಟನೆಗೆ ಹೆಣ್ಣನ್ನು ಆರೋಪಿಸಲಾಗುತ್ತದೆಯೇ ಹೊರತು ಗಂಡನನ್ನು ತಪ್ಪಿತಸ್ಥ ಎಂಬುದಾಗಿ ಸಮಾಜ ಒಪ್ಪುವುದಿಲ್ಲ ಎಂಬ ಸಾಮಾಜಿಕ ನಿಲುವನ್ನು ಕಥೆಗಳು ಸಾರುತ್ತವೆ.

**ಅಡಿಟಿಪ್ಪಣಿಗಳು**

೧. ರವಿ ಬೆಳಗೆರೆ (ಅನು), 'ವಿವಾಹ ಹುಟ್ಟು ಮತ್ತು ಪೂರ್ವೋತ್ತರ', ತಾಪಿ ಧರ್ಮರಾವ್ ನವಕರ್ನಾಟಕ ಪ್ರಕಾಶನ, ೨೦೧೨, ಪು. ೨೧

೨. ವೀರಣ್ಣ ಸಿ., 'ಕನ್ನಡ ಕಾವ್ಯ ಕಂಡ ಹೆಣ್ಣು', ಶಕ್ತಿ ಮುದ್ರಣ ಪ್ರಕಾಶನ, ಬೆಂಗಳೂರು, ೧೯೯೯, ಪು. ೨೦

೩. ಅದೇ ಪು. ೧೭

೪. ಅದೇ ಪು. ೧೧

೫. ಅದೇ ಪು. ೧೧

೬. ರಾಜವಾಡೆ ವಿ.ಕಾ., 'ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ', ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೭, ಪು. ೮೦–೮೧

೭. ಅದೇ ಪು. ೮೧

೮. ಅದೇ ಪು. ೮೨–೮೩

೯. ಅದೇ ಪು. ೮೪

೧೦. ಅದೇ ಪು. ೮೪

೧೧. ಕಲಬುರ್ಗಿ ಎಂ.ಎಂ., 'ಹರಿಹರನ ರಗಳೆಗಳು', 'ಇಹಃಪಗೆಯಾಂಡರ ರಗಳೆ' ಕನ್ನಡ ಮತ್ತು ಸಂಸ್ಕೃತಿ ಮಾಲೆ, ಬೆಂಗಳೂರು, ೨೦೧೧, ಪು. ೧೩

೧೨. ತಳವಾರ ಎನ್.ಎಂ. 'ನಂಜುಂಡ ಕವಿಯ ರಾಮನಾಥ ಚರಿತೆ', ಸಾಂಸ್ಕೃತಿಕ ಅಧ್ಯಯನ, ಅಭಿರುಚಿ ಪ್ರಕಾಶನ, ಮೈಸೂರು, ಪು. ೨೬

೧೩. ಸಾವಿತ್ರಮ್ಮ ದೇಜಗೌ, ಕುಸುಮ–೮, ಜಾನಪದ ಮಹಾಸಂಪುಟ– ದೇಜಗೌ ಬೆಳಕೆರೆ ಪ್ರಕಾಶನ, ಮೈಸೂರು, ೨೦೧೦, ಪು. ೬೫೪

❋ ❋ ❋

ಅಧ್ಯಾಯ ಏಳು

# ಸಮಾರೋಪ

ಅನಾದಿಕಾಲದಿಂದಲೂ ಜಾನಪದರು ಹೊರ ಜಗತ್ತಿನೊಂದಿಗೆ ಒಂದಲ್ಲಾ ಒಂದು ಬಗೆಯ ಸಂಬಂಧ ಹೊಂದಿದವರಾಗಿದ್ದಾರೆ. ಈ ಮೂಲಕ ಸಹನೆ, ಗುಣ, ನಡತೆ, ಎಲ್ಲವನ್ನು ಸಮಾಜಕ್ಕೆ ತಿಳಿಸುವುದೇ ಜನಪದ ಕಥೆಗಾರರ ಆಶಯವಾಗಿದೆ. ಪ್ರಾಚೀನ ಭಾರತೀಯ ಸಂಸ್ಕೃತಿಯಲ್ಲಿ ಪುರಾಣ ಪುರುಷರು, ರಾಜಮಹಾರಾಜರು, ನೂರಾರು ಹೆಂಡತಿಯರು ಹೊಂದಿದ್ದರು ಎಂಬುದರ ಬಗ್ಗೆ ದಾಖಲೆಗಳಿವೆ. ಧರ್ಮಪತ್ನಿ, ಉಪಪತ್ನಿ, ಬಹುಪತ್ನಿ ಇಂತಹ ಮಾತುಗಳು ಅನೇಕ ಜನಪದ ಕಥೆಗಳಲ್ಲಿ ಇತಿಹಾಸವಾಗಿ ಮೂಡಿಬಂದಿವೆ.

ಪುರುಷರು ಘೋಷಿತ ಮತ್ತು ಅಘೋಷಿತ ನೆಲೆಯಲ್ಲಿ ಹಲವಾರು ಹೆಂಡತಿಯರನ್ನು ಹೊಂದಬಹುದಾಗಿತ್ತು. ಇವರು ಬೇಟೆಗೋ ಅಥವಾ ವ್ಯಾಪಾರಕ್ಕೋ ಇನ್ಯಾವುದೋ ಕೆಲಸದ ಮೇಲೆ ಹೊರಗೆ ಹೋಗಿದ್ದಂತಹ ಸಂದರ್ಭದಲ್ಲಿ ಹೆಂಡತಿಯರು ಮತ್ತು ವೇಶ್ಯೆಯರ ಸಹವಾಸ ಹೊಂದಿದ್ದಾರೆ. ಸಮಾಜದಲ್ಲಿ ಪುರುಷರಿಗೆ ಪ್ರತಿಷ್ಠೆಯ ಪ್ರತೀಕವಾಗಿತ್ತು. ದೇವರು ಧರ್ಮದ ಹೆಸರಿನಲ್ಲಿ ಮಾನವ ಸಮಾಜ ವೇಶ್ಯೆಯರನ್ನು ಬೆಂಬಲಿಸುತ್ತಾ ಪುರುಷ ಪ್ರಧಾನ ಸಂಸ್ಕೃತಿಯಿಂದಾಗಿ ವೇಶ್ಯೆಯರು ಕೂಡ ಉತ್ತಮ ಬದುಕನ್ನು ಪಡೆದುಕೊಂಡಿದ್ದರು. ಸಮಾಜದಲ್ಲಿ ಪುರುಷರು ದಾರಿ ತಪ್ಪಿಬಂದರೂ ತಮ್ಮ ಗಂಡಂದಿರ ಸಣ್ಣ ನಡವಳಿಕೆಗಳು ಸಮಾಜದಲ್ಲಿ ಬಹಿರಂಗ ಪಡಿಸಬಾರದೆಂದು ತಾನೊಬ್ಬಳೆ ಸಂಕಟ, ನೋವು ಅನುಭವಿಸುವ ಹಾಗೂ ಪ್ರತಿಭಟಿಸದೇ ಇರುವ ಸಂದರ್ಭಗಳು ಜನಪದ ಕಥೆಗಳಲ್ಲಿ ಕಂಡುಬರುತ್ತವೆ. ಕೆಲವೊಮ್ಮೆ ತಮ್ಮ ಜೀವನದ ಆಡಿಪಾಯ ಕಿತ್ತು ಹೊಗಬಹುದು ಎನ್ನುವಂತಹ ಸಂದರ್ಭದಲ್ಲಿ ಶಾಂತವಾದ ಕೌಟುಂಬಿಕ ವಾತಾವರಣ ಹದಗೆಡುತ್ತದೆ ಎಂದು ತಿಳಿದು ಬಂದಾಗ ಮಹಿಳೆಯರು ಗಂಡಸರ ಅವ್ಯವಹಾರಕ್ಕೆ ಪ್ರಬಲವಾಗಿ ಪ್ರತಿಭಟಿಸಿದ್ದಾರೆ. ತನ್ನ ಕೈಹಿಡಿದ ಪತಿಯು ತನ್ನನ್ನು ವಂಚಿಸಿ ಪರಸ್ತ್ರೀಯ ಸಂಗ ಮಾಡುತ್ತಾನೆ

ಎಂಬುದನ್ನು ತಿಳಿದು, ಸ್ತ್ರೀಯರು ಹಲವಾರು ರೀತಿಯ ವೇಷಗಳನ್ನು ಹಾಕಿಕೊಂಡು ತಮ್ಮ ಪತಿಯರನ್ನು ಪತ್ತೆ ಮಾಡುತ್ತಾರೆ. ಜನಪದ ಕಥೆಗಳಲ್ಲಿ ಬರುವ ರಾಜ, ಸುಂದರಿಯಾದ ರಾಕ್ಷಸಿ ಹೆಣ್ಣಿನ ಹಿಂದೆ ಬೀಳುತ್ತಾನೆ. ಅವಳ ನಿಜರೂಪ ತಿಳಿಯದೆ ಅವಳೊಡನೆ ಬರುತ್ತಿರುವ ಸಮಯದಲ್ಲಿ ಕೆಲವು ಷರತ್ತುಗಳನ್ನು ಹಾಕಿ, ಆಕೆಯ ಷರತ್ತುಗಳನ್ನು ಪೂರ್ಣಮಾಡಿ ತೋರಿಸಿದಾಗ ರಾಜನಿಗೆ ತನ್ನ ಮೊದಲ ಹೆಂಡತಿಯರಲ್ಲಿನ ಒಬ್ಬನೆ ಒಬ್ಬ ಮಗನ ಮೂಲಕ ರಾಕ್ಷಸಿಯರ ನಿಜರೂಪ ಬಯಲಿಗೆ ಬೀಳುವುದನ್ನು ನೋಡಬಹುದು.

ಪ್ರಸ್ತುತ ಸಮಾಜದಲ್ಲಿನ ಮಾನವ ಸ್ಥಿತಿಗತಿಯನ್ನು ಕುರಿತಂತೆ ಅಧ್ಯಯನದಲ್ಲಿ ಬಂಧುತ್ವದ ಆಧಾರದ ಮೇಲೆ ರೂಪುಗೊಳ್ಳುವ ಸಂಬಂಧದ ಪಾತ್ರ ಮಹತ್ವದ್ದು ಮತ್ತು ಪ್ರಪಂಚದ ಎಲ್ಲಾ ಸಮುದಾಯಗಳಲ್ಲೂ ಜನ ಬೇರೆ ಬೇರೆ ರೀತಿಯ ಸಂಬಂಧಗಳಿಗೆ ಬೆಸೆದುಕೊಂಡಿರುವುದು ಸಾಮಾನ್ಯ ಸಂಗತಿ. ಇವುಗಳಲ್ಲಿ ಈ ಮೊದಲೇ ತಿಳಿಸಿದಂತೆ ರಕ್ತಸಂಬಂಧ, ಪತಿ-ಪತ್ನಿಯರ ಸಂಬಂಧ, ವೈವಾಹಿಕ ಸಂಬಂಧ, ತಂದೆ ಮಕ್ಕಳ ಸಂಬಂಧ, ಬಾಂಧವ್ಯದ ಸಂಬಂಧ ಹಾಗೂ ಕರುಳಬಳ್ಳಿಯ ಸಂಬಂಧ ಮುಂತಾದವುಗಳನ್ನು ಜನಪದರಲ್ಲಿ ಗುರುತಿಸಲು ಸಾಧ್ಯವಿದೆ. ನಾಗರೀಕ ಸಮಾಜದ ಪ್ರಭಾವದಿಂದ ಪ್ರಸ್ತುತ ದಿನಗಳಲ್ಲಿ ಹೆಣ್ಣು ಗಂಡಿನ ಸಂಬಂಧಗಳು ನಶಿಸುತ್ತಿದೆ. ಜನಪದ ಸಮಾಜವು ನಾಗರಿಕ ಸಮಾಜದ ಪ್ರಭಾವದಿಂದ ತನ್ನ ಸಂಬಂಧಗಳನ್ನು ಜಟಿಲಗೊಳಿಸಿಕೊಳ್ಳುತ್ತದೆ. ಆದ್ದರಿಂದ ಜನಪದ ಕಥೆಗಳಲ್ಲಿ ಕಂಡುಬರುವ ಹೆಣ್ಣು-ಗಂಡಿನ ಅಧ್ಯಯನ ತುಂಬಾ ಅವಶ್ಯಕ.

**ಅಧ್ಯಯನದ ಫಲಿತಗಳು**

೧. ಆಡಳಿತಗಾರರಾದ ರಾಜ, ಮಂತ್ರಿ ಇನ್ನಿತರರು ಒಂದಕ್ಕಿಂತ ಹೆಚ್ಚು ಹೆಣ್ಣುಮಕ್ಕಳನ್ನು, ಸುಂದರಿಯರಾದ ವಿವಾಹಿತೆಯರನ್ನು ಮದುವೆಯಾಗಬಹುದಾಗಿತ್ತು. ಈ ರೀತಿಯ ಬಹುಪತ್ನಿತ್ವ ಪದ್ಧತಿ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿ ಬಹಳ ಹಿಂದಿನ ಕಾಲದಿಂದಲೂ ಪ್ರಚಲಿತದಲ್ಲಿತ್ತು ಎಂಬುದನ್ನು ಜನಪದ ಕಥೆಗಳು ಹೇಳುತ್ತವೆ.

೨. ಹೈದರಾಬಾದ್-ಕರ್ನಾಟಕದ ಜನಪದ ಕಥಾ ಸಾಹಿತ್ಯಗಳಲ್ಲಿ ಹೆಣ್ಣಿಗೆ ಹೇಳಿಕೊಳ್ಳುವಂಥ ವ್ಯಕ್ತಿ ಸ್ವಾತಂತ್ರ್ಯವಿರಲಿಲ್ಲ. ವಿವಾಹಿತ ಸುಂದರಿಯರಿಗೆ ಪರಪುರುಷರು (ರಾಜ, ಮಂತ್ರಿ ಇತರೆ) ಮತ್ತೊಮ್ಮೆ ವಿವಾಹವಾಗಲು ಪೀಡಿಸಿದಾಗ ವಿರೋಧಿಸುವ ಅವಕಾಶವಿರಲಿಲ್ಲ ಎಂಬುದನ್ನು ಜನಪದ ಕಥೆಗಳು ತಿಳಿಸುತ್ತವೆ.

೩. ಗಾಂಧರ್ವ ವಿವಾಹ ಪದ್ಧತಿಗಳಿಗೆ ಸಮಾಜದಲ್ಲಿ ಮನ್ನಣೆಯಿತ್ತು ಎಂಬುದನ್ನು ಜನಪದ ಕಥೆಗಳು ತಿಳಿಸುತ್ತವೆ. ಹಿಂದಿನ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿ ಗಾಂಧರ್ವ ವಿವಾಹ ಸಾಮಾನ್ಯವಾಗಿತ್ತು ಎಂಬುದನ್ನು ಜನಪದ ಕಥೆಗಳ ಮೂಲಕ ತಿಳಿಯಬಹುದಾಗಿದೆ.

೪. ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಹಿಂದಿನ ಕಾಲದಿಂದಲೂ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿತ್ತು ಎಂಬುದನ್ನು ಜನಪದ ಕಥೆಗಳ ಹಿನ್ನೆಲೆಯಲ್ಲಿ ತಿಳಿಯಬಹುದು.

೫. ಮುಕ್ತ ಲೈಂಗಿಕತೆಯನ್ನು ಅಂದಿನ ಸಮಾಜದಲ್ಲಿ ಇತ್ತು ಎಂಬುದನ್ನು ಜನಪದ ಕಥೆಗಳ ಆಶಯದಿಂದ ತಿಳಿಯಬಹುದು. ಪರಪುರುಷನೊಂದಿಗಿನ ಲೈಂಗಿಕ ಸಂಬಂಧ ಗಂಭೀರವಾದ ಅಪರಾಧವಾಗಿರಲಿಲ್ಲ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿ.

೬. ಹೈದರಾಬಾದ್-ಕರ್ನಾಟಕದ ಜನಪದ ಕಥೆಗಳಲ್ಲಿ ಪ್ರತಿಯೊಂದು ಘಟನೆಗಳ ಹಿಂದೆ ಕಾರ್ಯಕಾರಣ ಸಂಬಂಧಗಳಿರುವುದನ್ನು ಗಮನಿಸಲಾಗಿದೆ. ಉದಾಹರಣೆಗೆ 'ನಾಲ್ಕು ಕುತ್ತುಗಳು' ಕಥೆಯಲ್ಲಿ ಮಂತ್ರಿ ರಾಣಿಯನ್ನು ಮುಟ್ಟಲು/ಮೊಲೆ ಹಿಡಿಯಲು ಸಕಾರಣವಿತ್ತು. 'ಅಡವಿ ಮನುಷ್ಯ' ಕಥೆಯಲ್ಲಿ ಆರು ಮಂದಿ ರಾಣಿಯರ ಮಕ್ಕಳನ್ನು ತಿಂದರೂ, ಏಳನೆ ರಾಣಿಯ ಮಗುವನ್ನು ಬಚ್ಚಿಟ್ಟುಕೊಂಡು ಸಾಕಲು ಕಾರ್ಯಕಾರಣ ಸಂಬಂಧಗಳಿರುವುದನ್ನು ಪ್ರಸ್ತುತ ಅಧ್ಯಯನ ತಿಳಿಸುತ್ತದೆ.

೭. ನಿರಂಕುಶ ಆಡಳಿತವಿದ್ದ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿ ಮಾನವೀಯ ಗುಣಗಳಿಗೆ ಕೊರತೆಯಿರಲಿಲ್ಲ ಎಂಬುದನ್ನು ಜನಪದ ಕಥೆಗಳು ನಿರೂಪಿಸಿವೆ. ರಾಜ ತನ್ನ ರಾಜಕುಮಾರನನ್ನು ಸಾಯಿಸಲು ಸೈನಿಕರಿಗೆ ಹೇಳಿದಾಗ ಸೈನಿಕರು ಸಾಯಿಸದೇ ಬೇರೆ ಪ್ರಾಣಿಯ ರಕ್ತವನ್ನು ತಂದು ಕೊಂದಿದ್ದೇವೆ ಎಂದು ಹೇಳುವುದು, ರಾಣಿಯರನ್ನು ಕೊಂದು ಬರಲು ಹೇಳಿದಾಗ ಏಳು ಮಂದಿ ರಾಣಿಯರನ್ನು ಕಾಡಿನಲ್ಲಿ ಬಿಟ್ಟು ಬರುವುದು ಹೀಗೆ ಸೈನಿಕರು, ಪ್ರಜೆಗಳ ಮಾನವೀಯ ಗುಣಗಳು ಕಥೆಯ ಮೂಲಕ ಅನಾವರಣಗೊಳ್ಳುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗಮನಿಸಲಾಗಿದೆ.

೮. ಜನಪದ ಕಥೆಗಳಲ್ಲಿ ಗಂಡು-ಹೆಣ್ಣಿನ ವಿಘಟನೆಗೆ ಬಹುತೇಕವಾಗಿ ಪುರುಷರ ಕಾಮಲಾಲಸೆ ಕಾರಣವಾಗಿರುತ್ತದೆ. ಈ ಸ್ವಭಾವ ಪುರುಷರನ್ನು ಹೋಲಿಸಿದರೆ ಸ್ತ್ರೀಯರಲ್ಲಿ ಅತ್ಯಂತ ಕಡಿಮೆ ಪ್ರಮಾಣದ್ದಾಗಿದೆ.

೯. ಹೈದರಾಬಾದ್-ಕರ್ನಾಟಕ ಪ್ರದೇಶದ ಜನಪದ ಕತೆಗಳಲ್ಲಿ ಪ್ರೇಮದ ಸ್ವರೂಪವನ್ನು ಗಮನಿಸಿದಾಗ ಹೆಣ್ಣು ಮೊದಲ ಆಕರ್ಷಣೆ, ಎರಡನೆಯದಾಗಿ ಕಾಮ ಮತ್ತು ಮೂರನೆಯದಾಗಿ ಷರತ್ತುಗಳು ಕಾಣಿಸಿಕೊಳ್ಳುತ್ತವೆ.

೧೦. ಬಹುಕಾಲ ಪರಕೀಯರ ಆಳ್ವಿಕೆಗೆ ಒಳಪಟ್ಟಿದ್ದ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿ ಪರಕೀಯರಿಂದ ಬಂದಂಥ ಇಸ್ಲಾಂ ಧರ್ಮ ಬಹುಪತ್ನಿತ್ವ ಮತ್ತು ಮುಕ್ತ ಲೈಂಗಿಕತೆ ಇತ್ಯಾದಿಗಳು ಮುಖ್ಯವಾಹಿನಿಯಲ್ಲಿ ವಿಜೃಂಬಿಸಿರುವುದನ್ನು ಜನಪದ ಕಥೆಗಳು ನಿರೂಪಿಸಿವೆ.

೧೧. ಹೈದರಾಬಾದ ಕರ್ನಾಟಕ ಅಪಾರವಾದ ಮೌಖಿಕರ ಸಾಹಿತ್ಯವನ್ನು ಒಳಗೊಂಡಿದೆ. ಅದರಲ್ಲಿ ಜನಪದ ಮೌಖಿಕ ಕಥೆಗಳನ್ನು ಕೇಂದ್ರವಾಗಿಸಿಕೊಂಡು ಗಂಡು ಹೆಣ್ಣುಗಳ ಅದರಲ್ಲೂ ಮುಖ್ಯವಾಗಿ ವಿವಾಹ ಮತ್ತು ವಿವಾಹ ಪೂರ್ವದ ವಿವಾಹೇತರ ಸಂಬಂಧದ ಸ್ವರೂಪಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧೨. ಯಾವುದೇ ಪ್ರದೇಶದ ಭೌಗೋಳಿಕ ಒತ್ತಡಗಳು ಮತ್ತು ರಾಜಕೀಯ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ಶೈಕ್ಷಣಿಕ ಸಂಗತಿಗಳು ಆಯಾ ಭಾಗದ ಮನುಷ್ಯ ಪ್ರವೃತ್ತಿಯ ಮೇಲೆ ಪ್ರಭಾವ ಬೀರುವುದರಿಂದ ಹೈದರಾಬಾದ ಕರ್ನಾಟಕ ಭೌಗೋಳಿಕ ಸಾಂಸ್ಕೃತಿಕ ಅಧ್ಯಯನವನ್ನು ಮಾಡಲಾಗಿದೆ.

೧೩. ಹೈದರಾಬಾದ ಕರ್ನಾಟಕ ಪ್ರದೇಶವು ಪಂಚ ನದಿಗಳ ಪ್ರದೇಶವಾಗಿದ್ದು ಅಲ್ಲಿಯ ಪ್ರಾಕೃತಿಕ ಸಂಪತ್ತನ್ನು ಪಡೆಯಲು ಸಾಮ್ರಾಟರು ನಿರಂತರ ಕಲಹವನ್ನು ನಿರ್ಮಿಸಿಕೊಂಡಿದ್ದರು. ಈ ನಿರಂತರ ಯುದ್ಧ, ದಂಗೆ, ಕಲಹಗಳು ಜನಸಮುದಾಯದ ಮೇಲೆ ಪರಿಣಾಮ ಬೀರಿವೆ. ಇವು ಗಂಡು ಹೆಣ್ಣುಗಳ ಸಂಬಂಧದ ಸ್ವರೂಪದಲ್ಲೂ ಪ್ರಭಾವಿಸಿರುವುದರಿಂದ ಈ ಭಾಗದ ಗಂಡು ಹೆಣ್ಣುಗಳ ಸಂಬಂಧದ ಸ್ವರೂಪದಲ್ಲಿ ಒಂದು ಸಂಘರ್ಷಾತ್ಮಕವಾದ ನೆಲೆ ಎದ್ದು ಕಾಣುತ್ತದೆ. ಅಂದರೆ ಗಂಡು ಹೆಣ್ಣುಗಳ ಸಂಬಂಧ ಒಂದು ಅಪ್ಯಾಯಮಾನವಾದ ಕೌಟುಂಬಿಕ ಸಮೃದ್ಧಿಗೆ ಪೂರಕವಾದ ಸಂಬಂಧಗಳಾಗಿರದೆ, ಆತಂಕಾತ್ಮಕ ಸಂಬಂಧಗಳಾಗಿ ರೂಪುಗೊಂಡಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಜಾನಪದ ಕಥೆಗಳ ಮೂಲಕ ಗಮನಿಸಲಾಗಿದೆ. ಈ ಆತಂಕಾತ್ಮಕ ಸಂಬಂಧಗಳಿಗೆ ಮುಖ್ಯ ಧಾತುಗಳಾಗಿ ಅನೈತಿಕ ಸಂಬಂಧಗಳು ಕೌಟುಂಬಿಕ ಎಲ್ಲೆಯನ್ನು ದಾಟಿ ನಿಲ್ಲುವ ಗಂಡು ಹೆಣ್ಣಿನ ಪ್ರವೃತ್ತಿಗಳು ಮತ್ತು ಅವುಗಳ ತೊಂದರೆಗಳನ್ನು ಮೀರುವ ಮತ್ತು ಸರಿಪಡಿಸುವ ಸಂಗತಿಗಳು ಕಂಡುಬರುತ್ತವೆ.

೧೪. ಅಲ್ಲಲ್ಲಿ ಕೆಲವು ಮಾನವೀಯ ಪ್ರೇಮ ಸಂಬಂಧಗಳು ಸಾಧ್ಯ ಎಂದು ತಿಳಿಸುವ ಆಂಶಿಕವಾದ ಕೆಲವು ಕಥೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕಥೆ ವ್ಯವಸ್ಥೆಯ ಶ್ರೀಮಂತ ವ್ಯವಸ್ಥೆ ಕೌಟುಂಬಿಕ ಮೂಲಗಳು, ಅಧಿಕಾರ ಇವುಗಳನ್ನೆಲ್ಲಾ ಮೀರಿ ಮಾನವೀಕರಣಗೊಂಡು ಪ್ರೇಮಿಗಳಾಗಿ ಜೀವನವನ್ನು ಕಟ್ಟಿಕೊಂಡು ಸಾಗಿರುವ ಕಥೆಗಳನ್ನು ವಿವರಿಸಲಾಗಿದೆ.

೧೫. ಆಚರಣೆಗಳ ಮೂಲಕ ಅದರಲ್ಲೂ ಮುಖ್ಯವಾಗಿ ವಿವಾಹಪೂರ್ವ, ವಿವಾಹಿತ, ವಿವಾಹೇತರ ಆಚರಣೆಗಳು ಗಂಡು–ಹೆಣ್ಣುಗಳ ಸಂಬಂಧಕ್ಕೆ ಹೇಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತವೆ ಎಂಬುದನ್ನು ಆಯಾ ಆಚರಣೆಗಳ ಹಿನ್ನೆಲೆಯಲ್ಲಿ ಗಂಡು–ಹೆಣ್ಣಿನ ಸಂಬಂಧವನ್ನು ವಿಶ್ಲೇಷಣೆ ಮಾಡಲಾಗಿದೆ. ಆಚರಣೆಗಳಿಗೆ ಒಂದು ದೈವಿಕತೆಯ ಅರ್ಥವಿರುವುದರಿಂದ ಮತ್ತು ಅದು ಮನುಷ್ಯನ ನಂಬಿಕೆಗೆ ಸಂಬಂಧಪಟ್ಟಿದ್ದರಿಂದ ಹೇಗೆ ದೈವಿಕತೆ ಮತ್ತು ನಂಬಿಕೆಗಳು ಗಂಡು–ಹೆಣ್ಣುಗಳ ಸಂಬಂಧವನ್ನು ಊರ್ಜಿತಗೊಳಿಸುವಲ್ಲಿ ಪ್ರಧಾನ ಪಾತ್ರವಹಿಸುತ್ತವೆ ಎಂಬುದನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

೧೬. ಇಲ್ಲಿ ರಾಜನು ಹಲವು ಮಹಿಳೆಯರನ್ನು ಬಯಸುವುದು, ತೃಪ್ತಿ ಹೊಂದದ ಅವಳ ಕಾಮದಾಹವನ್ನು ಸೂಚಿಸುತ್ತದೆ. ಪುರುಷರ ಹಲವು ಸ್ತ್ರೀಯರ ಜೊತೆ ವೈವಾಹಿಕ ಸಂಬಂಧ ಬಯಸಿ ಬೆಳೆಸಿ ವಿಘಟನೆ ಹೊಂದುವುದು ಸರ್ವಸಾಮಾನ್ಯವಾದರೂ ಸ್ತ್ರೀಯರಲ್ಲೂ ಇಂತದ್ದು ತುಂಬಾ ವಿರಳ, ಮಹಾಭಾರತದ ದ್ರೌಪದಿ ಐದು ಜನರ ಜೊತೆ ಬಾಳುತ್ತಾಳೆ. ಆದರೆ ತೋರುಮುತ್ತು, ಎಂಟು ಊಟದ ಎಲೆಗಳು,

ಸಮೇದೊಳಗಿನ ಮಿಂಡ ಕಥೆಗಳಲ್ಲಿ ಎರಡೆರಡು ಗಂಡಂದಿರ ಜೊತೆಗೆ ಸಂಬಂಧ ಬೆಳೆಸಿ ಮೊದಲಿನವನಿಗೆ ವಿದಾಯ ಹೇಳಿ ಮಿಂಡನೊಂದಿಗೆ ಸುಖವಾಗಿ ಸಂಸಾರ ಮಾಡಿಕೊಂಡು ಇರುವುದನ್ನು ನೋಡಬಹುದು. ಇದು ಆ ಕಾಲದಲ್ಲಿ ಬಳಕೆಯಲ್ಲಿದ್ದ ಬಹುಪತ್ನಿತ್ವದ ಕಡೆ ಬೆಳಕು ಚೆಲ್ಲುತ್ತದೆ. ಇವರುಗಳಿಂದ ವಿಘಟನೆಗೊಳಗಾದ ಎಲ್ಲರೂ ವೈರಾಗ್ಯದ ಕಡೆ ಮುಖ ಮಾಡುತ್ತಾರೆ.

೧೭. ಒಂದು ಸಂಬಂಧ ಇನ್ನೊಂದು ಸಂಬಂಧವನ್ನು ಕೊನೆಗೊಳಿಸುತ್ತದೆ. ಆದರೆ ಪ್ರಭುತ್ವಕ್ಕೆ ಇಂತಹ ಪ್ರತಿಭಟನೆಗಳು ಯಾವ ಪರಿಣಾಮವನ್ನು ಮಾಡುವುದಿಲ್ಲ. ಒಂದರ ಅಂತ್ಯ ಮತ್ತೊಂದರ ಆರಂಭವಾಗಿಬಿಡುವುದೇ ಇಲ್ಲಿಯ ವಿಪರ್ಯಾಸವಾಗಿದೆ.

೧೮. ವಿವಾಹದ ಮುಖ್ಯೋದ್ದೇಶಗಳಲ್ಲಿ ಸಂತಾನೋತ್ಪತ್ತಿಯು ಪ್ರಮುಖ ಅಂಶ. ಗಂಡು-ಹೆಣ್ಣುಗಳಲ್ಲಿ ಮಾಡಿದ ಪ್ರೀತಿಯ ಮಕ್ಕಳಾದ ನಂತರ ಮೊದಲ ಹಾಗೆಯೇ ಇರಲು ಸಾಧ್ಯವಿಲ್ಲ. ಮಕ್ಕಳಲ್ಲಿ ಹಂಚಿ ಹೋಗಬಹುದು. ಮಕ್ಕಳೇ ಇಲ್ಲದಿದ್ದರೆ ಪ್ರೀತಿ ಹಂಚಿಕೆಯ ಪ್ರಶ್ನೆಯೇ ಉದ್ಭವಿಸದು. ಪ್ರೀತಿ ಪರೀಕ್ಷೆಯ ಉದ್ದೇಶದಿಂದಲೇ ಹೆತ್ತ ಮಕ್ಕಳನ್ನು ಕೊಂದು ತಿನ್ನುವುದು ಕಂಡುಬರುತ್ತದೆ. ಹೆತ್ತ ಮಕ್ಕಳಲ್ಲಿ ಸಹಜವಾಗಿ ತಂದೆಗಿಂತಲೂ ತಾಯಿಗೇ ಪ್ರೀತಿ ಮಮತೆ ಹೆಚ್ಚು, ಆದರೆ ಮಕ್ಕಳನ್ನು ಹೆತ್ತು ಸಂಸಾರ ಮಾಡಿಕೊಂಡು ಇರಲು ರಾಜ ಸ್ವಂತ ತನ್ನ ಹೆಂಡಂದಿರ ಪ್ರಾಣವನ್ನೆ ತೆಗೆಯಲು ಸೈನಿಕರಿಗೆ ಆಜ್ಞೆ ಮಾಡುವುದು.

೧೯. ಗಂಡು ಹೆಣ್ಣು ಇವುಗಳ ವ್ಯಕ್ತಿತ್ವದ ಬೇರುಗಳನ್ನೆ ಅಲ್ಲಾಡಿಸುವ ಕಾಮ ಪ್ರವೃತ್ತಿ ಅನೇಕ ಕುಟುಂಬ ಗಳ ಸ್ವಾಸ್ಥ್ಯಕ್ಕೆ ಕೊಳ್ಳಿಯಿಟ್ಟಿವೆ. ಹೆಣ್ಣೋ, ಗಂಡೋ ಯಾವುದು ಅದಕ್ಕೆ ಸೆರೆ ಸಿಕ್ಕಿತೋ ಅದು ನಾಶವಾಗುತ್ತದೆ. ಸಾಮಾಜಿಕ ಜೀವನದ ಸ್ವೀಕೃತ ವ್ಯವಸ್ಥೆ ಅಲ್ಲೋಲ ಕಲ್ಲೋಲವಾಗುತ್ತದೆ. ವಿವಾಹಬಾಹೀರ ಲೈಂಗಿಕ ಸ್ವೇಚ್ಛೆ ಮಾರಕ ಎಂದು ಮನೋವಿಜ್ಞಾನ, ಸಮಾಜಶಾಸ್ತ್ರಜ್ಞರು ಅನೇಕ ಸಂಶೋಧನೆಗಳನ್ನು ಮಾಡಿ ನೀತಿ ಸೂತ್ರಗಳನ್ನು ರೂಪಿಸಿದರೂ ಮಾನವ ಸ್ವಭಾವದ ಸಂಕೀರ್ಣತೆ ಅರ್ಥಕ್ಕೆ ವಿಶ್ಲೇಷಣೆಗೆ ನಿಲುಕದಂತೆ ರೂಪುಗೊಳ್ಳುತ್ತಾ ಬಂದಿರುವುದನ್ನು ಕಂಡುಕೊಳ್ಳಬಹುದು.

೨೦. ಪಾತಿವ್ರತ್ಯವೆಂಬ ಮೌಲ್ಯವನ್ನು ಹೆಣ್ಣಿನ ಮೇಲೆ ಹೇರಿ ಅವಳನ್ನು ಪುರುಷ ಬಂಧಿಯನ್ನಾಗಿಸುವ ಹುನ್ನಾರವನ್ನು ಕಥೆಗಳಲ್ಲಿ ಕಾಣಬಹುದು. ಪಾತಿವ್ರತ್ಯ, ಶೀಲ ಮೊದಲಾದವು ಹೆಣ್ಣಿನ ಮೇಲೆ ನಿರ್ಬಂಧ ಹೇರಲು ಸೃಷ್ಟಿಯಾದ ಪುರುಷ ನಿರ್ವಿರತ ಕಲ್ಪನೆಗಳು, ಇವು ಹೆಣ್ಣಿಗೆ ನೇತ್ಯಾತ್ಮಕವಾಗಿಯೂ ಗಂಡಿಗೆ ಇತ್ಯಾತ್ಮಕವಾಗಿಯೂ ಇವೆ. ಏಳು ಜನ ಒಂಭತ್ತು ಜನ ಹೆಂಡತಿಯರಿದ್ದರು ಇಲ್ಲಿಯ ರಾಜನಿಗೆ ಮೇಲೊಬ್ಬ ಸುಂದರಿಯು ಬೇಕೆನಿಸುತ್ತದೆ.

೨೧. ಹೆಂಡತಿ ಗಂಡನಿಗೆ ನಿಷ್ಠಳಾಗಿರಬೇಕೆಂಬ ಕೌಟುಂಬಿಕ ಚೌಕಟ್ಟನ್ನು ಮೀರಿದ ಕಾರಣದಿಂದ ಇಲ್ಲಿ ಕುಟುಂಬ ವಿಘಟಿತವಾಗುತ್ತದೆ. ಗಂಡಿನ ಸ್ವೇಚ್ಛಾಚಾರವಾಗಿರಬಹುದು. ಅಥವಾ ಹೆಣ್ಣಿನ ಸ್ವೇಚ್ಛಾಚಾರ ವಾಗಿರಬಹುದು. ಈ ಎರಡು ಕಾರಣಗಳಿಂದಲೂ ಕುಟುಂಬ ವಿಘಟಿತಗೊಳ್ಳುತ್ತದೆ. ಗಂಡು ಹೆಣ್ಣಿನ

ಸಂಬಂಧ ಒಂದು ರೀತಿಯ ಒಳ ಒಪ್ಪಂದವಿದ್ದಂತೆ, ಈ ಒಪ್ಪಂದಕ್ಕೆ ಇಬ್ಬರ ಒಪ್ಪಿಗೆಯೂ ಬೇಕು ಇಲ್ಲದಿದ್ದರೆ ಎರಡು ವಿರುದ್ಧ ದಿಕ್ಕುಗಳಾಗಿ ಇಬ್ಬರ ಮಧ್ಯೆ ದೊಡ್ಡ ಕಂದಕ ನಿರ್ಮಾಣವಾಗಿ ಬಿಡುತ್ತದೆ.

೨೨. ಪ್ರಸ್ತುತ ಕಥೆಗಳಲ್ಲಿ ವಿಘಟನೆ ಎಂಬುದು ನಾಗರೀಕ ಸಮಾಜದಲ್ಲಿರುವಂತಹ ಒಂದು ಹಿಂಸೆ, ಅವಮಾನ ಅಥವಾ ಚಿಂತೆಯಾಗಿ ಕಾಡುವುದಿಲ್ಲ. ಈ ಕಥೆಗಳಲ್ಲಿ ಮೂಲಭೂತವಾಗಿ ಗಂಡು ಹೆಣ್ಣುಗಳು ಸಮಾನಾಸಕ್ತರಾಗಿರುವುದರಿಂದ ಅವರಲ್ಲಿ (ಕೂಡುವಿಕೆಯ ಎರಡು ಮುಖ್ಯ ಸಂಗತಿಗಳ) ಗಂಡು ಹೆಣ್ಣಿನ ಸಂಬಂಧದ ಎರಡು ಮುಖ್ಯ ಪ್ರವೃತ್ತಿಗಳಾದ ಒಂದು ಗಂಡಿನ ನಿರ್ವೀರ್ಯತೆ ಮತ್ತು ಹೆಣ್ಣಿನ ಫಲಹೀನತೆ ಸಂಭವಿಸಿದಾಗ ಮುಂದಿನ ಸಂತಾನೋತ್ಪತ್ತಿ ಸಾಧ್ಯವಿಲ್ಲ ಎಂದೆನಿಸುತ್ತಾ ಹೆಣ್ಣೆ ಆಗಲಿ ಗಂಡೆ ಆಗಲಿ ಇದನ್ನು ಅಭಿವ್ಯಕ್ತಪಡಿಸುತ್ತಾರೆ. ಈ ಜನಪದ ಕೌಟುಂಬಿಕ ಪರಿಸರಗಳು ಈ ಸಂಕಷ್ಟವನ್ನು ಅರಿತುಕೊಂಡು ಅವರನ್ನು ಸಹಜವಾಗಿಯೇ ವೈವಾಹಿಕ ಸಂಬಂಧಗಳಿಂದ ಬಿಡುಗಡೆಗೊಳಿಸುವ ಪ್ರಯತ್ನ ಮಾಡುತ್ತಾರೆ. ಈ ಬಿಡುಗಡೆ ಕೌಟುಂಬಿಕ ಪರಿಸರದಲ್ಲಿ ಸಾಧ್ಯವಾಗದೆ ಇದ್ದಾಗ ಆಯಾ ಸಮುದಾಯಗಳ ಜವಾಬ್ದಾರಿಯಾಗಿ ಅವನ್ನು ಮುಕ್ತವಾಗಿ ಈ ಸಂಬಂಧಗಳ ಬಿಡುಗಡೆಗೆ ಸಾಮಾಜಿಕ ಅನುಮತಿ ನೀಡುವುದನ್ನು ಕಾಣುತ್ತೇವೆ. ಇಲ್ಲಿ ವಿಘಟನೆ ಎಂಬುದು ನಾಗರೀಕ ಸಮಾಜದ ವಿಘಟನೆಯ ಪರಿಕಲ್ಪನೆಗಿಂತ ಭಿನ್ನವಾಗಿ ಕಾಣುತ್ತದೆ ಎಂಬುದನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ.

ಎರಡನೆಯ ಹಂತದಲ್ಲಿ ಆಸ್ತಿ ಸಮೇದೊಳಗಿನ ಅಂತಸ್ತು ಅಧಿಕಾರಿಗಳು ಬಂದಾಗ ಪುರುಷ ಪ್ರಧಾನ ಸಮಾಜದ ದಬ್ಬಾಳಿಕೆಗಳು ಕಾಣಿಸಿಕೊಂಡಾಗ ಈ ಕಥೆಗಳಲ್ಲಿ ಬರುವ ಸ್ತ್ರೀ ಪಾತ್ರಗಳು ತಮ್ಮ ಚತುರತೆಯಿಂದ ಬಿಡುಗಡೆ ಪಡೆಯುವುದನ್ನು ಕಾಣುತ್ತೇವೆ. ಕೆಲವು ಕಥೆಗಳಲ್ಲಿ ಅವರು ಕೊಲೆಗೆ ಹೀಡಾಗುವುದನ್ನು ನೋಡಬಹುದು.

೨೩. ಜನಪದ ಕಥೆಗಳಲ್ಲಿ ಸಾಮಾನ್ಯವಾಗಿ ವ್ಯಕ್ತಿ ಪರಿವರ್ತಿತನಾಗಿ ಪಕ್ಷಿ ಪ್ರಾಣಿ, ಹಲ್ಲಿ, ಹಾವು, ಹುಲಿ, ನಾಯಿಯಾಗುವುದು ಕಂಡುಬರುತ್ತದೆ. ಇವು ಆ ವಾಸ್ತವವನ್ನು ಆ ಸ್ಥಿತಿಯಲ್ಲಿ ಎದುರಿಸಲು ಆಗಲ್ಲ. ಆದ್ದರಿಂದ ಅವುಗಳು ರೂಪಾಂತರಗೊಳಿಸಿ ಅವುಗಳ ಸಂಬಂಧವನ್ನು ಬೆಳೆಸುವುದು. ರೂಪಕಗಳ ಬಹುರೇಷೆ ಹಿಂಸೆಯಿರುತ್ತದೆ. ವಾಸ್ತವವನ್ನು ರೂಪಕಗಳಲ್ಲಿ ಕಟ್ಟಿ ಇಟ್ಟಿರುತ್ತಾರೆ. ಎಲ್ಲಿ ದರ್ಪ ದೌರ್ಜನ್ಯವಿರುತ್ತದೋ ಅಲ್ಲಿ ರೂಪಕಗಳು ಹಿಂದೆ ದೊಡ್ಡ ಹಿಂಸೆಯಾಗಿರುವುದನ್ನು ಇಲ್ಲಿ ವಿವರಿಸಲಾಗಿದೆ.

೨೪. ಕೊನೆಗೆ ಸುಖಾಂತವಾಗಿ ಮುಕ್ತಾಯವಾಗುವ ಜನಪದ ಕಥೆಗಳನ್ನು ಹೇಗೆ ಒಂದೇ ವರ್ಗದ ಕಥೆಗಳು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವನ್ನು ಹೊಂದುತ್ತಾ ಮೂಲಕ್ಕೆ ಧಕ್ಕೆ ಆಗದಂತೆ ರೂಪಾಂತರ ವನ್ನು ಪಡೆಯುತ್ತವೆ ಎಂಬುದನ್ನು ತಿಳಿಯಬಹುದು.

❋ ❋ ❋

# ಪರಾಮರ್ಶನ ಗ್ರಂಥಗಳು


## ಮೂಲ ಆಕರಗಳು

ಕ್ಯಾತನಳ್ಳಿ ರಾಮಣ್ಣ, ಬೀದರ ಜಿಲ್ಲೆಯ ಜನಪದ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೬

ಬಸವರಾಜ ಪೋಲಿಸ್ ಪಾಟೀಲ್, ಜಗನ್ನಾಥ ಹೆಬ್ಬಾಳೆ, ಜನಪದ ಕಥೆಗಳ ಸಂಗ್ರಹ, ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫

ಬಿರಾದಾರ ಎಂ.ಜಿ., ಲಠ್ಠೆ ಎಂ.ಎಸ್., ಹೆಂಡಿ ಬಿ.ಬಿ., ಜನಪದ ನೂರೆಂಟು ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೮.

ರಾಜಪ್ಪ ಟಿ.ಆರ್., ರಾಯಚೂರು ಜಿಲ್ಲೆಯ ಜಾನಪದ ಕಥೆಗಳು, ಪ್ರ. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೧೨

ರಾಜಪ್ಪ ಟಿ.ಎಸ್., ಬಳ್ಳಾರಿ ಜಿಲ್ಲೆಯ ಜನಪದ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೧೨

ವೀರಣ್ಣ ದಂಡೆ, ಆಯ್ದ ಜನಪದ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೧೧

## ಆಕರ ಗ್ರಂಥಗಳು

ಅನಂತರಂಗಾಚಾರ್ ಎನ್., ಪಂಪ ಭಾರತ ಗದ್ಯಾನುವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭

ಅಮರೇಶ ನುಗಡೋಣಿ, ನುಡಿವ ಬೆಡಗು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಅಮರೇಶ ನುಗಡೋಣಿ, ರಾಯಚೂರು ಜಿಲ್ಲೆಯಲ್ಲಿ ಹೈದರಬಾದ್ ಕರ್ನಾಟಕ ವಿಮೋಚನಾ ಚಳವಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಅಮರೇಶ ನುಗಡೋಣಿ, ಹೈದರಾಬಾದ್ ಕರ್ನಾಟಕ ಹಾಡುಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ಅರವಿಂದ ಮಾಲಗತ್ತಿ, ಜಾನಪದ ಅಭಿಯಾಸ, ರಾಜ್ ಪ್ರಕಾಶನ, ಮೈಸೂರು, ೨೦೦೪

ಈಶ್ವರಶಾಸ್ತ್ರಿ ಚಕ್ರಕೋಡಿ, ಮನುಸ್ಮೃತಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೯

ಒಡೆಯರ್ ಡಿ. ಹೆಗ್ಗಡೆ, ಮಹಿಳಾ (ಕನ್ನಡ) ಅಧ್ಯಯನಗಳ ಪದಕೋಶ, ಪ್ರಕಾಶಕರು ಒಡೆಯರ್ ಡಿ. ಹೆಗ್ಗಡೆ, ತೂಬಿನಕೆರೆ, ಮಂಡ್ಯ ೨೦೦೭,

ಕನ್ನಡ ಕನ್ನಡ ಶಬ್ದಕೋಶ, ಪಿ.ಸಿ.ಎಸ್. ಬುಕ್ ಡಿಪೋ ಪಬ್ಲಿಕೇಷನ್ಸ್, ಸ್ಟೇಷನ್ ರೋಡ್, ಗದಗ, ೨೦೦೭

ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಸಾಯಿಮಣಿ ಪ್ರಕಾಶನ, ಹೊಸಪೇಟೆ, ೨೦೦೯

ಕಲಬುರ್ಗಿ ಎಂ.ಎಂ., ವೀರಣ್ಣ ರಾಜೂರ (ಸಂ), ಹೊಸ ಕುಮಾರರಾಮನ ಸಾಂಗತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಕಲ್ಬುರ್ಗಿ ಎಂ.ಎಂ., ಜಾನಪದ ಸಾಹಿತ್ಯ ದರ್ಶನ, ಆಕಾಶ ಜಾನಪದ ರಜತೋತ್ಸವ ಪ್ರಕಟಣೆ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪

ಕಾಳೇಗೌಡ ನಾಗವಾರ, ಅಂಬಳಿಕೆ ಹಿರಿಯಣ್ಣ, ಜೀಶಂಪರವರ ಜಾನಪದ ಬರಹಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦

ಕ್ಯಾತನಳ್ಳಿ ರಾಮಣ್ಣ, ಫ್ಲೀಟರು ಸಂಗ್ರಹಿಸಿದ ಲಾವಣಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೧

ಕೊಪ್ಪಳ ಜಿಲ್ಲೆಯ ಹೈದರಾಬಾದ್ ವಿಮೋಚನಾ ಹೋರಾಟದ ಕಥೆ, ಪ್ರಕಾಶಕರು, ಜಿಲ್ಲಾ ಆಡಳಿತ ಕೊಪ್ಪಳ, ೧೯೯೯

ಗಂಗಾನಾಯಕ್ ಕೆ.ಎನ್. ವೃಷಭಕುಮಾರ್, ಜಾನಪದ ತಜ್ಞರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು, ೨೦೧೧

ಗವಿಸಿದ್ಧಪ್ಪ ಎಚ್. ಪಾಟೀಲ್, ಹೈದರಾಬಾದ್ ಕರ್ನಾಟಕ ಜಾನಪದ ಸಾಹಿತ್ಯ ಒಂದು ವಿವೇಚನೆ, ಸಾಹಿತ್ಯ ಸಿರಿ ಪ್ರಕಾಶನ, ಗುಲ್ಬರ್ಗಾ, ೨೦೦೩

ಗುರುಮೂರ್ತಿ ಕೆ.ಜಿ., ಜಾನಪದ ರೀತಿನೀತಿಗಳು, ಕರ್ನಾಟಕ ಜಾನಪದ ಪ್ರಸಾರ ನಿಧಿ, ಬೆಂಗಳೂರು, ೧೯೮೧

ಗೋಪಾಲರಾವ್, ಹೈದರಾಬಾದ್ ಕರ್ನಾಟಕ ಮುಕ್ತಿಸಂಘರ್ಷ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೦೧

ಡಿವಿಜಿ ಜಾನಪದವನ್ನು ಕುರಿತು, ಚೇತನ ಬುಕ್ ಹೌಸ್, ಮೈಸೂರು, ೧೯೯೬

ಚಂದ್ರಶೇಖರ ಕಂಬಾರ, 'ಕನ್ನಡ ಜಾನಪದ ವಿಶ್ವಕೋಶ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

ಚಲುವರಾಜು, ಜುಂಜುಪ್ಪ ಬುಡಕಟ್ಟು ಮಹಾಕಾವ್ಯ ಮಾಲೆ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಜಗನ್ನಾಥ ಹೆಬ್ಬಾಳೆ, ಹೈದರಾಬಾದ್ ಕರ್ನಾಟಕ ಜಾತ್ರೆಗಳು ಒಂದು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಜನಪದ ಸಾಹಿತ್ಯದಲ್ಲಿ ಕುಟುಂಬ ಮತ್ತು ದಾಂಪತ್ಯ ಜೀವನ, ಸಂಶೋಧಕರು: ಬಿ. ಗಂಗಾಧರ, ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಜಯಶ್ರೀ ಗಾಯಕ್ವಾಡ್, ಹೈದರಾಬಾದ್ ಕರ್ನಾಟಕದ ಹಳ್ಳಿ ಹೆಣ್ಣು ಮಕ್ಕಳ ಹಾಡುಗಳು, ಅಭಿಷೇಕ್ ಪ್ರಕಾಶನ, ಗುಲ್ಬರ್ಗಾ, ೨೦೦೨

ಜೀನಹಳ್ಳಿ ಸಿದ್ದಲಿಂಗಪ್ಪ, ಸ್ತ್ರೀವಾದಿ ಜನಪದ ಕಥೆಗಳು, ಪ್ರೇಮ ಪ್ರಕಾಶನ, ಜೀನಹಳ್ಳಿ, ದಾವಣಗೆರೆ, ೨೦೦೧

ಜ್ಯೋತ್ಸ್ನಾ ಕಾಮತ್, ಮಹಿಳೆ ಒಂದು ಅಧ್ಯಯನ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೯

ತಪಸ್ವಿಕುಮಾರ್, ಜಾನಪದ ಎಂದರೇನು? ಅಖಿಲ ಏಜೆನ್ಸೀಸ್, ಮೈಸೂರು, ೨೦೦೭

ದಾಸೆಗೌಡ ಜಿ.ವಿ., ಕನ್ನಡ ಐತಿಹ್ಯಗಳು, ತೇಜಸ್ವಿ ಪ್ರಕಾಶನ, ಮಂಡ್ಯ

ದೇಜಗೌ, ಜಾನಪದ ಮಹಾಸಂಪುಟ, ವಿಶ್ವಚೇತನ ಕಲಾನಿಲಯ ಕಾಳಿದಾಸ ರಸ್ತೆ, ಮೈಸೂರು, ೨೦೧೦

ದೇವೇಂದ್ರಕುಮಾರ ಹಕಾರಿ, ಜನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ನಾಗಭೂಷಣಸ್ವಾಮಿ ಓ.ಎಲ್., ವಚನ ಸಾವಿರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ನಾಗಭೂಷಣಸ್ವಾಮಿ ಓ.ಎಲ್., 'ಎ.ಕೆ. ರಾಮಾನುಜನ್ ಆಯ್ದ ಪ್ರಬಂಧಗಳು', ಮನೋಹರ ಗ್ರಂಥಮಾಲಾ, ಧಾರವಾಡ, ೨೦೧೨

ನಾವಡ ಎ.ವಿ., ಕರಾವಳಿ ಜಾನಪದ, ೭೪ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ, ೨೦೦೭

ನೇಗಿನಹಾಳ ಎಂ.ಬಿ., ಜನಪದ ನಂಬಿಕೆಗಳು, ಜಾನಪದ ಸಾಹಿತ್ಯ ದರ್ಶನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯

ಪಂಜೆ ಮಂಗೇಶರಾಯ, ಕೋಟಿಚೆನ್ನಯ್ಯ, ೧೯೫೩

ಪರಮಶಿವಯ್ಯ ಜೆ.ಶಂ., ಜನಪದ ಖಂಡ ಕಾವ್ಯಗಳು, ಸಮತಾ ಪ್ರಕಾಶನ, ಹರಪನಹಳ್ಳಿ, ೨೦೦೪

ಪರಮಶಿವಯ್ಯ ಜೆ.ಶಂ., ಕನ್ನಡ ಜನಪದ ಕಥೆಗಳು, ಚೇತನಾ ಬುಕ್ ಹೌಸ್, ಮೈಸೂರು, ೨೦೦೯

ಪರಮಶಿವಯ್ಯ ಜೆ.ಶಂ., ದಕ್ಷಿಣ ಕರ್ನಾಟಕದ ಕಾವ್ಯಪ್ರಕಾರಗಳು, ೧೯೭೯

ಪಾಟೀಲ್ ಬಿ.ಸಿ., ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಹರಿಹರ ಪ್ರಕಾಶನ, ಜವಾಹರ ರಸ್ತೆ, ಕೊಪ್ಪಳ, ೧೯೯೮

ಪ್ರಶಾಂತ ಮಾಡ್ತ, ಪದನಿಧಿ, ಕನ್ನಡ ಸಂಘ ಸಂತ ಜೋಸೆಫ್ ಕಾಲೇಜು, ಬೆಂಗಳೂರು, ೨೦೦೭

ಪುಟ್ಟಪ್ಪ ಕೆ.ವಿ. (ಪ್ರ.ಸಂ) ಮಾಳವಾಡ ಎಸ್.ಎಸ್. (ಅನು) ರಾಘವನ್ ವಿ., ಮನು ಸಂಹಿತೆ, ಯುಗಯಾತ್ರಿ ಭಾರತೀಯ ಸಂಸ್ಕೃತಿ, ಸಂಪುಟ ೧-೨, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೦

ಪೋತೆ ಎಚ್.ಟಿ., ಹೈದರಾಬಾದ್ ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು, ಅಂಬು ಪ್ರಕಾಶನ, ರಾಯಚೂರು, ೨೦೦೦

ಬಸವರಾಜ ಸಬರದ, ಬಸರಾಜ ಪೋಲೀಸ್ ಪಾಟೀಲ್, ಹೈದರಾಬಾದ್ ಕರ್ನಾಟಕ ಜಾನಪದ ಸಾಧಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೯

ಬಸವರಾಜ ಪೋಲೀಸ್ ಪಾಟೀಲ್, ಶ್ರೀಮತಿ ಶಶಿಕಲಾ ಬಿ ಪಾಟೀಲ್, ಹೈದರಾಬಾದ್ ಕರ್ನಾಟಕ ಜನಪದ ಸಾಹಿತ್ಯ, ವಿಶ್ವವಿದ್ಯಾಲಯ ಮಾರ್ಗ, ಗುಲ್ಬರ್ಗಾ ೨೦೦೧.

ಬಸವರಾಜ ಪೋಲೀಸ್ ಪಾಟೀಲ್, ಜಾನಪದ ಭಾರತಿ, ವಿದ್ಯಾಸಾಗರ ಪ್ರಕಾಶನ, ಗುಲ್ಬರ್ಗಾ, ೧೯೮೫

ಬಸವರಾಜ ವೀ. ಮೂಲಿಮನಿ, ಕೊಪ್ಪಳ ಜಿಲ್ಲೆಯ ಜನಪದ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭

ಬರಗೂರು ರಾಮಚಂದ್ರಪ್ಪ, ವಿವಿಧ ಲೇಖಕರು, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬

ಬರಗೂರು ರಾಮಚಂದ್ರಪ್ಪ, ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ಬೋರಲಿಂಗಯ್ಯ ಹಿ.ಚಿ., ವಿಸ್ಮೃತಿ ಮತ್ತು ಸಂಸ್ಕೃತಿ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು-೨೦೦೧

ಭಾಸ್ಕರ ಟಿ.ಎಂ., ಶ್ರೀ ರಾಜಶೇಖರ ಹತಗುಂದಿ, ಕಲಬುರ್ಗಿ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ-೨೦೦೫

ಮಂದಾಕಿನಿ ಪುರೋಹಿತ, ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೬.

ಮಹಾಬಲೇಶ್ವರಪ್ಪ, ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

ಮುಕುಂದ ಪ್ರಭು ಎಂ., ಕೆನರಾ ೨೦೦೦, ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

ಮಾರಿಹಾಳ ವಿ.ಜಿ., ಕರ್ನಾಟಕ ಸಂಸ್ಕೃತಿಯ ವಿಶ್ವರೂಪ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩.

ಮೃತ್ಯುಂಜಯ ಹೊರಕೇರಿ, ಬಸವಲಿಂಗ ಸೊಪ್ಪಿಮಠ, ರಾಯಚೂರು ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫

ಯಶೋಧರಶಾಸ್ತ್ರಿ, ಗುಲ್ಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು, ಜ್ಯೋತಿರ್ಮಯಿ ಪ್ರಕಾಶನ, ಗುಲ್ಬರ್ಗಾ, ೧೯೯೯

ರವಿ ಬೆಳಗೆರೆ, ಮೂಲ. ತಾಪಿ ಧರ್ಮರಾವ್, ವಿವಾಹ ಹುಟ್ಟು ಮತ್ತು ಪೂರ್ವೋತ್ತರ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೯

ರಹಮತ್ ತರೀಕೆರೆ (ಪ್ರ.ಸಂ) ಧರ್ಮ, ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ರಾ.ಗೌ., ಮಹಿಳಾ ಅಧ್ಯಯನದ ಆಯಾಮಗಳು, ಶ್ರೀಮತಿ ಯಶೋಧಾ ರಾಗೌ ಪ್ರಕಾಶನ, ಮೈಸೂರು, ೨೦೦೮

ರಾಜಶೇಖರ್ ಜಿ., ತೆಲಂಗಾಣ ರೈತ ಹೋರಾಟ, ಸಮುದಾಯ ಪ್ರಕಾಶನ ಬೆಂಗಳೂರು, ೧೯೮೧.

ರಾಜವಾಡೆ ವಿ.ಕಾ., ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ, ನವಕರ್ನಾಟಕ, ೧೯೯೩

ರಾಮಸ್ವಾಮಿ ಎಸ್.ಆರ್., ಸರ್ದಾರ ವಲ್ಲಬಾಯಿ ಪಟೇಲ್, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೦

ರಾಮನಾಥ ಎಸ್.ಆರ್., ಉತ್ತರ ಕರ್ನಾಟಕದ ಜಾನಪದ ಸೋಗುಗಳು, ಕರ್ನಾಟಕ ಸಂಶೋಧನ ಮಂಡಳಿ, ಧಾರವಾಡ, ೨೦೦೭

ರಾಮಕೃಷ್ಣಯ್ಯ ಎಂ., ಒಂದು ಊರಿನ ಜನಪದ ಕಥೆಗಳು, ಅಂಕನಹಳ್ಳಿ ಪ್ರಕಾಶನ ಕೈಲಾಂಚ ಹೋಬಳಿ, ರಾಮನಗರ, ೨೦೦೬.

ರಾಮಣ್ಣ ಹಾವಳೆ, ಹೈದರಾಬಾದ್ ಸಂಸ್ಥಾನ, ವಿಮೋಚನೆಯಲ್ಲಿ ರಾಯಚೂರು ಜಿಲ್ಲೆಯ ಹೋರಾಟ, ಶ್ರೀ ಶ್ರೀ ಪಬ್ಲಿಕೇಷನ್ಸ್, ಎಸ್.ಜಿ.ಓ. ಕಾಲೋನಿ, ರಾಯಚೂರು.

ರಾಮಚಂದ್ರಗೌಡ. ಹಿ.ಚಿ., ಜಾನಪದ ಸಾಂಸ್ಕೃತಿಕ ಆಯಾಮಗಳು, ಕನ್ನಡ ಸಾಹಿತ್ಯ ಪ್ರಾಧಿಕಾರ, ಬೆಂಗಳೂರು, ೧೯೯೭

ರಾಮಚಂದ್ರೇಗೌಡ ಹಿ.ಚಿ., ಜಾನಪದ ಸಾಂಸ್ಕೃತಿಕ ಆಯಾಮಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮

ರಾಮಚಂದ್ರೇಗೌಡ ಹಿ.ಚಿ., ಕನ್ನಡ ಜನಪದ ಕಥೆಗಳ ನೆಲೆ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೨

ರುಕ್ಮಿಣಿ ಎಂ.ಕೆ., ಜನಪದ ಕಥನಗೀತೆಗಳಲ್ಲಿ ಮಹಿಳೆ ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

ಲಕ್ಕಪ್ಪಗೌಡ ಎಚ್.ಜೆ., ಕರ್ನಾಟಕ ಬುಡಕಟ್ಟುಗಳು, ಸಂಪುಟ-೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮

ಲೀಲಾರಾಮಣ್ಣ ಎಂ., ಜನಪದ ಹೊಂಬಾಳೆ, ಎಲ್.ಆರ್. ಪಬ್ಲಿಕೇಷನ್ಸ್, ಬೃಂದಾವನ ಬಡಾವಣೆ, ಮೈಸೂರು.

ವರದರಾಜನ್ ಕೆ.ಎಂ., ಕನ್ನಡ ಜಾನಪದ ಕಥನ ಕಾವ್ಯಗಳು, ಹೆಣ್ಣು-ಗಂಡಿನ ಸಂಬಂಧ, ಸಂವಹನ ಪ್ರಕಾಶನ, ಮೈಸೂರು, ೨೦೧೨

ವಸಂತಕುಮಾರ ತಾಳ್ತಜೆ, ಸಾರಸ, ಚಿರಸಾಹಿತ್ಯ ಪ್ರಕಾಶನ, ಬೆಂಗಳೂರು, ೧೯೮೫

ವಸಂತ ಬನ್ನಾಡಿ, ಸಂಸ್ಕೃತಿ ಚಿಂತನೆ, ಅರಿವು ಬರಹ ಪ್ರಕಾಶನ, ೧೯೯೫

ವಿಜಯಶ್ರೀ ಸಬರದ, ಜಾನಪದ ಮತ್ತು ಮಹಿಳೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

ವಿಶ್ವನಾಥ ಡಿ.ಎಸ್., ವಿವಾಹ/ ವಿಚ್ಛೇದನ, ಗಣೇಶ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫

ವೀರಣ್ಣ ದಂಡೆ, ಜನಪದ ಹಾಲುಮತ, ಮಹಾಕಾವ್ಯ, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು, ೨೦೦೦

ವೀರಣ್ಣ ದಂಡೆ, ಕಲ್ಬುರ್ಗಿ ಜಿಲ್ಲೆಯ ಜನಪದ ಕಥೆಗಳ ಆಶಯ ಮತ್ತು ಮಾದರಿಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

ವೀರೇಂದ್ರ ಸಿಂಪಿ., ಸಿಂಪಿ ಲಿಂಗಣ್ಣ ಸಮಗ್ರ ಜಾನಪದ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವೆಂಕಟೇಶ ಇಂದ್ವಾಡಿ, 'ದೇವ-ದೇವಿ ಅಲೆವ ಜನರ ಆಚರಣೆಗಳ ಮುಖೇನ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ವೆಂಕಟೇಶ್ ಕೆ., ಡಾ.ಜಿ. ಸರೋಜಾ, ಹೈದರಾಬಾದಿನ ಕರ್ನಾಟಕ ವರ್ತಮಾನದ ತಲ್ಲಣಗಳು, ಪಲ್ಲವಿ ಪ್ರಕಾಶನ, ಬಳ್ಳಾರಿ, ೨೦೦೬

ವೆಂಕಟಸುಬ್ಬಯ್ಯ ಜಿ., ಇಗೋ ಕನ್ನಡ ಸಾಮಾಜಿಕ ನಿಘಂಟು, ನವಕರ್ನಾಟಕ ಪ್ರಕಾಶನ, ೧೯೯೭

ಶಂಕರನಾರಾಯಣ ತೀ.ನಂ., ಜಾನಪದ ಮೈಲಿಗಲ್ಲುಗಳು, ತೀ.ನಂ.ಶ್ರೀ ಪ್ರಕಾಶನ, ೧೯೭೦

ಶಾಂತಿನಾಥ ದಿಬ್ಬದ, ಜೈನ ಸಂಸ್ಕೃತಿ ಸಮೀಕ್ಷೆ, ರತ್ನತ್ರೆಯ ಪ್ರಕಾಶನ, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೬

ಶರೀಫಾ ಕೆ., ಇಸ್ಲಾಂ ದೃಷ್ಟಿಯಲ್ಲಿ ಸ್ತ್ರೀ (ಮಾತ್ರೋಶ್ರೀ)

ಶಾಶ್ವತಸ್ವಾಮಿ ಮುಕ್ಕುಂದಿಮಠ, ಕೃಷ್ಣ ತುಂಗೆ ನೆಲದ ಸಿರಿ, ಸುಮುಖ ಪ್ರಕಾಶನ, ಬೆಂಗಳೂರು, ೨೦೦೮

ಶಿವರಾಮ ಸಿ.ಎನ್., ಬುಡವೊಂದು ಕವಲೆಂಟು, ಅಂಕಿಅಂಶ ಪ್ರಕಾಶನ, ಹಾಸನ, ೧೯೮೮

ಶಿವಕುಮಾರ ನಾಗವಾರ, ಹಣದಿ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೦

ಶೈಲಜಾ ಹಿರೇಮಠ, ಸ್ತ್ರೀ ಕಥನ, ಭುವನ ಪ್ರಕಾಶನ, ಹೊಸಪೇಟೆ, ೨೦೦೩.

ಶೈಲಜಾ ಹಿರೇಮಠ, ಹರದೇಶಿ ನಾಗೇಶಿ ಕಲೆ ಮತ್ತು ಕಲಾವಿದರು, ಲಿಂಗಸಂಬಂಧಿ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

ಶ್ರೀಮತಿ ಎಚ್.ಎಸ್., ಸಿಮೋನ್ ದ ಬೋವಾ ದ ಸೆಕೆಂಡ್ ಸೆಕ್ಸ್, ಬರಹ ಪಬ್ಲಿಕೇಷಿಂಗ್ ಹೌಸ್, ಬೆಂಗಳೂರು, ೨೦೦೭

ಶ್ರೀಮತಿ ಎಚ್.ಎಸ್., ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ಶ್ರೀಮತಿ ಎಚ್.ಎಸ್., ಹೆಣ್ಣು-ಹೆಂಗಸು, ಬ್ಯಾಲದಕೆರೆ ಪ್ರಕಾಶನ, ಮಂಡ್ಯ, ೨೦೦೪

ಷೇಕ್ ಅಲಿ (ಸಂ), ಕರ್ನಾಟಕ ಚರಿತ್ರೆ ಮಾಲೆ-೬

ಸಂಧ್ಯಾರೆಡ್ಡಿ ಕೆ.ಆರ್., ಜಾನಪದ ಪರಿಶೀಲನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

ಸಂಧ್ಯಾರೆಡ್ಡಿ ಕೆ.ಆರ್., ಜಾನಪದ ಅಧ್ಯಯನ, ಅಲನ್ ಡಂಡೆಸ್‌ರವರ ದಿ ಸ್ಟಡಿ ಆಫ್ ಫೋಕ್‌ಲೋರ್, ವಿಸ್ತರಣೆ ಹಾಗೂ ಸಲಹಾ ಕೇಂದ್ರ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ೨೦೧೪

ಸಂಧ್ಯಾರೆಡ್ಡಿ ಕೆ.ಆರ್., ಕನ್ನಡ ಜನಪದ ಕಥೆಗಳು, ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨

ಸಯ್ಯದ್ ಅಬ್ದುಲ್ ಅಲಾ, ದಾಂಪತ್ಯ ಹಕ್ಕು ಬಾಧ್ಯತೆಗಳು, ಶಾಂತಿ ಪ್ರಕಾಶನ, ಮಂಗಳೂರು, ೧೯೮೯

ಸರಸ್ವತಿ ರಿಸಬೂಡ, (ಮೂಲ: ಮರಾಠಿ) ಛಾಯಾ ದಾತಾರ್, ಸ್ತ್ರೀ–ಪುರುಷ, ಇಳಾ ಪ್ರಕಾಶನ, ಬೆಂಗಳೂರು, ೧೯೯೨

ಸರೋಜಿನಿ ಮಹಿಷಿ, ಕರ್ನಾಟಕ ಕವಿಯತ್ರಿಯರು, ಕರ್ನಾಟಕ ಸಹಕಾರಿ ಸಂಘ, ೧೯೦೫

ಸುಬ್ಬಣ್ಣ ರೈ, ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಮಾಣಿ ಜೂನಿಯರ್ ಛೇಂಬರ್ ಮಾಣಿ, ೧೯೯೪

ಸುಮಿತ್ರಾಬಾಯಿ ಬಿ.ಎಸ್., ವಚನಗಳಲ್ಲಿ ಮಹಿಳಾ ದೃಷ್ಟಿಕೋನ, ಶತಮಾನದ ಸಂಶೋಧನೆ ಎಸ್.ಎಸ್. ತಾರಾನಾಥ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧

ಸೂಗಯ್ಯ ಹಿರೇಮಠ, ಜಾನಪದ ಸಂಸ್ಕೃತಿ, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೦೬

ಸೋಮನಾಥ ಯಾಳವಾರ, ಡಾ. ಪ್ರೇಮಾ ಸಿರ್ಶೆ, ಬೀದರ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫

ಹೈದರಾಬಾದ್ ಕರ್ನಾಟಕದಲ್ಲಿ ಸಾಮಾಜಿಕ ಚಳವಳಿಗಳು, ಸಂಶೋಧಕರು: ಸಂತೋಷ ಕುಮಾರ್ ಹೆಚ್.ಬಿ., ಕನ್ನಡ ವಿಶ್ವವಿದ್ಯಾಲಯ, ಹಂಪಿ

* * *

